# ಶ್ರೀ ಕ್ರತುಪುರಮಾಹಾತ್ಮ್ಯಮ್

(ಕನ್ನಡಾನುವಾದದೊಂದಿಗೆ)



ಶ್ರೀ ವೀರನಾರಾಯಣ

ಶ್ರೀಮತ್ ಪರಮಹಂಸಪರಿವ್ರಾಜಕಾಚಾರ್ಯವರ್ಯ
ಶ್ರೀ ಜಗದ್ಗುರು ಬದರಿಶಂಕರಾಚಾರ್ಯ ಸಂಸ್ಥಾನಂ ಶಕಟಪುರಂ ಶ್ರೀ ವಿದ್ಯಾಪೀಠಾಧೀಶ್ವರ
ಶ್ರೀ ವಿದ್ಯಾಭಿನವ ಶ್ರೀ ಶ್ರೀ ಕೃಷ್ಣಾನಂದತೀರ್ಥ ಮಹಾಸ್ವಾಮಿಗಳವರು

ಆತ್ರಿ ಗೋತ್ರಜ
ಕೃಷ್ಣಾಜಿ ಶಂಕರರಾವ ಕುಲಕರ್ಣಿ
ಬಳಗಾನೂರ ಕಂಪೌಂಡ, ದಂಬಳ ನಾಕಾದ ಹತ್ತಿರ, ಗದಗ

ಶ್ರೀ ಗಣೇಶಾಯನಮಃ । ಶ್ರೀ ಶಂಕರಃ ಶರಣಮ್ ॥
ಪ್ರಸೀದತು ಶ್ರೀ ಗುರುರಾಮಚಂದ್ರಃ ॥

# ಶ್ರೀ ಕ್ರತುಪುರಮಾಹಾತ್ಮ್ಯಮ್

(ಕನ್ನಡಾನುವಾದದೊಂದಿಗೆ)


ಅನುವಾದಕರು

ಶ್ರೀಮತ್ ಪರಮಹಂಸಪರಿವ್ರಾಜಕಾಚಾರ್ಯವರ್ಯ
ಶ್ರೀ ಜಗದ್ಗುರು ಬದರಿಶಂಕರಾಚಾರ್ಯ ಸಂಸ್ಥಾನಂ ಶಕಟಪುರಂ
ಶ್ರೀ ವಿದ್ಯಾಪೀಠಾಧೀಶ್ವರ ಶ್ರೀ ವಿದ್ಯಾಭಿನವ
ಶ್ರೀ ಶ್ರೀ ಕೃಷ್ಣಾನಂದತೀರ್ಥ ಮಹಾಸ್ವಾಮಿಗಳವರು



ಸಂಪಾದಕರು ಹಾಗೂ ಪ್ರಕಾಶಕರು

ಅತ್ರಿ *ಗೋತ್ರಜ*

**ಕೃಷ್ಣಾಜಿ ಶಂಕರರಾವ ಕುಲಕರ್ಣಿ**

ಬಳಗಾನೂರ ಕಂಪೌಂಡ, ಡಂಬಳ ನಾಕಾದ ಹತ್ತಿರ
ಗದಗ

"SRI KRATUPURA MAHATMYAM" – Kannada version translated from Sanskrit
"ಶ್ರೀ ಕ್ರತುಪುರಮಾಹಾತ್ಮ್ಯಮ್" – ಅನುವಾದಿತ ಗ್ರಂಥ
ಅನುವಾದಕರು ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಶ್ರೀ ಜಗದ್ಗುರು ಬದರಿಶಂಕರಾಚಾರ್ಯ ಸಂಸ್ಥಾನಂ ಶಕಟಪುರಂ ಶ್ರೀ ವಿದ್ಯಾಪೀಠಾಧೀಶ್ವರ ಶ್ರೀ ವಿದ್ಯಾಭಿನವ ಶ್ರೀ ಶ್ರೀ ಕೃಷ್ಣಾನಂದತೀರ್ಥ ಮಹಾಸ್ವಾಮಿಗಳವರು
ಸಂಪಾದಕರು ಮತ್ತು ಪ್ರಕಾಶಕರು . ಶ್ರೀ ಕೃಷ್ಣಾಜಿ ಶಂಕರರಾವ ಕುಲಕರ್ಣಿ, ಗದಗ (ಕ್ರತುಪುರ)

ಪುಟಗಳು XXIV + ೨೧೨ + ೧೧೬

ಪ್ರತಿಗಳು ೧,೦೦೦

ಮೊದಲ ಮುದ್ರಣ · ನವ್ಹಂಬರ್, ೧೯೯೮

© ಈ ಗ್ರಂಥದ ಎಲ್ಲ ಹಕ್ಕುಗಳು ಪ್ರಕಾಶಕರಿಂದ ಕಾದಿಡಲ್ಪಟ್ಟಿವೆ.

**Rs. 150/-**

Printed at Vikram Prakashan, Computerised Offset Printers,
K. C Road, Gadag - 582 101 Phone . 38880

.॥ ಓಂ ॥.



ದಿ. ಬ್ರ. ಶ್ರೀ ಶಂಕರಭಟ್ಟ ಹುಲಮನಿ
(ಜ್ಯೋತಿರ್ ವಿದ್ವಾನ್)

# ಮೊದಲ ಮಾತು



ಶ್ರೀ ಕೃಷ್ಣಾಜಿ ಹಂ ಕುಲಕರ್ಣಿ

ಪುರಾಣಾಂತರ್ಗತವಾದ "ಕ್ರತುಪುರ ಮಾಹಾತ್ಮ್ಯಮ್" ಗ್ರಂಥವನ್ನು ಆಸ್ತಿಕ ಶ್ರದ್ಧಾಳುಗಳ ಕೈಯಲ್ಲಿಡಲು ಸಂತೋಷವಾಗುತ್ತದೆ ಈ ಪುಸ್ತಕ ಪ್ರಕಾಶನದ ಹಿಂದೆ ಮೂರು ದಶಕಗಳ ಸುದೀರ್ಘ ಪ್ರಯತ್ನದ ಹಿನ್ನೆಲೆಯಿದೆ ಗದುಗಿನಲ್ಲಿ ನಾನು ರೆವಿನ್ಯೂ ಇನ್ಸ್‌ಪೆಕ್ಟರ್‌ನಾಗಿ ಕೆಲಸ ಮಾಡುತ್ತಿದ್ದಾಗ ನಮ್ಮ ಮನೆಯ ಪಕ್ಕದಲ್ಲಿ ಆಧ್ಯಾತ್ಮವಾದಿಗಳೂ, ದೇವೀ ಉಪಾಸಕರೂ ಹಾಗೂ ವಿದ್ವಾಂಸರೂ ಆದ ಬ್ರ. ಶ್ರೀ ಶಂಕರಭಟ್ಟ ಹುಲಮನಿಯವರು ಇರುತ್ತಿದ್ದರು. ಮೊದಲಿನಿಂದ ನಮ್ಮ ಮನೆತನದೊಡನೆ ಇದ್ದ ಆತ್ಮೀಯತೆಯಿಂದ ಅವರು ನನಗೊಂದು ಹೊಣೆಗಾರಿಕೆಯನ್ನು ಒಪ್ಪಿಸಿದರು.

ಕ್ರತುಪುರ ಮಾಹಾತ್ಮ್ಯವೆಂಬ ತತ್ತ್ವಗಭೀರವೂ, ಕಾವ್ಯಸುಭಗವೂ ಆದ ಪುರಾಣ ಪ್ರಸಂಗವು ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿದ್ದು, ಅದನ್ನು ನೀವು ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸಿದರೆ ಆಸ್ತಿಕರಿಗೆ ಪಾರಾಯಣಕ್ಕೂ, ವಿಷಯ ಪರಿಚಯಕ್ಕೂ ಸಹಾಯವಾಗುವದೆಂದು ತಿಳಿಸಿ ಈ ಕಾರ್ಯ ನಿರ್ವಹಣೆಯ ಬಗ್ಗೆ ನನ್ನನ್ನು ಅಪೇಕ್ಷಿಸಿದರು. ಅವರ ಮೇಲಿನ ಗೌರವದಿಂದ ಹಾಗೂ ಶ್ರದ್ಧೆಯಿಂದ ಆ ಕಾರ್ಯವನ್ನು ಒಪ್ಪಿಕೊಂಡ ಬಳಿಕವೇ ಆ ಕಾರ್ಯವು ಎಷ್ಟು ಕಠಿಣವಾದದ್ದೆಂಬ ಅರಿವು ಆಯಿತು. ಶ್ರೀ ಹುಲಮನಿಯವರು ನಮ್ಮ ಮನೆತನಕ್ಕೂ ಹಾಗೂ ನಾಗಾವಿ, ಬೆಳಧಡಿ, ಕಳಸಾಪೂರಗಳಿಗೂ ಇರುವ ಪುರಾತನ ಸಂಬಂಧವನ್ನು ತಿಳಿಸಿ, ಈ ಕಾರ್ಯ ಮಾಡುವುದರಿಂದ ನಮ್ಮ ಮನೆಯು ಮೊದಲಿನಂತೆ ಘನವಂತಿಕೆ ಹೊಂದುವದೆಂದು ಆಶೀರ್ವದಿಸಿದರು. ಆದರೆ ಈ ಕಾರ್ಯವನ್ನು ಪೂರ್ಣ ಮಾಡುವ ಮೊದಲೇ ಅವರು ದೈವಾಧೀನರಾದುದೊಂದು ವಿಷಾದಕರ ಘಟನೆಯು.

ಕ್ರತುಪುರ ಮಾಹಾತ್ಮ್ಯದ ಮೂಲ ಪ್ರತಿಯನ್ನು ಹುಡುಕುವದೇ ದುಸ್ತರವಾಯಿತು. ಗದುಗಿನ (ಕ್ರತುಪುರದ) ಮೂಲ ಪುರಾಣಿಕರ ಮನೆತನದವರಾದ ವೇ. ಕೃಷ್ಣಭಟ್ಟ ಹಾಗೂ ವಿರೂಪಾಕ್ಷಭಟ್ಟರಲ್ಲಿ ಈ ಪ್ರತಿ ಇರುವದು ತಿಳಿಯಿತು. ಆದರೂ ಅವರು ತಮ್ಮ ಆಸ್ತಿಯಂತಿರುವ ಆ ಪುರಾಣವನ್ನು ನನಗೆ ಕೊಡಲು ಸಹಜವಾಗಿಯೇ ಅನುಮಾನಿಸಿದರು. ಎಂಟು-ಹತ್ತು ವರ್ಷಗಳ ಸತತ ಪ್ರಯತ್ನದ ನಂತರ ನನ್ನ ಸದುದ್ದೇಶವನ್ನು ಅವರು ಒಪ್ಪಿ ಆ ಪ್ರತಿಯನ್ನು ನೀಡಿ ಉಪಕಾರ ಮಾಡಿದರು.

ಇಂಥ ಪ್ರಾಸಾದಿಕ ಸಂಸ್ಕೃತ ಕೃತಿಯನ್ನು ಅನುವಾದಿಸಲು ಬೇಕಾದ ಮೂಲಭೂತ ಅರ್ಹತೆಗಳು ನನಗಿಲ್ಲದ್ದರಿಂದ ಆ ಕಾರ್ಯಕ್ಕೆ ಸಮರ್ಥರಾದವರನ್ನು ಹುಡುಕತೊಡಗಿದೆ.

ಭಾರತದ ಅಗ್ರಪಂಕ್ತಿಯ ವಿದ್ವಾಂಸರೂ, ಪ್ರಚಂಡ ಮೇಧಾವಿಗಳೂ ಆದ ಮುಳಗುಂದದ ವಿದ್ವದ್ರತ್ನ ಶ್ರೀ ಶ್ರೀಪಾದ ದೀಕ್ಷಿತ ತಾಪಸ ಅವರಲ್ಲಿ ಈ ಬಗ್ಗೆ ಪ್ರಾರ್ಥಿಸಿದೆನು. ಅವರು ಗ್ರಂಥವನ್ನು ಅವಲೋಕಿಸಿ ಪುರಾತನವಾದ ಪುರಾಣಗ್ರಂಥವನ್ನು ಪ್ರತಿ ಮಾಡುವಾಗ ಸಂಸ್ಕೃತ ಭಾಷೆಯ ಪ್ರಭುತ್ವ ಇಲ್ಲದ ಲಿಪಿಕಾರರು ಮಾಡಿದ ಅನೇಕ ತಪ್ಪುಗಳನ್ನು ತಿದ್ದಿಕೊಟ್ಟರು. ಆದರೆ ಕನ್ನಡ-ಸಂಸ್ಕೃತ ಭಾಷೆಗಳೆರಡರಲ್ಲೂ ಪ್ರಭುತ್ವವಿರುವಂಥವರಿಂದ ಈ ಕಾರ್ಯ ಮಾಡಿಸಲು ಸೂಚಿಸಿದರಲ್ಲದೇ ಅಂಥವರ ಹೆಸರನ್ನೂ ತಿಳಿಸಿದರು.

ಅಂಥ ಒಬ್ಬಿಬ್ಬ ವಿದ್ವಾಂಸರಿಗೆ ಈ ಕಾರ್ಯವನ್ನು ಒಪ್ಪಿಸಿದಾಗ ಅವರ ಸಾಂಸಾರಿಕ ತಾಪತ್ರಯಗಳಿಂದ ನಾಲ್ಕಾರು ವರ್ಷಗಳಾದರೂ ಕಾರ್ಯವಾಗಲಿಲ್ಲ ಈ ಮಧ್ಯದಲ್ಲಿ ನನ್ನ ಸುದೈವದಿಂದ ಲಕ್ಷ್ಮೇಶ್ವರದಲ್ಲಿ ಸಂಸ್ಕೃತ ಶಿಕ್ಷಕರಾಗಿದ್ದ ಶ್ರೀ ಎಸ್ ಎನ್ ಕುಲಕರ್ಣಿಯವರಲ್ಲೂ ಕ್ರತುಪುರ ಮಾಹಾತ್ಮ್ಯದ ಒಂದು ಪ್ರತಿ ಇರುವದು ತಿಳಿಯಿತು ಅವರ ಸಹಕಾರದಿಂದ ಕನ್ನಡ ಅನುವಾದ ಕಾರ್ಯವನ್ನು ನಾವೇ ಮಾಡಲು ಆರಂಭಿಸಿದರೂ ಶ್ರೀ ಕುಲಕರ್ಣಿ (ಕೋಟುಮಚಗಿ ಕುಲಕರ್ಣಿಯವರು)ಯವರಿಗೆ ಬಂದೊದಗಿದ ಅಡಚಣೆಗಳಿಂದ ಕಾರ್ಯವು ಮುಂದೆ ಸಾಗಲಿಲ್ಲ

ನನಗೆ ಆದೇಶಿಸಿದ ವೇ ಹುಲಮನಿಯವರ ಆಜ್ಞಾಪ್ರಭಾವ, ನನ್ನಲ್ಲಿದ್ದ ಶ್ರದ್ಧೆ, ಕ್ರತುಪುರಾಧಿಷ್ಠಿತ ದೇವತಾಕೃಪೆಗಳೆಲ್ಲ ಫಲಿಸಿ ಧಾರವಾಡದ ಶ್ರೀ ಶಂಕರಾಚಾರ್ಯ ಸಂಸ್ಕೃತ ಪಾಠಶಾಲೆಯಲ್ಲಿ ಶಾಸ್ತ್ರ ಶ್ರವಣ ಮಾಡುತ್ತಿದ್ದ ಶಕಟಪುರ – ಬದರೀ ಶಂಕರಾಚಾರ್ಯ ಜಗದ್ಗುರು ಶ್ರೀ ಕೃಷ್ಣಾನಂದತೀರ್ಥ ಮಹಾಸ್ವಾಮಿಗಳ ದರ್ಶನ ನನಗಾಯಿತು ಅವರಲ್ಲಿ ನನ್ನ ಆಶಯವನ್ನು ನಿವೇದಿಸಿ ಮಾರ್ಗದರ್ಶನ ಕೇಳಲಾಗಿ ನಮ್ಮೆಲ್ಲರ ಪುಣ್ಯ ವಿಶೇಷದಿಂದ ತಾವೇ ಆ ಕಾರ್ಯವನ್ನು ಪೂರೈಸಿಕೊಡುವ ಅನುಗ್ರಹ ಮಾಡಿದರು.

ಕ್ರತುಪುರ ಮಾಹಾತ್ಮ್ಯದಲ್ಲಿ ವರ್ಣಿತವಾದ ಕಪೋತಗಿರಿ (ಕಪ್ಪತಗುಡ್ಡ)ವನ್ನು ಶ್ರೀ ಶ್ರೀಗಳವರು ಸ್ವತಃ ಸಂದರ್ಶಿಸಿ ತಮ್ಮ ಪ್ರಾಸಾದಿಕ ಶೈಲಿಯಲ್ಲಿ ಸಂಪೂರ್ಣ ಮಾಹಾತ್ಮ್ಯವನ್ನು ಅನುವಾದಿಸಿಕೊಟ್ಟಿರುವದು ನನ್ನ ಅಪೂರ್ವ ಸೌಭಾಗ್ಯವೇ ಸರಿ !

ಆಮೂಲಾಗ್ರವಾಗಿ ಪರಿಶೀಲಿಸಿ ಸಲಹೆ ಸೂಚನೆಗಳನ್ನಿತ್ತ ಬ್ರಹ್ಮಶ್ರೀ ವಿದ್ವದ್ರತ್ನ ಶ್ರೀ ಶ್ರೀಪಾದ ದೀಕ್ಷಿತರಿಗೆ ಹಾಗೂ ಪಾಂಡಿತ್ಯಪೂರ್ಣವಾದ ಉಪೋದ್ಘಾತವನ್ನು (ಮುನ್ನುಡಿ) ಬರೆದುಕೊಟ್ಟ ಬ್ರಹ್ಮಶ್ರೀ ಪಂಡಿತಾವತಂಸ ಶ್ರೀ ಬಾಲಚಂದ್ರ ಶಾಸ್ತ್ರಿಗಳಿಗೆ ಸಾಷ್ಟಾಂಗ ಪ್ರಣಾಮಪೂರ್ವಕ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ. ಇದಲ್ಲದೇ ಮೂಲ ಪ್ರತಿಗಳಲ್ಲಿ ಸಂಸ್ಕೃತ ಶ್ಲೋಕಗಳಲ್ಲಿ ಇದ್ದ ದೋಷಗಳನ್ನು ಸರಿಪಡಿಸಿ ಪ್ರಥಮ ಪ್ರತಿಯ ತಪಾಸಣೆ, ಕ್ಲಿಷ್ಟ ಶಬ್ದಗಳ ವಿವರಣೆ ಅನುಬಂಧಾದಿಗಳನ್ನು ಮಾಡಿಕೊಟ್ಟ ಬ್ರಹ್ಮಶ್ರೀ ನ್ಯಾಯಚೂಡಾಮಣಿ ಶ್ರೀ ರಾಜರಾಜೇಶ್ವರ ಶಾಸ್ತ್ರಿಗಳಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಒಂದು ಲಕ್ಷ ರೂಪಾಯಿ ವೆಚ್ಚದ ಈ ಪುಸ್ತಕ ಮುದ್ರಣ ಕಾರ್ಯ ಮತ್ತೊಂದು ಸಾಹಸವೇ ಆಯಿತು ನನ್ನ ವಿನಂತಿಯನ್ನು ಮನ್ನಿಸಿ ನನ್ನ ಸಹಾಯಕ್ಕೆ ಅನೇಕ ಸಮಾಜ ಬಾಂಧವರು ಬಂದರು ಅವರೆಲ್ಲರ ಸಹಕಾರದಿಂದ ಮುದ್ರಣಕ್ಕೆ ಸಿದ್ಧತೆ ಮಾಡಿಕೊಂಡು ಗದುಗಿನ ವಿಕ್ರಮ ಕಂಪ್ಯೂಟರ್ಸ್ ಅವರನ್ನು ಸಂಪರ್ಕಿಸಿದೆ. ಸ್ವತಃ ಇಲ್ಲಿಯ (ಕ್ರತುಪುರ) ವೈದಿಕ ಮನೆತನದವರೇ ಆದ ಹರಿದಾಸ ಇವರು ಉತ್ತಮವಾಗಿ ಇದನ್ನು ಮುದ್ರಿಸಿಕೊಟ್ಟಿದ್ದಾರೆ ಅವರ ಉಪಕಾರವೂ ಸ್ಮರಣೀಯವಾಗಿದೆ. ಮುದ್ರಣಕ್ಕೆ ಆರ್ಥಿಕ ಸಹಾಯ ಮಾಡಿದ ಎಲ್ಲ ಸ್ನೇಹಿತರಿಗೂ ನಾನು ಋಣಿಯಾಗಿದ್ದೇನೆ

ನನ್ನಿಂದ ಇಂಥ ಮಹತ್ಕಾರ್ಯವೊಂದು ಘಟಿಸಿರುವುದರ ಹಿಂದಿರುವ ದೈವಿ ಸಂಕಲ್ಪ, ಸಹಾಯಗಳನ್ನು ಸ್ಮರಿಸುವುದಕ್ಕಾಗಿಯೇ ಈ ಹಿನ್ನೆಲೆಯನ್ನು ತಿಳಿಸಬಯಸಿದ್ದೇನೆ. ಶ್ರೀ ದೇವರ ಈ ಅಗಾಧ ಅನುಗ್ರಹವನ್ನು ಸದಾ ಸ್ಮರಿಸುತ್ತ ಈ ಅಪೂರ್ವ ಕೃತಿಯನ್ನು ಜನತೆಗೆ ಅರ್ಪಿಸುತ್ತಿದ್ದೇನೆ

ಇದರ ನಿತ್ಯ ಪಠಣ, ಪಾರಾಯಣಗಳಿಂದ ಜನತೆ ಕೃತಾರ್ಥರಾಗಲೆಂದು ಹಾರೈಸುತ್ತ, ನಾನು ದಿ. ಹುಲಮನಿಯವರಿಗೆ ಕೊಟ್ಟ ಮಾತನ್ನು ಕಾರ್ಯದಲ್ಲಿ ಪೂರ್ಣಗೊಳಿಸಿದ ಸಮಾಧಾನವೂ ನನಗೆ ಈಗ ಆಯಿತು

ಹರಿಹರರ ಅಭೇದವನ್ನು ಮಾರ್ಮಿಕವಾಗಿ ತಿಳಿಸಿ ಭಕ್ತಜನತೆಗೆ ಪರಮಾನುಗ್ರಾಹಕವಾಗಿರುವ ಈ ಕೃತಿಯು ಎಲ್ಲರಿಗೂ ಮಂಗಲವನ್ನುಂಟು ಮಾಡಲೆಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

**ಕೃಷ್ಣಾಜಿ ಶಂಕರರಾವ ಕುಲಕರ್ಣಿ**

(ಕೆ. ಎಸ್. ಕುಲಕರ್ಣಿ)

(ಕಳಸಾಪೂರ, ನಾಗಾವಿ, ಬೆಳಧಡಿ
ಗ್ರಾಮಗಳ ಅನುವಂಶಿಕ ಹಕ್ಕುದಾರರು)



ಬ್ರಹ್ಮಶ್ರೀ ಪಂ
ಭಾಲಚಂದ್ರ ಶಾಸ್ತ್ರಿಗಳು

|| ಶ್ರೀಃ ||

|| ಶ್ರೀ ಶಂಕರಃ ಶರಣಮ್ ||

# ಮುನ್ನುಡಿ

*ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ ।*
*ಶಿವಸ್ಯ ಹೃದಯಂ ವಿಷ್ಣುಃ ವಿಷ್ಣೋಶ್ಚ ಹೃದಯಂಶಿವಃ ।*
*ಯಥಾಂತರಂ ನ ಪಶ್ಯಾಮಿ ತಥಾ ಮೇ ಸಕ್ತಿರಾಯುಷಿ॥*

ಭಾರತದಲ್ಲಿಯ ಕ್ಷೇತ್ರ ತೀರ್ಥಗಳು ವಿಂಧ್ಯ ದಕ್ಷಿಣೋತ್ತರ ಭಾಗಗಳಲ್ಲಿ ವಿಶೇಷವಾಗಿರುವವೆಂಬುದು ಇತಿಹಾಸ ಪುರಾಣಾದಿಗಳಿಂದ ಪ್ರಸಿದ್ಧವಾಗಿದೆ ಆ-ಆ-ದೇಶಗಳವರಿಗೆ ದೂರದಲ್ಲಿದ್ದ ಕ್ಷೇತ್ರಗಳ ದರ್ಶನವು ದುಸ್ಸಾಧ್ಯವಾಗಿರುವದರಿಂದ ಮಹರ್ಷಿಗಳು ತಮ್ಮ ಆಶ್ರಮಗಳನ್ನು ಅಲ್ಲಲ್ಲಿ ನಿರ್ಮಿಸಿ ತಪಸ್ಸನ್ನು ಮಾಡಿ ಕ್ಷೇತ್ರ-ತೀರ್ಥಗಳನ್ನು ವಿಶೇಷವಾಗಿ ಮಾಡಿದ್ದಾರೆ

ತೀರ್ಥ-ಶಬ್ದಕ್ಕೆ ಸಂಸ್ಕೃತದಲ್ಲಿ "ಋಷಿಜುಷ್ಟೇ ಜಲೇ" ಋಷಿಗಳಿಂದ ಸೇವಿಸಲ್ಪಟ್ಟ ಜಲಾಶಯ ಎನ್ನುವರು. ಸಾಮಾನ್ಯವಾಗಿ ಋಷಿಗಳು ಯಾವ ಜಲಾಶಯವನ್ನು ಉಪಯೋಗಿಸುವರೋ ಅವೆಲ್ಲವೂ ವಿಶೇಷ ಸಾನ್ನಿಧ್ಯಕಾರಕ ತೀರ್ಥಗಳಾಗಿವೆ.

ಕರ್ನಾಟಕದಲ್ಲಿ ಬಾದಾಮಿ, ಬೀದರ, ಗೋಕರ್ಣ, ಕೊಲ್ಲೂರು ಮುಂತಾದವುಗಳಲ್ಲಿ (ಪ್ರಾರಂಭದಲ್ಲಿ) ಹಿಂದಕ್ಕೆ ಲಕ್ಷಾವಧಿ ತೀರ್ಥಗಳು ಇದ್ದವೆಂದು ಬ್ರಹ್ಮಾಂಡಾದಿ ಪುರಾಣಗಳಲ್ಲಿ ಉಕ್ತವಾಗಿದೆ. ಅವುಗಳಲ್ಲಿ ಈಗಲೂ ಕೆಲವು ಪ್ರಸಿದ್ಧವಿವೆ. ಶ್ರೀರಾಮೇಶ್ವರದಲ್ಲಿಯ ಇಪ್ಪತ್ತಾಲ್ಕು ತೀರ್ಥಗಳಲ್ಲಿ ಮುಖ್ಯವಾಗಿ ಕೋಟಿ ತೀರ್ಥವನ್ನು ಗಂಗಾಜಲದಂತೆ ಪೂಜಿಸುತ್ತಾರೆ. ಅದರಂತೆ- ಪ್ರಸಿದ್ಧವಾದ ಕ್ರತುಪುರದಲ್ಲಿಯೂ ನಾರಾಯಣತೀರ್ಥ (ನೃಸಿಂಹತೀರ್ಥ), ಶಿವತೀರ್ಥ ಮುಂತಾದವುಗಳು ಸಾಕ್ಷಾತ್ ಶಿವ ಹಾಗೂ ವಿಷ್ಣು ಇವರಿಂದ ಪ್ರಕಟವಾಗಿ ಅನೇಕ ಋಷಿಗಳು ಅಲ್ಲಿ ತಪಸ್ಸು ಮಾಡಿದ್ದರಿಂದ ಅಲ್ಲಿ ಸ್ನಾನ-ದಾನಾದಿಗಳನ್ನು ಮಾಡುವವದಲ್ಲಿ, ಪಾಪಕ್ಷಯವಾಗಿ ಪುಣ್ಯ ವಿಶೇಷ ಪ್ರಾಪ್ತಿಯಾಗುವದನ್ನು ಈ ಪುರಾಣದಲ್ಲಿ ವರ್ಣಿಸಿದ್ದಾರೆ.

ಆದರೆ ಬರುಬರುತ್ತ ಕಲಿಯ ಪ್ರಭಾವದಿಂದಲೂ, ಪರಕೀಯರ ಆಕ್ರಮಣಾದಿಗಳಿಂದಲೂ ಎಷ್ಟೋ ತೀರ್ಥಕ್ಷೇತ್ರಗಳು ಹಾಳು ಮಾಡಲ್ಪಟ್ಟಿದ್ದಲ್ಲದೇ ಪ್ರಸಿದ್ಧ ದೇವಾಲಯಗಳನ್ನು ಹಾಳುಮಾಡಿದ್ದು ಇತಿಹಾಸದಿಂದ ತಿಳಿದು ಬರುತ್ತದೆ. ಇದರಿಂದ ತೀರ್ಥಗಳಲ್ಲಿಯ ಸಾನ್ನಿಧ್ಯ ಕಡಿಮೆಯಾಗಿ ಮೊದಲಿನಂತೆ ವಿಶೇಷ ಫಲಪ್ರದವಾಗಲಾರವು. ದೊಡ್ಡ ದೊಡ್ಡ ಸತ್ಪುರುಷರು ಹಾಗೂ ಋಷಿಪ್ರಿಯರಾದ ಸದಾಚಾರಿಗಳು ಕೂಡ ಕ್ರಮೇಣ ಕಡಿಮೆಯಾಗುತ್ತಿರುವ ಮೂಲಕ ಅವರ ಸಾನ್ನಿಧ್ಯದಿಂದ ಉಂಟಾಗುವ ತೀರ್ಥಪಾವನತ್ವವು ಇಲ್ಲದಂತಾಗಿ ಶ್ರೀಮದ್ಭಾಗವತದಲ್ಲಿ ಮಹಾಭಾಗವದ್ಭಕ್ತರನ್ನು ವರ್ಣಿಸುವಾಗ "ತೀರ್ಥೀಕುರ್ವಂತಿ ತೀರ್ಥಾನಿ ಹೃದಿಸ್ಥೇನ ಗದಾಭೃತಾ" ಎಂದು ಹೇಳಿದ್ದಾರೆ.

"ನದಿಗಳು, ಅನೇಕ ಬೇರೆ, ತೀರ್ಥಗಳು ಸತ್ಪುರುಷರ ಆಗಮನವನ್ನು ಪ್ರತೀಕ್ಷಿಸುತ್ತಿರುತ್ತವೆ" ಎಂದು ಧರ್ಮಶಾಸ್ತ್ರ ಗ್ರಂಥಗಳಲ್ಲಿ ಹೇಳಿದ್ದಾರೆ. ಆದರೆ ಈಗಲೂ

ಕೂಡ ಕೆಲವು ಮಹಾನದಿಗಳ ಸಂಗಮದಲ್ಲಿ ಹಾಗೂ ಮಹಾಕ್ಷೇತ್ರಗಳಲ್ಲಿ ಸ್ನಾನ, ದಾನ, ದೇವತಾರಾಧನೆ ಮಾಡುವದಾದಲ್ಲಿ ಭೂತ ಪ್ರೇತ, ಪಿಶಾಚ ಬಾಧೆಗಳು ಹಾಗೂ ಶತ್ರು ಪೀಡಾದಿಗಳು ನಿವಾರಿತವಾಗುವದು ಅನುಭವಸಿದ್ಧವಾಗಿದೆ

ಈ ಕ್ರತುಪುರ ಮಾಹಾತ್ಮ್ಯದಲ್ಲಿ ಒಂದೇ ಕಡೆಗೆ ಪರಮೇಶ್ವರ ಹಾಗೂ ಮಹಾವಿಷ್ಣು ಇವರ ಸಾನ್ನಿಧ್ಯವಿರುವದರಿಂದ ಅವರಿಬ್ಬರಲ್ಲಿಯೂ ಅವರವರ ಉಪಾಸಕರು (ಸ್ವಲ್ಪವೂ) ಕಿಂಚಿತ್ತೂ ಭೇದ ಬುದ್ಧಿಯನ್ನು ಮಾಡಬಾರದೆಂದೂ ಮಾಡುವವರಿಗೆ ಇಹಲೋಕ ಪರಲೋಕಗಳಲ್ಲಿ ಹೀನಗತಿಯಾಗುವದೆಂದೂ ಅನೇಕ-ಕಡೆಗೆ ಪ್ರಸಂಗಾನುಪ್ರಸಂಗಗಳಲ್ಲಿ ಹೇಳಲಾಗಿದೆ

ಆದ್ದರಿಂದಲೇ ದೊಡ್ಡ-ದೊಡ್ಡ ವಿದ್ವಾಂಸರು ಹಾಗೂ ಅವತಾರಿ ಪುರುಷರು ವಿಷ್ಣುಸ್ತೋತ್ರಗಳಿಗೆ ಶಿವಪರವಾಗಿಯೂ-ರುದ್ರಾಧ್ಯಾಯ ಮಹಿಮ್ನಸ್ತೋತ್ರಾದಿಗಳಿಗೆ ವಿಷ್ಣುಪರವಾಗಿಯೂ ಸರಿಯಾಗಿ ಪ್ರತಿಪಾದಿಸಿದ್ದಾರೆ

*''ಭಿನ್ನರುಚಿರ್ಹಿ ಲೋಕಃ'' ರುಚೀನಾಂ ವೈಚಿತ್ರ್ಯಾತ್ ಋಜು, ಕುಟಿಲ,*
*ನಾನಾಪಥಜುಷಾಂ ನೃಣಾಮೇಕೋ ಗಮ್ಯಃ ತ್ವಮಸಿ ಪಯಸಾ*
*-ಮರ್ಣವ ಇವ''*

ಎಂಬಂತೆ ಉಪಾಸಕರು ಬೇರೇ ಬೇರೇ ರೂಪದಿಂದ ಪರಮಾತ್ಮನನ್ನು ಆರಾಧಿಸುತ್ತಿರುವದರಿಂದ ಕಿಂಚಿದ್ಭೇದ ಬುದ್ಧಿಯು ಬರುವದು ಸ್ವಾಭಾವಿಕವಾಗಿದೆ.

ಪರಮ ಮಹೇಶ್ವರರಾದ ಶ್ರೀ ಅಪ್ಪಯ್ಯ ದೀಕ್ಷಿತರು
*''ಪುರಾರೌಚ, ಮುರಾರೌಚ ನ ಭೇದಃ ಪಾರಮಾರ್ಥಿಕಃ ತಥಾಪಿ ಮಾಮಕೀ ಭಕ್ತಿಃ ಚಂದ್ರಚೂಡೇ ಪ್ರಧಾವತಿ'' ಎಂದೂ ಶ್ರೀಭರ್ತೃಹರಿನಾಥರು- ಮಹೇಶ್ವರೇ ವಾ ಜಗತಾಮಧೀಶ್ವರೇ ಜನಾರ್ದನೇ ವಾ ಜಗದಂತರಾತ್ಮನಿ। ನ ವಸ್ತುಭೇದಪ್ರತಿಪತ್ತಿರಸ್ತಿಮೇ ತಥಾಪಿ ಭಕ್ತಿಸ್ತರುಣೇಂದುಶೇಖರೇ''*

ಎಂದು ಹೇಳುವಾಗ ತಮ್ಮ ಅಭಿರುಚಿಯು ಪರಮೇಶ್ವರ ಸ್ವರೂಪದಲ್ಲಿ ಜನ್ಮಾಂತರ ಸಂಸ್ಕಾರಗಳಿಂದ ಸ್ವಾಭಾವಿಕವಾಗಿ ಉತ್ಪನ್ನವಾಗಿದ್ದರೂ ವಾಸ್ತವಿಕವಾದ ಭೇದವು ಇಬ್ಬರಲ್ಲಿಯೂ ಇಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.

ಇದರಂತೆ ಅದ್ವೈತ ಸಿದ್ಧಿಯನ್ನು ಮಾಡಿದ ಶ್ರೀ ಮಧುಸೂದನ ಸರಸ್ವತೀ ಸ್ವಾಮಿಗಳು ''ನೀಲಂ ಮಹೋ ಧಾವತಿ'' ಎಂದು ಶ್ರೀಕೃಷ್ಣ ರೂಪದಲ್ಲಿಯೇ ಅಭಿರುಚಿಯನ್ನು ತೋರಿಸಿದ್ದಾರೆ.

ಈಚೆಗೆ ನೂರಾರು ವರ್ಷಗಳ ಹಿಂದೆ ಈ ಉತ್ತರ ಕರ್ನಾಟಕದಲ್ಲಿ ಪ್ರಸಿದ್ಧರಾದ ಶಿವಾಂಶ ಸಂಭೂತರಾದ ಶ್ರೀ ಚಿದಂಬರ ಮಹಾಸ್ವಾಮಿಗಳು ಕೆಲವು ಭಕ್ತರಿಗೆ ಶಿವರೂಪದಿಂದಲೂ, ಕೆಲವರಿಗೆ ಶ್ರೀ ಕೃಷ್ಣಾದಿ ರೂಪದಿಂದಲೂ ದರ್ಶನ ಮಾಡಿಸಿದ್ದು ಆ ಭಕ್ತರ ಸಾಕ್ಷಾತ್ ವಚನಗಳಿಂದ ತಿಳಿದು ಬರುತ್ತದೆ.

ಶ್ರೀ ಶಂಕರಭಗವತ್ಪಾದಾಚಾರ್ಯರು ತಮ್ಮ ಸ್ತೋತ್ರಾದಿ ಪ್ರಕರಣ ಗ್ರಂಥಗಳಲ್ಲಿ ಹಾಗೂ ಗೀತಾಭಾಷ್ಯಾದಿಗಳಲ್ಲಿ- ಶ್ರೀ ಮಹಾವಿಷ್ಣು ಹಾಗೂ ಪರಮೇಶ್ವರರಲ್ಲಿ ಭಿನ್ನವಾದ

ಪಾರಮಾರ್ಥಿಕ ಸತ್ಯತ್ವವು ಇರದೇ ಮೂಲ ಬ್ರಹ್ಮ ಚೈತನ್ಯ ಸ್ವರೂಪವೇ ಅವಿದ್ಯಾ ಮೂಲಕವಾಗಿ ಜೀವರಾಶಿಗಳ ಅದೃಷ್ಟಾನುಸಾರ ಸೃಷ್ಟಿ–ಸ್ಥಿತಿಗಳಿಗಾಗಿ ಭಿನ್ನಭಿನ್ನವಾದ ಮಾಯಿಕ–ರೂಪಗಳ ಆವಿರ್ಭಾವಗಳನ್ನು ಹೊಂದುತ್ತದೆ ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಇದು ಯುಕ್ತಿಯಿಂದಲೂ ಸಿದ್ಧವಾಗುತ್ತದೆ. ಜಗತ್ತಿಗೆ ಕಾರಣವಾದ ವಸ್ತುವೆಂದರೆ ಆ ವಸ್ತುವೂ ಒಂದೇ ಇರಬೇಕಾದದ್ದು, ಸಹಜ ಎರಡು ಮೂರು ದೇವತೆಗಳನ್ನು ಕಾರಣೀಭೂತರೆಂದು ಒಪ್ಪಿದಲ್ಲಿ ಅನೇಕ ರಾಜರು ಒಂದೇ ದೇಶವನ್ನು ಆಳುವಾಗಿನ ಅವ್ಯವಸ್ಥೆಯು ಅರ್ಥಾತ್ ಸಿದ್ಧವೇ ಆಗುತ್ತದೆ

*''ರಾಜ ದ್ವಯಂ ದೇಶವಿನಾಶ ಹೇತುಃ''*

ಎಂಬಂತೆ ಎಲ್ಲ ಕಡೆಗೂ ಹಾನಿಯಾಗುವದು. ಭಗವದ್ಗೀತೆಯಲ್ಲಿ ಸಂಭವಾಮ್ಯಾತ್ಮಮಾಯಯಾ ಎಂದು ಹೇಳಿದ್ದು ಭಗವಂತನ ಅನೇಕ ಅವತಾರಗಳು (ನರ, ಪಶು, ಜಲಚರ ಮುಂತಾದ ವ್ಯೂಹ ಅಂಶಾವತಾರಗಳು) ಬೇರೆ, ಬೇರೆ ರೂಪಗಳನ್ನು ತತ್ಕಾಲದಲ್ಲಿ ಹೊಂದಿ ಆ ಕಾರ್ಯ ಸಮಾಪ್ತಿಯ ನಂತರ ಮೂಲ ರೂಪವನ್ನು ಹೊಂದುವವೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ

ಶ್ರೀಕೃಷ್ಣ ಪರಮಾತ್ಮನು ''ಅಹಂ ಸರ್ವಸ್ಯ ಪ್ರಭವಃ'' ಎಲ್ಲಕ್ಕೂ ನಾನೇ ಕಾರಣನೆಂದು ಹೇಳಿ ''ಈಶ್ವರಃ ಸರ್ವಭೂತಾನಾಂ'', ''ತಮೇವ ಶರಣಂ ಗಚ್ಛ'' ಎಂದು ತನಗಿಂತಲೂ ಭಿನ್ನವಾದ ಈಶ್ವರನಿದ್ದಾನೆಂದು ಅರ್ಜುನನಿಗೆ ಬೇರೆ ಬೇರೆ ಕಡೆಗೆ ಉಪದೇಶ ಮಾಡಿದ್ದು ಅವರಿಬ್ಬರಲ್ಲಿ ಭೇದವನ್ನು ಹೇಳಿದಾಗ ಆ ವಾಕ್ಯಗಳು ವಿರುದ್ಧವಾಗುವವು. ಕಾರಣ ದೇವತೆಗಳಲ್ಲಿ ಪ್ರಧಾನರಾದ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಕಿಂಚಿತ್ತೂ ಕೂಡ ಭೇದವನ್ನು ಎಣಿಸಬಾರದೆಂದೂ ಹಾಗೆ ಮಾಡಿದಲ್ಲಿ ಅವರ ಪುಣ್ಯಗಳು ನಶಿಸಿ ಪಾಪವನ್ನೇ ಗಳಿಸಿದಂತಾಗುತ್ತದೆ ಎಂಬ ತಾತ್ಪರ್ಯವು ಈ ಕ್ರತುಪುರ ಮಾಹಾತ್ಮ್ಯದಲ್ಲಿ ಅಲ್ಲಲ್ಲಿ ಸಂದರ್ಭಾನುಸಾರವಾಗಿ ಅನೇಕ ದೈತ್ಯರ ನಾಶ, ಭಕ್ತರಿಗೆ ಉಪದೇಶ ಮಾಡುವ ಸಂದರ್ಭದಲ್ಲಿ ನಿರೂಪಿತವಾಗಿದೆ.

ಇಂಥ ಮಾಹಾತ್ಮ್ಯವು ಅನೇಕ ವರ್ಷಗಳಿಂದ ಪ್ರಕಟವಾಗದೇ ಇದ್ದ ಮೂಲಕ ಶ್ರೀ ವೀರನಾರಾಯಣ ಹಾಗೂ ಶ್ರೀ ತ್ರಿಕೂಟೇಶ್ವರ ಮಂದಿರಗಳಲ್ಲಿ ವಾರ್ಷಿಕೋತ್ಸವ, ಅನುಷ್ಠಾನಗಳು, ಉಪಾಸನೆಗಳು ನಡೆಯಲು ನ್ಯೂನತೆಯಾಗಿತ್ತು. ಈಗ ಶ್ರೀಮಾನ್ ಕೃಷ್ಣಾಜಿ. ಶಂಕರ ಕುಲಕರ್ಣಿ (ಕಳಸಾಪುರ–ನಾಗಾವಿ ಹಾಗೂ ಬೆಳಧಡಿ ಈ ಊರುಗಳ ಮೂಲ ಕುಲಕರ್ಣಿಕಿಯ ಹಕ್ಕುದಾರರು) ಇವರು ವಿಶೇಷ ಆಸ್ಥೆ ವಹಿಸಿ ಅವರ ಗುರುಗಳ ಅಪ್ಪಣೆಯನ್ನು ನಡೆಯಿಸಬೇಕೆಂದು ಇದರಿಂದ ಅನೇಕ ಭಕ್ತರಿಗೆ ಪಾರಮಾರ್ಥಿಕ ಸಾಧನೆಯಾಗುವದೆಂಬ ಉದ್ದೇಶದಿಂದಲೂ ಅನೇಕ ವರ್ಷ ಶ್ರಮಪಟ್ಟು ವಿದ್ವಾಂಸರೂ ಹಾಗೂ ಜಗದ್ಗುರು ಮಹಾಸ್ವಾಮಿಗಳನ್ನು ಆಶ್ರಯಿಸಿ ಅವರ ಸಹಾಯದಿಂದ ಈ ಉತ್ತಮ ರತ್ನವನ್ನು ಸಮುದ್ರದಿಂದ ತೆಗೆದಂತೆ ಮಾಡಿದ್ದಾರೆ. ಇದರ ಉಪಯೋಗವನ್ನು ಸಾಧಕರು ಪಾರಾಯಣ ಜಪಾದಿಗಳಿಂದ ಯಥಾಶಕ್ತಿ ಮಾಡಿಕೊಂಡು ಕೃತಾರ್ಥರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಶ್ರೀ ಶಕೆ ೧೯೨೦
ಬಹುಧಾನ್ಯ ನಾಮಸಂವತ್ಸರ
ವಿಜಯಾದಶಮಿ

ಭಾಲಚಂದ್ರಶಾಸ್ತ್ರೀ ಉಪ್ಪಿನ ಬೆಟಗೇರಿ
ಶ್ರೀಮಜ್ಜಗದ್ಗುರು ಶಂಕರಾಚಾರ್ಯ
ಸಂಸ್ಕೃತ ಪಾಠಶಾಲಾ ಧಾರವಾಡ

|| ವೃಷಾಕಪಿಭ್ಯಾಂ ನಮಃ ||



विश्वाद्यं विश्ववन्द्यं निखिलभयहरं पञ्चवक्त्रं नमामि



ಗದುಗಿನ ಶ್ರೀ ವೀರನಾರಾಯಣ

॥ ಶ್ರೀ ಅಮೃತೇಶ್ವರಾಯ ನಮಃ ॥



ಶ್ರೀ ಅಮೃತಲಿಂಗ, ಅಣ್ಣಿಗೇರಿ



ಶ್ರೀ ಜಗದ್ಗುರು ಶ್ರೀ ವಿದ್ಯಾಭಿನವ ಶ್ರೀ ಕೃಷ್ಣಾನಂದತೀರ್ಥ ಸ್ವಾಮಿನಃ
ಶ್ರೀ ಶ್ರೀ ಶ್ರೀ ಜಗದ್ಗುರು ಆದಿ ಶಂಕರಾಚಾರ್ಯ ಮಹಾಸಂಸ್ಥಾನಂ, ಶಕಟಪುರಂ
ಶ್ರೀ ವಿದ್ಯಾಪೀಠಂ, ಭಂಟಿಗಾ (ಚಿಕ್ಕಮಗಳೂರು ಜಿಲ್ಲೆ)

श्रीविद्या पातु मां सदा

# श्री जगद्गुरु बदरिशङ्कराचार्य महासंस्थानम्

## शकटपुर-श्रीविद्यापीठम्, भण्डिगडि



श्रीमत्परमहंस परिव्राजकाचार्यवर्य-जगद्गुरु-श्रीशङ्करभगवत्-पादाचार्यसच्छिष्यवर्य जगद्गुरू उत्तराम्नायज्योतिष्पीठाधीश्वर-श्रीमत्तोटक भगवत्पादाचार्यप्रवर्तित-सद्गुरुपरम्पराविभ्राजमान-श्रीसत्यतीर्थसत्सम्प्रदाय विलसित-तुङ्गाभद्रातीरनिवास-श्रीशकटमहर्षि-पावितशकट पुराधीश्वर-श्रीगुरुदत्तात्रेय-चन्द्रमौलीश्वर- श्रीविद्याविश्वेश्वर-श्रीमद्राजराजेश्वरी-श्रीसन्तानवेणुगोपालकृष्णपादपद्माराधक-श्रीविद्या पीठाधीश्वर-जगद्गुरु-श्रीरामचन्द्रानन्दतीर्थ । महास्वामिकरकमलानुग्रहसञ्जात

जगद्गुरुश्रीविद्याभिनवश्रीकृष्णानन्दतीर्थस्वामिभिः

अस्मदन्तेवसतां कुलकर्णीत्युपाह्व । कृष्णशर्मविषये श्रीदेवताराधन समये कालत्रयविरचिताः शुभंयुतरा आशीःपरम्पराः समुल्लसन्तुतराम् ।

भवदीयां प्रार्थनामुररीकुर्वद्भिरस्माभिः भविष्योत्तरपुराणान्तर्गतं क्रतुपुरमाहात्म्यं कार्णाटक्यां भाषायां मूलानुसारमन्ववादि । भाविकलोकोपकारक विषयभासुरं तमिमं ग्रन्थं संमुद्र्यमाणं विज्ञाय नितरामेव प्रमोदामहे । हरिहरयोस्तादात्म्यं, गृहस्थधर्माः,परमेशितुश्चित्रचारित्र्यवर्णन,दुष्टशिक्षणं, शिष्टरक्षण, जीवन्मुक्तलक्षणं, सदाचार इत्यादयो वरिष्ठा विषया ग्रन्थेऽस्मिन् बहुत्र लक्ष्यन्ते । ग्रन्थस्यास्य सभक्ति पठनश्रवणार्थानुसन्धानादिना सर्वे कल्याणभागिनो भवन्त्विति श्रीमहाराज्ञी मठदेवतां च प्रार्थयामः



इति

नारायणस्मृतयः



ಬ್ರಹ್ಮಶ್ರೀ ಪಂಡಿತಾವತಂಸ ಭಾಲಚಂದ್ರ ಶಾಸ್ತ್ರಿಗಳು ಉಪ್ಪಿನ ಬೆಟಗೇರಿ, ಧಾರವಾಡ



ವಿದ್ವದ್ರತ್ನ ಶ್ರೀ ಶ್ರೀಪಾದ ದೀಕ್ಷಿತ ಶಂಕರ
ದೀಕ್ಷಿತ ತಾಪಸ, ಮುಳಗುಂದ



ಬ್ರಹ್ಮಶ್ರೀ ನ್ಯಾಯಚೂಡಾಮಣಿ
ಶ್ರೀ ರಾಜರಾಜೇಶ್ವರ ಶಾಸ್ತ್ರಿಗಳು, ಧಾರವಾಡ

# ಈ ಕೃತಿಯ ಹಸ್ತಪ್ರತಿಗಳ ಬಗ್ಗೆ ವಿವರಣೆ

ಈ 'ಕ್ರತುಪುರ ಪುರಾಣ'ಕ್ಕೆ ಸಂಬಂಧಿಸಿ ನಮಗೆ ಒಟ್ಟು ಮೂರು ಹಸ್ತಪ್ರತಿಗಳು ದೊರಕಿದವು. ಅವು ಹೀಗಿವೆ .

(೧) ಗದುಗಿನ ಪುರಾಣಿಕ ಮನೆತನದವರಲ್ಲಿದ್ದ ಹಸ್ತಪ್ರತಿ

(೨) ಮಣಸಗಿ ಊರಿನ ಕುಲಕರ್ಣಿ ಮನೆತನದವರಾದ ಶ್ರೀ ಪಾಂಡುರಂಗ ತಮ್ಮಾಜಿ ಕುಲಕರ್ಣಿಯವರಿಂದ ಪಡೆದ ಹಸ್ತಪ್ರತಿ
*(ಶ್ರೀ ಎನ್ ಎನ್ ಕುಲಕರ್ಣಿಯವರ ಸಹಕಾರದಿಂದ ದೊರಕಿದ')*

(೩) ಅಣ್ಣಿಗೇರಿಯಲ್ಲಿಯ ಜೋಯಿಸ್ರ ಮನೆತನದ ಶ್ರೀ ಸಾಮಂಭಟ್ಟ, ಜೋಶಿಯವರಲ್ಲಿ ಇದ್ದ ಹಸ್ತಪ್ರತಿ

ಈ ಮೂರು ಹಸ್ತಪ್ರತಿಗಳನ್ನು ಅಭ್ಯಾಸಮಾಡಿ ಪರಿಷ್ಕರಿಸಿದ ಪ್ರತಿಯನ್ನು ಈ ಪುಸ್ತಕದಲ್ಲಿ ಮುದ್ರಿಸಲಾಗಿದೆ.

**ವಿಶೇಷ ಸೂಚನೆ** ಈ ಪುರಾಣ ಗ್ರಂಥದಲ್ಲಿ ಬರುವ ಪಾರಿಭಾಷಿಕ ಶಬ್ದಗಳ ಅರ್ಥವನ್ನು ಇದೇ ಪುಸ್ತಕದ 206–212ನೇ ಪುಟಗಳಲ್ಲಿ ಕೊಡಲಾಗಿದೆ.

— ಸಂಪಾದಕರು

# ಪರಿವಿಡಿ

ಶ್ರೀಗಣೇಶಾಯನಮಃ । ಶ್ರೀಶಂಕರಃ ಶರಣಮ್ ॥

ಪ್ರಸೀದತು ಶ್ರೀಗುರುರಾಮಚಂದ್ರಃ ॥

# "ಶ್ರೀಕ್ರತುಪುರಮಾಹಾತ್ಮ್ಯಮ್"

## (ಕನ್ನಡಾನುವಾದದೊಂದಿಗೆ)


ಅನುವಾದಕರು

**ಶ್ರೀಮತ್‌ಪರಮಹಂಸಪರಿವ್ರಾಜಕಾಚಾರ್ಯವರ್ಯ**

**ಜಗದ್ಗುರು ಬದರಿಶಂಕರಾಚಾರ್ಯಸಂಸ್ಥಾನಾಧೀಶ್ವರ**

**ಶ್ರೀ ಶ್ರೀ ಕೃಷ್ಣಾನಂದತೀರ್ಥಮಹಾಸ್ವಾಮಿಗಳವರು**

ಸಂಪಾದಕರು

**ಕೃಷ್ಣಾಜಿ ಶಂಕರರಾವ ಕುಲಕರ್ಣಿ**

# ಪ್ರಥಮೋಽಧ್ಯಾಯಃ

॥ ಶ್ರೀ ಶಂಕರಃ ಶರಣಂ ಮಮ ॥

ಏಕದಾ ನೈಮಿಷೀಯಾಸ್ತೇ ಋಷಯಃ ಶೌನಕಾದಯಃ ।
ಜಗದುಃ ಸೂತಮಾಸೀನಂ ಪೌರಾಣಿಕಮನುತ್ತಮಮ್ ॥೧॥

ಋಷಯ ಊಚುಃ –

ವರ್ಷೇಽಸ್ಮಿನ್ನಜನಾಭೇಽಸ್ಮಿನ್ ಕ್ಷೇತ್ರೇ ವಿಷ್ಣೋರ್ವಯಂ ಸ್ಥಿತಾಃ ।
ಸ್ವವರ್ಣಾಶ್ರಮಧರ್ಮೇಣ ಭಗವಂತಮುಪಾಸ್ಮಹೇ ॥೨॥

ತ್ಯಕ್ತೈಷಣಾತ್ರಯಾಸ್ತ್ಯಕ್ತಸಂಗದೋಷಾ ಜಿತೇಂದ್ರಿಯಾಃ ।
ತರ್ತುಂ ಮಾಯಾನದೀಂ ಘೋರಾಂ ಯಥಾಶಾಸ್ತ್ರಂ ಯತಾಮಹೇ॥೩॥

ಏವಂವಿಧಾನಾಮಸ್ಮಾಕಂ ವಿರಕ್ತಾನಾಂ ತಪಸ್ವಿನಾಮ್ ।
ವಿಶ್ರಾಂತಯೇ ಭವಾನ್ ಸೂತ! ವಿಧಿನೈವೋಪಪಾದಿತಃ ॥೪॥

ತ್ವಯಾಽಸ್ಮಿನ್ ಭಾರತೇ ವರ್ಷೇ ಯಾನಿ ಯಾನಿ ಮಹಾಂತಿ ಚ ।
ಕ್ಷೇತ್ರಾಣ್ಯಥ ಚ ತೀರ್ಥಾನಿ ತಾನ್ಯವರ್ಣಿ ದಯಾಲುನಾ ॥೫॥

ತ್ವದಾಸ್ಯಕಮಲೋತ್ಪನ್ನಂ ನಾನಾದಿವ್ಯಕಥಾಮೃತಮ್ ।
ನ ತೃಪ್ಯಾಮೋಽತಿ ಮಧುರಂ ಪಾಯಂ ಪಾಯಂ ಸುಧಾಮಿವ ॥೬॥

ದಕ್ಷಿಣಸ್ಯಾಂ ದಿಶಿ ಪ್ರಾಯಃ ಪುಣ್ಯಸ್ಥಾನಾನ್ಯಶೃಣ್ಮಹಿ ।
ತೀರ್ಥಾನಿ ಸರಿತೋದ್ರೀಂಶ್ಚ ತತ್ತನ್ಮಾಹಾತ್ಮ್ಯಪೂರ್ವಕಮ್ ॥೭॥

ಅವಶಿಷ್ಟಾನಿ ತತ್ರಾಪಿ ಯಾನಿ ತತ್ರಾಪಿ ಯದ್ವರಮ್ ।
ಪುಣ್ಯಸ್ಥಾನಂ ತದಾಚಕ್ಷ್ವ ಸೂತ! ನಃ ಶೃಣ್ವತಃ ಪ್ರತಿ ॥೮॥

ಕ್ಷಿಣೋತಿ ಪ್ರಾಣಿನಾಮಾಯುಃ ಕ್ಷಣಶಃ ಕ್ಷಣಶೋ ರವಿಃ ।
ಸಂಸಾರಿಣಾಮಸುತೃಪಾಮೃತೇ ಧರ್ಮಪರಾಜ್ಞನಾತ್ ॥೯॥

ದುರ್ಲಭಂ ಮಾನುಷಂ ಜನ್ಮ ಬ್ರಾಹ್ಮ್ಯಂ ತತ್ರಾಪಿ ದುರ್ಲಭಮ್ ।
ಸತಾಂ ಸಂಗಸ್ತು ತತ್ರಾಪಿ ತತ್ರಾಪಿ ಶ್ರವಣಾದರಃ ॥೧೦॥

ಅತಃ ಸೂತ ಮಹಾಭಾಗ ವೃಷಾಕಪಿಹರಾಕ್ರಮ್ಯೈಃ ।
ಉಪೇತಂ ಯನ್ಮಹಾಕ್ಷೇತ್ರಂ ತನ್ನಃ ಶಂಸಿತುಮರ್ಹಸಿ ॥೧೧॥

ಶ್ರೀಮದ್ರಾಜರಾಜೇಶ್ವರ್ಯೈ ನಮಃ

**ಸುರಾಲಿವೃತಪಾದಾಬ್ಜೇ! ಲಲಿತಾಂಬ! ಶಿಶೋಸ್ತ್ವವ ।**
**ಕೃತೇರಮಲತಾಮಸ್ಯಾ ವಿಧೇಹಿ ಹಿಮಶೈಲಜೇ ॥**

ಒಮ್ಮೆ ನೈಮಿಷಾರಣ್ಯದ ಆ ಶೌನಕಾದಿಮಹರ್ಷಿಗಳು ಅಲ್ಲಿಯೇ ಕುಳಿತಿದ್ದ ಉತ್ತಮವಾಗಿ ಪುರಾಣವನ್ನು ಹೇಳುವ ಸೂತನಿಗೆ ಹೀಗೆಂದರು. ॥೧॥

**ಋಷಿಗಳು ಹೇಳಿದರು —**

ಅಜನಾಭ ಎಂಬ ಇನ್ನೊಂದು ಹೆಸರುಳ್ಳ ಈ ಭರತ ವರ್ಷದಲ್ಲಿಯ (ಜಂಬೂ ದ್ವೀಪ ಉಪಭಾಗದಲ್ಲಿಯ) ಈ ವಿಷ್ಣು ಕ್ಷೇತ್ರದಲ್ಲಿ (ನೈಮಿಷಾರಣ್ಯದಲ್ಲಿ) ಇದ್ದ ನಾವು ನಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಆಚರಣೆಗಳಿಂದ ಭಗವಂತನನ್ನು ಆರಾಧಿಸುವೆವು ॥೨॥

ಏಷಣಾತ್ರಯವನ್ನೂ, ಸಂಗದೋಷಗಳನ್ನೂ, ಬಿಟ್ಟು ಜಿತೇಂದ್ರಿಯರಾದ ನಾವು ಘೋರವಾದ ಮಾಯಾನದಿಯನ್ನು ದಾಟಲು ಶಾಸ್ತ್ರವು ತಿಳಿಸಿದಂತೆ ಪ್ರಯತ್ನಿಸುತ್ತಿದ್ದೇವೆ ॥೩॥

ಸೂತ! ತಪಸ್ವಿಗಳೂ ವಿರಕ್ತರೂ ಕರ್ಮಗಳಿಂದ ಪರಿಶ್ರಾಂತರಾದ ನಮಗೆ ವಿಶ್ರಾಂತಿಗಾಗಿ ನಮ್ಮ ಸುದೈವವೇ ನಿನ್ನನ್ನು ಇಲ್ಲಿಗೆ ಬರುವಂತೆ ಮಾಡಿದ. ॥೪॥

ಈ ಭಾರತ ವರ್ಷದಲ್ಲಿ ಮಹತ್ತರವಾದ ಯಾವ ಯಾವ ತೀರ್ಥಕ್ಷೇತ್ರಗಳು ಇವೆಯೋ ಅವೆಲ್ಲವನ್ನೂ ದಯಾಳುವಾದ ನೀನು ಹೇಳಿರುವಿ. ॥೫॥

ನಿನ್ನ ಮುಖಾರವಿಂದದಿಂದ ಹುಟ್ಟಿದ ಮಧುರವಾದ ವಿವಿಧ ಕಥಾವಳಿಗಳನ್ನು ಪುನಃ ಪುನಃ ಕೇಳಿದ್ದರೂ ಅವು ಅಮೃತ ಸಮಾನವಾಗಿರುವದರಿಂದ ನಾವಿನ್ನೂ ತೃಪ್ತರಾಗಿಲ್ಲ. ॥೬॥

ದಕ್ಷಿಣ ದಿಕ್ಕಿನಲ್ಲಿರುವ ವಿವಿಧ ತೀರ್ಥಗಳು, ನದಿಗಳು ಮತ್ತು ಪರ್ವತಗಳು ಇವುಗಳ ಮಹಿಮೆಯನ್ನು ನೀನು ನಮಗೆ ಸಾಕಷ್ಟು ಹೇಳಿರುವಿ. ॥೭॥

ಅವುಗಳಲ್ಲಿ ಹೇಳದೇ ಉಳಿದಿರುವ ಪುಣ್ಯ ಸ್ಥಳಗಳನ್ನು ತತ್ರಾಪಿ ಅತಿ ಶ್ರೇಷ್ಠವಾದದ್ದನ್ನು ಕೇಳಬಯಸುವೆವು. ನಮಗೆ ಅದನ್ನು ಹೇಳು. ॥೮॥

ಧರ್ಮಾಸಕ್ತರ ಹೊರತಾಗಿ ಉಳಿದ ಮನುಷ್ಯರ ಆಯುಸ್ಸು ಸೂರ್ಯನ ಚಲನವಲನಕ್ಕನುಗುಣವಾಗಿ ಪ್ರತಿಕ್ಷಣಕ್ಕೂ ವ್ಯರ್ಥವಾಗಿ ಕ್ಷೀಣಿಸುತ್ತಲೇ ಇರುವುದು.॥೯॥

ಪ್ರಾಣಿಗಳಿಗೆ ಮಾನವ ಜನ್ಮ ಬರುವದೇ ದುರ್ಲಭ. ಬ್ರಾಹ್ಮಣ ಜನ್ಮವು ದುರ್ಲಭ. ಅದು ದೊರೆತರೂ ಸತ್ಸಂಗವು ಹೆಚ್ಚು ದುರ್ಲಭ. ಅದು ಸಿಕ್ಕರೂ ಭಗವತ್‌ಕಥಾ ಶ್ರವಣಾದಿಗಳಲ್ಲಿ ಆದರ ಹುಟ್ಟುವದೂ ಅತಿ ದುರ್ಲಭ. ॥೧೦॥

ಆದ್ದರಿಂದ ಮಹಾಭಾಗನಾದ ಸೂತ! ಶ್ರೀ ಹರಿಹರರ ಮಹಿಮೆಯಿಂದ ಮೆರೆದ ಯಾವುದಾದರೂ ಕ್ಷೇತ್ರವಿದ್ದರೆ ಅದನ್ನು ದಯಮಾಡಿ ಹೇಳು. ॥೧೧॥

ಸೂತ ಉವಾಚ —

ಸಾಧು ಸಾಧು ಕೃತಃ ಪ್ರಶ್ನೋ ಭವದ್ಭಿರ್ಭಾವಿತಾತ್ಮಭಿಃ ।
ಸತಾಂ ನಿಸರ್ಗ ಏವಾಯಂ ಪರೋಪಕೃತಿಶಾಲಿನಾಮ್ ॥೧೨॥

ಯೂಯಂ ತಪಸ್ವಿನಃ ಶಾಂತಾಃ ಸರ್ವವಿದ್ಯಾವಿಶಾರದಾಃ ।
ಪ್ರಶ್ನಂ ಕುರುಧ್ವೇ ಮತ್ಪ್ರೀತ್ಯೈ ಸರ್ವಲೋಕಹಿತಾಯ ಚ ॥೧೩॥

ತಚ್ಛೃಣುಧ್ವಂ ಯದುದ್ದಿಶ್ಯ ಭವದ್ಭಿಃ ಪೃಷ್ಟವಾನಹಮ್ ।
ವಚ್ಮಿ ಕ್ರತುಪುರಾಖ್ಯಾನಂ ಪಾಪಘ್ನಂ ಪುಣ್ಯವರ್ಧನಮ್ ॥೧೪॥

ಉತ್ತರೇ ತುಂಗಭದ್ರಾಯಾಃ ಕೃಷ್ಣವೇಣ್ಯಾಶ್ಚ ದಕ್ಷಿಣೇ ।
ಪಂಪಾಯಾಃ ಪಶ್ಚಿಮೇ ಭಾಗೇ ಪೂರ್ವತಃ ಸಹ್ಯಭೂಭೃತಃ ॥೧೫॥

ಕಪೋತಪರ್ವತಃ ಶ್ರೀಮಾನಾಸ್ತೇ ಯೋಗಿಜನಾಶ್ರಯಃ ।
ನೈಕಸಿದ್ಧಗುಹಾಕೀರ್ಣಃ ಸಿದ್ಧವಲ್ಲೀಸಮನ್ವಿತಃ ॥೧೬॥

ನಾನಾಮೃಗಗಣಾಜೀವ್ಯಃ ಕೂಜತ್ಪಕ್ಷಿಕುಲಾಕುಲಃ ।
ನಿರ್ಝರೈಃ ಪುಣ್ಯಸಲಿಲೈರುಪೇತಃ ಶಿವವಲ್ಲಭಃ ॥೧೭॥

ಕೃತೇ ಸರ್ವಗುಣೋಪೇತಸ್ತ್ರೇತಾಸ್ವರ್ಧಗುಣೋಽಭವತ್ ।
ದ್ವಾಪರೇಽರ್ಧಗುಣಸ್ತಿಷ್ಯೇ ಭವಿಷ್ಯತ್ಯಲ್ಪವೈಭವಃ ॥೧೮॥

ತಥಾಪಿ ತತ್ರ ಸೇತ್ಸ್ಯಂತಿ ತಪಾಂಸಿ ಮುನಿಪುಂಗವಾಃ ।
ಮೇಘೈಸ್ತಿರೋಹಿತೇಽಪ್ಯರ್ಕೇ ನ ಪ್ರಭಾ ಲುಪ್ಯತೇ ಕ್ವಚಿತ್ ॥೧೯॥

ಋಷಯ ಊಚುಃ —

ಕಪೋತಸಂಜ್ಞಾ ತಸ್ಯಾಸೀತ್ ಕೇನ ವಾ ಹೇತುನಾ ವದ ।
ತದ್ವಯಂ ಶ್ರೋತುಮಿಚ್ಛಾಮಃ ಕಾರಣಂ ಲೋಮಹರ್ಷಣ! ॥೨೦॥

ಸೂತ ಉವಾಚ —

ಉಶೀನರಾತ್ಮಜೋ ರಾಜಾ ಶಿಬಿರಾಸೀತ್ಪ್ರತಾಪವಾನ್ ।
ಧಾರ್ಮಿಕಃ ಸತ್ಯಸಂಧಶ್ಚ ದಾತಾ ಯಜ್ವಾ ಕೃಪಾಕರಃ ॥೨೧॥

ಸ ಏಕದಾ ತೀರ್ಥಯಾತ್ರಾಪ್ರಸಂಗೇನ ಮಹೀಮಟನ್ ।
ಲೋಹಖಂಡಪುರಂ ಪ್ರಾಪ್ತಃ ಪರಿವಾರಯುತೋ ನೃಪಃ ॥೨೨॥

ಕಪೋತಪರ್ವತಾತ್ತಚ್ಚ ಪುರಮುತ್ತರತಃ ಸ್ಥಿತಮ್ ।
ಲೋಹಪ್ರಾಕಾರಸಂಯುಕ್ತಂ ಲೋಹಾಕರವಿರಾಜಿತಮ್ ॥೨೩॥

**ಸೂತನು ಹೇಳಿದನು –**

ಮುನಿಗಳೇ! ಆತ್ಮಜ್ಞಾನಿಗಳಾದ ನೀವು ಯೋಗ್ಯವಾದ ಪ್ರಶ್ನೆಯನ್ನೇ ಮಾಡಿದಿರಿ. ಕಾರಣ ಪರೋಪಕಾವನ್ನೇ ಮಾಡುವ ಸಜ್ಜನರಿಗೆ ಇದು ಸಹಜವೇ ಆಗಿದೆ. ||೧೨||

ಸರ್ವ ವಿದ್ಯಾವಿಶಾರದರಾದ ಶಾಂತರಾದ ನೀವು ನನಗೆ ಸಂತೋಷವನ್ನುಂಟು ಮಾಡಲು ಹಾಗೂ ಲೋಕಕಲ್ಯಾಣವನ್ನುಂಟುಮಾಡಲು ಪ್ರಶ್ನಿಸಿದಿರಿ. ||೧೩||

ಯಾವ ಉದ್ದೇಶದಿಂದ ನೀವು ನನ್ನನ್ನು ಕೇಳಿದಿರೋ ಅದಕ್ಕಾಗಿ ಪಾಪಹರವೂ ಪುಣ್ಯಕರವೂ ಆದ ಕ್ರತುಪುರಾಖ್ಯಾನವನ್ನು ಹೇಳುವೆ. ಕೇಳಿರಿ. ||೧೪||

ತುಂಗಭದ್ರಾ ನದಿಯ ಉತ್ತರಕ್ಕೆ, ಕೃಷ್ಣವೇಣೀ ನದಿಯ ದಕ್ಷಿಣಕ್ಕೆ, ಪಂಪಾ ಸರೋವರದ ಪಶ್ಚಿಮಕ್ಕೆ ಸಹ್ಯಾದ್ರಿಯ ಪೂರ್ವಕ್ಕೆ ಸುಂದರವಾದ ಕಪೋತಪರ್ವತವು (ಕಪ್ಪತಗುಡ್ಡವು) ಇದೆ ಅದರಲ್ಲಿ ಅನೇಕ ಯೋಗಿಗಳು ವಾಸಿಸುತ್ತಾರೆ. ಸಿದ್ಧರ ಗುಹೆಗಳು ಅಲ್ಲಿ ಸಾಕಷ್ಟು ಇವೆ ಪ್ರಸಿದ್ಧವಾದ ಔಷಧಿ ಬಳ್ಳಿಗಳು ಇವೆ. ವಿವಿಧವಾದ ಮೃಗಗಳು ಅಲ್ಲಿ ವಾಸ್ತವ್ಯ ಮಾಡುತ್ತವೆ ಅನೇಕ ಪಕ್ಷಿಗಳ ಕಲರವವು ಅಲ್ಲಿ ಕೇಳಿಬರುತ್ತದೆ. ಪವಿತ್ರ ಜಲಪ್ರವಾಹಗಳು ಇಲ್ಲಿ ಇದ್ದು ಈ ಪರ್ವತವು ಪರಮೇಶ್ವರನಿಗೆ ಪ್ರಿಯವಾಗಿದೆ. ಈ ಪರ್ವತದಲ್ಲಿ ಆವಶ್ಯಕ ಸರ್ವಗುಣಗಳು ಕೃತಯುಗದಲ್ಲಿ ಸ್ಪಷ್ಟವಾಗಿ ಹೇರಳವಾಗಿ ಗೋಚರಿಸುತ್ತಿದ್ದವು. ಯುಗಧರ್ಮಕ್ಕನುಗುಣವಾಗಿ ತ್ರೇತಾಯುಗದಲ್ಲಿ ²/₃ ಗುಣಗಳು ದ್ವಾಪರದಲ್ಲಿ ¹/₄ ಗುಣಗಳು ಕಂಡುಬಂದು ಈ ಕಲಿಯುಗದಲ್ಲಂತೂ ಅವುಗಳಲ್ಲಿ ಕೆಲವೇ ಗುಣಗಳು ಉಳಿದಿವೆ || ೧೫–೧೮ ||

ಆದರೂ ಸಹ, ಮೋಡಗಳು ಸೂರ್ಯನನ್ನು ಮುಸುಕಿದರೂ ಸೂರ್ಯನ ಪ್ರಕಾಶವು ಬೆಳಗುತ್ತಲೇ ಇರುವಂತೆ ಆ ಕ್ಷೇತ್ರದಲ್ಲಿ ಮಾಡಿದ ತಪಸ್ಸುಗಳು ಸಿದ್ಧಿಸುವವು. ||೧೯||

**ಋಷಿಗಳು ಹೇಳಿದರು –**

ಸೂತ ಮುನಿಯೇ! ಆ ಪರ್ವತಕ್ಕೆ 'ಕಪೋತ'ವೆಂಬ ಸಂಜ್ಞೆಯು ಬರಲು ಕಾರಣವೇನು? ಅದನ್ನು ಹೇಳು. ನಾವು ಕೇಳಲು ಆತುರರಾಗಿದ್ದೇವೆ. ||೨೦||

**ಸೂತನು ಹೇಳಿದನು –**

ಉಶೀನರನೆಂಬವನಿಗೆ ಮಹಾಪರಾಕ್ರಮಿಯಾದ 'ಶಿಬಿ' ಎಂಬ ಪುತ್ರನಿದ್ದನು. ಶಿಬಿಯು ಧಾರ್ಮಿಕನೂ, ದಾನಿಯೂ, ಯಾಗಾದಿಗಳನ್ನು ಮಾಡುವವನೂ ಸತ್ಯ–ಪ್ರತಿಜ್ಞನೂ ದಯಾಳುವೂ ಆಗಿದ್ದನು. ||೨೧||

ಆ ಶಿಬಿಯು ತೀರ್ಥಯಾತ್ರೆ ಮಾಡುತ್ತ ಭೂಸಂಚಾರ ಕೈಗೊಂಡು ಕಪೋತಗಿರಿಯ ಉತ್ತರ ದಿಕ್ಕಿನಲ್ಲಿದ್ದ 'ಲಕ್ಕುಂಡಿ' ಎಂಬ ನಗರಕ್ಕೆ ಸಪರಿವಾರ ಆಗಮಿಸಿದನು ಲೋಹದ ಪ್ರಾಕಾರವನ್ನು ಹೊಂದಿದ ಆ ಲಕ್ಕುಂಡಿಯು ಅನೇಕ ಲೋಹಗಣಿಗಳನ್ನು ಹೊಂದಿತ್ತು. || ೨೨–೨೩ ||

ಕಪೋತಗಿರಿಪಾದೋತ್ಥಾ ಸ್ರವಂತೀ ಪಾಪನಾಶನೀ ।
ಪುರಸ್ಯ ಪಶ್ಚಿಮೇಭಾಗೇ ತತ್ರಾಸೌ ನಿವಿವೇಶ ಹ ॥೨೪॥

ಭಲ್ಲಾಟಿಕಾಹ್ವಯಃ ಕಶ್ಚಿತ್ ದಸ್ಯುರತ್ರಾವಸತ್ ಖಲಃ ।
ನಿರ್ದಯೋ ದುರ್ಮದಃ ಪಾಪೀ ಹಿಂಸಕಃ ಪಥಿಕಾಂತಕಃ ॥೨೫॥

ಕೃಶಸೈನ್ಯಂ ನೃಪಂ ಮತ್ವಾ ಸ ಯೋದ್ಧುಂ ಸಮುಪಾಯಯೌ ।
ನೃಪೇಣ ತೇನ ತಸ್ಯಾಭೂತ್ಸಂಪ್ರಹಾರಃ ಸುದಾರುಣಃ ॥೨೬॥

ದಸ್ಯುಸೈನ್ಯಂ ತದಖಿಲಂ ಮಮಾರ ಶಿಬಿಸಾಯಕೈಃ ।
ಭಲ್ಲಾಟಿಕಸ್ಯ ಭಲ್ಲೇನ ಚಿಚ್ಛೇದ ನೃಪತಿಃ ಶಿರಃ ॥೨೭॥

ಶೇಷಾಃ ಪಲಾಯನಪರಾ ಬಭೂವುರ್ದಸ್ಯವೋ ಭಯಾತ್ ।
ಲೋಹಖಂಡಂ ನೃಪೋ ಗತ್ವಾ ಪುರಾತ್ತಾನುದವಾಸಯತ್ ॥೨೮॥

ಸರ್ವೇಷಾಂ ದಸ್ಯುವರ್ಗಾಣಾಂ ಗೃಹೀತ್ವಾ ದ್ರವ್ಯಸಂಚಯಮ್ ।
ತೇನ ದೇವಾಲಯಾನ್ ವಾಪೀಃ ಕಾಸಾರಾನಪ್ಯಕಾರಯತ್ ॥೨೯॥

ಏತಸ್ಯ ಲೋಹಖಂಡಸ್ಯ ಶಾಖಾಗ್ರಾಮಾಂಶ್ಚ ತೈಃ ಸಹ ।
ಅಗ್ರಹಾರಪುರಂ ಚಕ್ರೇ ತ್ರಿಕೂಟಾಖ್ಯಸ್ಯ ಶೂಲಿನಃ ॥೩೦॥

ಬ್ರಾಹ್ಮಣಾನ್ ಸ್ಥಾಪಯಾಮಾಸ ಕಲ್ಪಯಿತ್ವಾಥ ಜೀವಿಕಾಃ ।
ಗತ್ವಾ ಕ್ರತುಪುರಂ ತತ್ರ ತ್ರಿಕೂಟೇಶಂ ವಿಧಾನತಃ ॥೩೧॥

ರಾಜೋಪಚಾರೈರಖಿಲೈಃ ಪೂಜಯಿತ್ವಾ ಮಹೇಶ್ವರಮ್ ।
ಬ್ರಾಹ್ಮಣಾಂಸ್ತರ್ಪಯಾಮಾಸ ಸ್ವಾದ್ವನ್ನೈರಮೃತೋಪಮೈಃ ॥೩೨॥

ದತ್ವಾ ದಾನಾನಿ ಭೂರೀಣಿ ಕೃತ್ವೇಶಸ್ಯ ಮಹೋತ್ಸವಮ್ ।
ಲೋಹಖಂಡಂ ಪುನಾ ರಾಜಾ ಶಿಬಿರೇತ್ಯಾವಸದ್ವಶೀ ॥೩೩॥

ಶಿಬೇಃ ಸತ್ಯಪರೀಕ್ಷಾರ್ಥಮಿಂದ್ರಾಗ್ನೀ ಸಮುಪಾಗತೌ ।
ಕರ್ತುಂ ಶ್ಯೇನಕಪೋತೀಯಂ ಕೌತುಕಂ ನೃಪಸನ್ನಿಧೌ ॥೩೪॥

ತನುಂ ವಿಧಾಯ ಕಾಪೋತೀಂ ನೃಪಮಗ್ನಿರ್ಭಯಾಕುಲಃ ।
ನೃಪಾಂಕತಲಮಭ್ಯೇತ್ಯ ತ್ರಾಹಿ ಮಾಮಿತ್ಯಬೀಭಣತ್ ॥೩೫॥

ಏತಸ್ಮಿನ್ನಂತರೇ ಶಕ್ರಃ ಶ್ಯೇನೋ ಭೂತ್ವಾ ನೃಪಾಂತಿಕಮ್ ।
ಉಪೇತ್ಯಾಹ ವಿಮುಂಚೈನಂ ಕಪೋತಂ ಕ್ಷುಧಿತೋಸ್ಮ್ಯಹಮ್ ॥೩೬॥

ಈ ಲಕ್ಕುಂಡಿಯ ಪಶ್ಚಿಮ ಭಾಗದಲ್ಲಿ ಕಪೋತಗಿರಿಯಲ್ಲಿ ಜನ್ಮತಳೆದ 'ಪಾಪನಾಶನೀ' ಎಂಬ ನದಿಯು ಹರಿಯುತ್ತಿದೆ ಇದರ ಸಮೀಪವೇ ಶಿಬಿರಾಜನು ಬೀಡುಬಿಟ್ಟನು ॥೨೪॥

ಇಲ್ಲಿ ಭಲ್ಲಾಟಕನೆಂಬ ದುಷ್ಟಕಳ್ಳನೋರ್ವನು ವಾಸಿಸುತ್ತಿದ್ದನು ಮಹಾಪಾಪಿಯಾದ ಅವನು ನಿರ್ದಯಿಯೂ ದರ್ಪಿಷ್ಠನೂ ಹಿಂಸಕನೂ ದಾರಿಹೋಕರನ್ನು ದೋಚಿ ಅವರನ್ನು ಕೊಲೆ ಮಾಡುವವನೂ ಆಗಿದ್ದನು. ॥೨೫॥

ಶಿಬಿರಾಜನು ಹೆಚ್ಚಿನ ಸೈನ್ಯವನ್ನು ತಂದಿಲ್ಲವೆಂದು ಅರಿತ ಆ ಕಳ್ಳನು ರಾಜನೊಂದಿಗೆ ಯುದ್ಧ ಮಾಡಲು ಬಂದನು. ರಾಜನಿಗೂ ಚೋರನಿಗೂ ಭೀಕರ ಯುದ್ಧವಾಯಿತು ॥೨೬॥

ಶಿಬಿಯು ಬಾಣಗಳಿಂದ ಆ ಕಳ್ಳನ ಸೈನ್ಯವನ್ನು ನಾಶಗೊಳಿಸಿ ಭಲ್ಲಾಟಕನ ತಲೆಯನ್ನು ಭಲ್ಲದಿಂದ ಕತ್ತರಿಸಿದನು ॥೨೭॥

ಅಳಿದುಳಿದ ಕಳ್ಳರು ಹೆದರಿ ಓಡಿಹೋದರು ಶಿಬಿಯು ಲಕ್ಕುಂಡಿಗೆ ತೆರಳಿ ಅಲ್ಲಿ ಉಳಿದಿದ್ದ ಕಳ್ಳರನ್ನು ಹೊರಹಾಕಿದನು. ॥೨೮॥

ಆ ಎಲ್ಲ ಚೋರರು ಸಂಗ್ರಹಿಸಿದ್ದ ಧನವನ್ನು ತೆಗೆದುಕೊಂಡು ಅದರಿಂದ ದೇವಾಲಯಗಳನ್ನೂ, ಕೆರೆ-ಭಾವಿಗಳನ್ನೂ ಕಟ್ಟಿಸಿದನು. ॥೨೯॥

ಮತ್ತು ಲಕ್ಕುಂಡಿಯ ಸುತ್ತಮುತ್ತಲೂ ಅನೇಕ ಉಪನಗರಗಳನ್ನು ನಿರ್ಮಿಸಿದನು. ಅವುಗಳೊಡನೆ ಮುಖ್ಯ ನಗರವನ್ನು ಸೇರಿಸಿ ಶ್ರೀ ತ್ರಿಕೂಟೇಶ್ವರನ ಅಗ್ರಹಾರವನ್ನಾಗಿ ಮಾರ್ಪಡಿಸಿದನು ॥೩೦॥

ಅವುಗಳಲ್ಲಿ ಬ್ರಾಹ್ಮಣರಿಗೆ ಸಾಕಷ್ಟು ಜೀವನ ಸಹಾಯಕ ವೃತ್ತಿಗಳನ್ನು ಮಾಡಿಕೊಟ್ಟು ಅವರನ್ನು ನೆಲೆಗೊಳಿಸಿದನು. ಆಮೇಲೆ ಕ್ರತುಪುರಕ್ಕೆ ತೆರಳಿ ಯಥಾವಿಧಿ ಸಕಲ ರಾಜೋಪಚಾರಗಳಿಂದ ಪರಶಿವನನ್ನು ಪೂಜಿಸಿ ವಿವಿಧ ಭಕ್ಷ್ಯ ಭೋಜ್ಯಗಳಿಂದ ವಿಪ್ರರನ್ನು ಸಂತೋಷಗೊಳಿಸಿದನು. ॥೩೧-೩೨॥

ಅನೇಕ ದಾನಗಳನ್ನು ಮಾಡಿ ಪರಶಿವನ ಮಹೋತ್ಸವವನ್ನು ವೈಭವದಿಂದ ನೆರವೇರಿಸಿದ ಶಿಬಿಯು ಲಕ್ಕುಂಡಿಗೆ ಹಿಂತಿರುಗಿ ಬಂದು ವಾಸಿಸಹತ್ತಿದನು. ॥೩೩॥

ಒಮ್ಮೆ ಗಿಡುಗ ಪಾರಿವಾಳಗಳ ಆಶ್ಚರ್ಯ ಘಟನೆಯ ಮೂಲಕ ಶಿಬಿಯ ಸತ್ಯನಿಷ್ಠೆಯನ್ನು ಪರೀಕ್ಷಿಸಲು ಇಂದ್ರ-ಅಗ್ನಿಗಳು ಶಿಬಿಯ ಬಳಿಗೆ ಬಂದರು. ॥೩೪॥

ಅವರಲ್ಲಿ ಅಗ್ನಿಯು ಭಯಭೀತವಾದ ಪಾರಿವಾಳದ ರೂಪ ತಳೆದು ರಾಜನಲ್ಲಿಗೆ ಬಂದು ಅವನ ತೊಡೆಯನ್ನೇರಿ ನನ್ನನ್ನು ಕಾಪಾಡು ಎಂದನು. ॥೩೫॥

ಅಷ್ಟರಲ್ಲಿಯೇ ಇಂದ್ರನೂ ಸಹ ಗಿಡುಗದ ರೂಪ ಧರಿಸಿ ಶಿಬಿಯ ಸಮೀಪ ಬಂದು 'ನಾನು ಹಸಿದಿದ್ದೇನೆ. ನನ್ನ ಆಹಾರವಾದ ಈ ಪಾರಿವಾಳವನ್ನು ಬಿಡು' ಎಂದು ಹೇಳಿದನು. ॥೩೬॥

ರಾಜೋವಾಚ –

ಮುಂಚಾಮಿ ರಾಜ್ಯಂ ನಿಖಿಲಾಂಶ್ಚ ಭೋಗಾನ್
ಪುತ್ರಾನ್ ಕಲತ್ರಾಣಿ ಪರಂ ಚ ಲೋಕಮ್ ।
ಪ್ರಾಣಾನಪಿ ಶ್ಯೇನ! ವರಂ ವರಂ ತು
ಮುಂಚಾಮ್ಯಹಂ ನೋ ಶರಣಾಗತಂ ಮಾಮ್ ।।೩೭।।

ಶ್ಯೇನ ಉವಾಚ –

ಕ್ಷುಧಾತುರಸ್ಯ ಯದ್ಯನ್ನಂ ನ ಮೇ ದಾಸ್ಯಸಿ ಭೂಪತೇ! ।
ತರ್ಹಿ ಧರ್ಮಃ ಪ್ರಹೀಯೇತ ಯಸ್ತ್ವಯಾ ಚಿರಸಂಭೃತಃ ।।೩೮।।

ಯಸ್ತೂಪಹನ್ಯಾತ್ ಕ್ಷುಧಿತಸ್ಯ ವೃತ್ತಿಂ
ಜಲಂ ನಿರುಧ್ಯಾತ್ ತೃಷಿತಸ್ಯ ಭೂಪ ।
ಯೋ ಭ್ರೂಣಹಾ ಸ್ಯಾದಪಿ ತಸ್ಯ ತಸ್ಯ
ಪಾಪಂ ಸಮಂ ಧರ್ಮವಿದೋ ವದಂತಿ ।।೩೯।।

ಬುಭುಕ್ಷಿತಸ್ಯಾನ್ನದಾನಂ ಶರಣಾಗತರಕ್ಷಣಮ್ ।
ಅನಯೋಃ ಕತರೋ ಧರ್ಮಃ ಶ್ರೇಯಾನ್ ಬ್ರೂಹಿ ತ್ವಮೇವ ತಮ್ ।।೪೦।।

ರಾಜೋವಾಚ –

ದುಷ್ಟಬುದ್ಧ್ಯಾ ಕೃತಘ್ನೇ ಚ ಯತ್ಪಾಪಂ ಕೂಟಸಾಕ್ಷಿಣಿ ।
ತೇನ ಪಾಪೇನ ಲಿಪ್ತಃ ಸ್ಯಾಂ ಯದ್ಯದ್ಯಾಂ ಶರಣಾಗತಮ್ ।।೪೧।।

ಹೈತುಕೇ ಬಕವೃತ್ತೌ ಚ ಯತ್ಪಾಪಂ ಪಾರದಾರಿಕೇ ।
ತೇನ ಪಾಪೇನ ಲಿಪ್ತಃ ಸ್ಯಾಂ ಯದ್ಯದ್ಯಾಂ ಶರಣಾಗತಮ್ ।।೪೨।।

ಯತಿನಿಂದಾಪರೇ ಪಾಪಂ ವೇದನಿಂದಾಪರೇ ಚ ಯತ್ ।
ತೇನ ಪಾಪೇನ ಲಿಪ್ತಃ ಸ್ಯಾಂ ಯದ್ಯದ್ಯಾಂ ಶರಣಾಗತಮ್ ।।೪೩।।

ಏಕಾಕೀ ಮಿಷ್ಟಮಶ್ನಾತಿ ಪಂಕ್ತಿಭೇದಂ ಕರೋತಿಯಃ ।
ತಯೋಃ ಪಾಪೇನ ಲಿಪ್ತಃ ಸ್ಯಾಂ ಯದ್ಯದ್ಯಾಂ ಶರಣಾಗತಮ್ ।।೪೪।।

ಯಃ ಪಠೇತ್ ಸ್ವರಹೀನಂ ಚ ಲಕ್ಷಣೇನ ವಿವರ್ಜಿತಮ್ ।
ತಸ್ಯ ಪಾಪೇನ ಲಿಪ್ತಃ ಸ್ಯಾಂ ಯದ್ಯದ್ಯಾಂ ಶರಣಾಗತಮ್ ।।೪೫।।

**ರಾಜನು ಹೇಳಿದನು –**

ಗಿಡುಗವೇ! ನನ್ನ ರಾಜ್ಯವನ್ನೂ ಎಲ್ಲ ಭೋಗಗಳನ್ನೂ ಪತ್ನೀ ಪುತ್ರರನ್ನೂ ಅಷ್ಟೇ ಏಕೆ ಮುಂದೆ ನನಗೊದಗಬಹುದಾದ ಸ್ವರ್ಗಲೋಕವನ್ನೂ ಸಹ ಬಿಡುತ್ತೇನೆ. ಪ್ರಾಣಗಳನ್ನಾದರೂ ಬಿಟ್ಟೇನು. ಆದರೆ ನನ್ನನ್ನು ಶರಣು ಹೊಂದಿದ ಯಾರನ್ನೂ ಬಿಡಲಾರೆ ||೩೭||

**ಗಿಡುಗವು ಹೇಳಿತು –**

ಬಹಳ ಹಸಿದಿರುವ ನನಗೆ ಆಹಾರ ಸ್ವರೂಪವಾದ ಈ ಪಾರಿವಾಳವನ್ನು ನೀಡದಿದ್ದಲ್ಲಿ ಚಿರಕಾಲದಿಂದ ನೀನು ಸಂಪಾದಿಸಿದ ನಿನ್ನ ಪುಣ್ಯವು ಹಾಳಾಗುವುದು ||೩೮||

ರಾಜನೇ! ಹಸಿದವನಿಗೆ ಅನ್ನವನ್ನೂ, ಬಾಯಾರಿದವನಿಗೆ ನೀರನ್ನೂ ನಿರಾಕರಿಸುವವನ ಪಾಪವು ಶಿಶು ಹತ್ಯೆಗೈದವನ ಪಾಪಕ್ಕೆ ಸಮನಾಗುವುದೆಂದು ಧರ್ಮವನ್ನು ಬಲ್ಲವರು ಹೇಳುವರು ||೩೯||

ಆದ್ದರಿಂದ ಹಸಿದವನಿಗೆ ಅನ್ನದಾನ ಮಾಡುವುದು, ಶರಣಾಗತರಿಗೆ ರಕ್ಷಣೆ ಕೊಡುವುದು, ಇವೆರಡರಲ್ಲಿ ಯಾವುದು ಶ್ರೇಷ್ಠ ಧರ್ಮವೆಂದು ನೀನೇ ಹೇಳು. ||೪೦||

**ರಾಜನು ಹೇಳಿದನು –**

ಶರಣಾಗತರನ್ನು ರಕ್ಷಿಸದಿದ್ದಲ್ಲಿ ದುಷ್ಟಬುದ್ಧಿಯುಳ್ಳವರಲ್ಲಿ, ಕೃತಘ್ನರಲ್ಲಿ, ಸುಳ್ಳು ಸಾಕ್ಷಿಯನ್ನು ಹೇಳುವವರಲ್ಲಿ ಇರಬಹುದಾದ ಮಹಾಪಾಪವನ್ನು ನಾನು ಹೊಂದುವೆ ||೪೧||

ಶರಣಾಗತರನ್ನು ರಕ್ಷಿಸಲು ಹಿಂತೆಗೆದರೆ ತರ್ಕಬಲದಿಂದ ವೇದಶಾಸ್ತ್ರಗಳಿಗೆ ಅಪಾರ್ಥ ಕಲ್ಪಿಸುವವರಲ್ಲಿ, ಮಹಾವಂಚಕರಲ್ಲಿ, ಪರಸ್ತ್ರೀಗಮನ ಮಾಡುವವರಲ್ಲಿ ಇರುವ ಪಾಪಕ್ಕೆ ಭಾಗಿಯಾಗುವೆ. ||೪೨||

ಯತಿಗಳ–ವೇದಗಳ ನಿಂದೆ ಮಾಡುವವರಲ್ಲಿ, ಬೇರಾರಿಗೂ ಕೊಡದೆ ತಾವೊಬ್ಬರೇ ಮೃಷ್ಟಾನ್ನ ತಿನ್ನುವವರಲ್ಲಿ, ಪಂಕ್ತಿಭೇದ ಮಾಡುವವರಲ್ಲಿ, ಇರಬಹುದಾದ ಮಹಾ ಪಾಪವನ್ನು ನಾನು ಹೊಂದುವೆ. ||೪೩–೪೪||

ಶರಣಾಗತ ರಕ್ಷಣೆಯ ಕರ್ತವ್ಯದಿಂದ ಚ್ಯುತನಾದರೆ ಸ್ವರಲಕ್ಷಣಗಳಿಲ್ಲದೇ ವೇದಾಧ್ಯಯನ ಮಾಡುವವರ ಪಾಪವು ನನಗೆ ತಗಲುವುದು. ||೪೫||

ಆದಿತ್ಯಂ ವಿಷ್ಣುಮೀಶಾನಂ ಗಣಾಧ್ಯಕ್ಷಂ ಚ ಪಾರ್ವತೀಮ್ ।
ಏತಾ ನ ಪೂಜಯೇದ್ಯಸ್ತು ದೇವತಾಃ ಸ್ವಗೃಹೇ ಗೃಹೀ ॥೪೬॥

ಮಾತಾಪಿತ್ರೋರಪ್ರೋಷ್ಯಾ ಚ ಕ್ರಿಯಾಮುದ್ದಿಶ್ಯ ಯಾಚಕಃ ।
ಕನ್ಯಾಶುಲ್ಕೋಪಜೀವೀ ಚ ದೇವಬ್ರಾಹ್ಮಣವೃತ್ತಿಹಾ ॥೪೭॥

ಶೂದ್ರಾನ್ನಭೋಜೀ ಯೋ ವಿಪ್ರಃ ಪಾಷಂಡೀ ಗುರುತಲ್ಪಗಃ ।
ಸ್ವರ್ಣಸ್ತೇಯೀ ಸುರಾಪೀ ಚ ಬ್ರಹ್ಮಹಾ ಭಸ್ಮನಿಂದಕಃ ॥೪೮॥

ಹರಿದ್ರೋಹೀ ಶಿವಪರಃ ಶಿವದ್ರೋಹೀ ಹರಿಪ್ರಿಯಃ ।
ತೇಷಾಂ ಪಾಪೇನ ಲಿಪ್ತಃ ಸ್ಯಾಂ ಯದ್ಯದ್ಯಾಂ ಶರಣಾಗತಮ್ ॥೪೯॥

ಶ್ಯೇನ ಮಾ ಖಿದ್ಯ ತೇ ದಾಸ್ಯ ಆಸ್ಯೇ ಮಾಂಸಂ ಸ್ವಪಾಣಿನಾ ।
ಯಾವತ್ತೃಪ್ತಿ ವಿಮುಂಚ್ಯೈನಂ ಕಪೋತಂ ಮತ್ಪರಿಗ್ರಹಮ್ ॥೫೦॥

ಶ್ಯೇನ ಉವಾಚ –

ಸ್ವದೇಹಮಾಂಸಂ ಮೇ ಭೂಪ! ಕಪೋತತುಲಿತಂ ಯದಿ ।
ದದಾಸಿ ತರ್ಹಿ ತುಷ್ಯಾಮಿ ತ್ವದ್ಧರ್ಮೋಽಪಿ ನ ಹೀಯತೇ ॥೫೧॥

ಇತಿ ತದ್ವಚನಂ ಶ್ರುತ್ವಾ ನೃಪ 'ಓ''ಮಿತ್ಯುವಾಚ ಹ ।
ತುಲಾಮಾನಾಯ್ಯ ತತ್ರೈವ ಕಪೋತಂ ನಿದಧೇಽನ್ಯತಃ ॥೫೨॥

ಕ್ರವ್ಯಮನ್ಯತ್ರ ದೇಹಸ್ಯ ಛಿತ್ವಾ ಛಿತ್ವಾ ನ್ಯಧಾನ್ನೃಪಃ ।
ನ್ಯೂನೇ ಪುನರ್ದದಾವೇವಂ ಚಿಚ್ಛೇದಾಂಗಾನಿ ಖಂಡಶಃ ॥೫೩॥

ಏತಸ್ಮಿನ್ನಂತರೇ ವ್ಯೋಮ್ನಿ ವ್ಯೋಮಯಾನೈರ್ದಿವೌಕಸಃ ।
ದ್ರಷ್ಟುಮೀಯುಃ ಶಿಬಿಂ ಧನ್ಯಂ ಶರಣಾಗತವತ್ಸಲಮ್ ॥೫೪॥

ದೇವದುಂದುಭಯೋ ನೇದುಃ ಪುಷ್ಪವರ್ಷಂ ಪಪಾತ ಚ ।
ಶಿಬೇ! ಧನ್ಯೋಽಸಿ ಧನ್ಯೋಽಸೀತ್ಯೂಚುರ್ದೇವಾ ದಿವಿಸ್ಥಿತಾಃ ॥೫೫॥

ಇಂದ್ರಾಗ್ನೀ ಅಪಿ ಭೇಜಾತೇ ಸ್ವಸ್ವರೂಪಂ ತದೈವ ತೌ ।
ಊಚತುಸ್ತಂ ನೃಪಂ ರಾಜನ್ ವೃಣೀಷ್ವ ವರಮುತ್ತಮಮ್ ॥೫೬॥

ಗಿಡುಗವೇ ಶರಣಾಗತರನ್ನು ರಕ್ಷಿಸದೇ ಹೋದರ 'ತನ್ನ ಗೃಹದಲ್ಲಿ ಸೂರ್ಯ, ವಿಷ್ಣು, ಶಂಕರ, ಗಣಪತಿ, ಪಾರ್ವತಿ' ಈ ಪಂಚಾಯತನ ದೇವತೆಗಳನ್ನು ಪೂಜೆ ಮಾಡದ ಗೃಹಸ್ಥನ, ತಂದೆ-ತಾಯಿಗಳನ್ನು ಪೋಷಿಸದವನ, ಧರ್ಮ ಕಾರ್ಯಕ್ಕಾಗಿ ಇತರರನ್ನು ಯಾಚಿಸುವವನ, ದೇವಬ್ರಾಹ್ಮಣರ ವೃತ್ತಿಗಳನ್ನು ಅಪಹರಿಸುವವನ, ಕನ್ಯಾಶುಲ್ಕ ಪಡೆದು ಅದರಿಂದ ಜೀವನ ನಡಸುವವನ, ಪಾಪವು ನನಗ ಉಂಟಾಗುವುದು ||೪೬-೪೭||

ಪಜ್ಞಾನ್ನವನ್ನುಣ್ಣುವ ವಿಪ್ರನ, ಪಾಷಂಡಿಯ, ಗುರುಪತ್ನಿಯನ್ನು ಸೇರುವವನ, ಸ್ವರ್ಣಾಪಹಾರಕನ ಪಾಪವು ನನಗೆ ಬರುವುದು ಸುರಾಪಾನಿಯ, ಬ್ರಹ್ಮಹತ್ಯಾಪಾತಕಿಯ, ಬನ್ಮನಿಂದಕನ, ಶಿವನನ್ನು ಹೊಗಳಿ ಹರಿಯನ್ನು ನಿಂದಿಸುವವರ ಹರಿಯನ್ನು ಹೊಗಳಿ ಶಿವನನ್ನು ನಿಂದಿಸುವವರ ಪಾಪಗಳನ್ನು ನಾನು ಹೊರಬೇಕಾಗುವುದು. ಆದ್ದರಿಂದ ಶರಣಾಗತರನ್ನು ಕೈಬಿಡಲಾರೆ ||೪೮-೪೯||

ಗಿಡುಗವೇ! ಖಿನ್ನನಾಗದಿರು ನಿನಗೆ ತೃಪ್ತಿಯಾಗುವಂತ ನಿನ್ನ ಬಾಯಿಗೆ ಬೇರ ಮಾಂಸವನ್ನು ಸ್ವತಃ ನನ್ನ ಕೈಯಿಂದಲೇ ನೀಡುವ. ಆದರೆ ನನ್ನ ಮೊರಹೊಕ್ಕ (ಬೆನ್ನಿಗೆ ಬಿದ್ದ) ಈ ಪಾರಿವಾಳವನ್ನು ಮಾತ್ರ ನೀನು ಬಿಟ್ಟು ಬಿಡು. ||೫೦||

**ಗಿಡುಗವು ಹೇಳಿತು –**

ರಾಜನೇ! ಪಾರಿವಾಳದ ತೂಕಕ್ಕೆ ಸಮಾನವಾಗಿ ನಿನ್ನ ದೇಹದ ಮಾಂಸವನ್ನು ನನಗೆ ಕೊಟ್ಟರ ತೃಪ್ತನಾಗುವೆ ನಿನ್ನ ಪುಣ್ಯವೂ ಹಾಳಾಗದು. ||೫೧||

ಗಿಡುಗದ ಈ ಮಾತನ್ನು ಕೇಳಿ ಶಿಬಿಯು ಹಾಗಯೇ ಆಗಲೆಂದು ಸಮ್ಮತಿಸಿದನು. ಒಡನೆಯೇ ಅಲ್ಲಿಗೊಂದು ತಕ್ಕಡಿಯನ್ನು ತರಿಸಿ ಅದರ ಒಂದು ತಟ್ಟೆಯಲ್ಲಿ ಆ ಪಾರಿವಾಳವನ್ನಿರಿಸಿದನು. ||೫೨||

ಇನ್ನೊಂದು ತಟ್ಟೆಯಲ್ಲಿ ತನ್ನ ದೇಹದ ಮಾಂಸವನ್ನು ಕತ್ತರಿಸಿ ಕತ್ತರಿಸಿ ಇಟ್ಟನು ಸ್ವಲ್ಪ ಕಡಿಮ ಬಂದಾಗ ಮತ್ತೆ ತನ್ನ ದೇಹದ ಅಂಗಾಂಗಗಳನ್ನು ತುಂಡು ತುಂಡು ಮಾಡಿ ಆ ತಕ್ಕಡಿಯಲ್ಲಿಟ್ಟನು. ||೫೩||

ಅಷ್ಟರಲ್ಲಿ ವಿಮಾನಗಳಿಂದ ದೇವತೆಗಳು ಪರಮಧನ್ಯನಾದ ಶರಣಾಗತ ವತ್ಸಲನಾದ ಶಿಬಿಯನ್ನು ಕಾಣಲು ಆಕಾಶದಲ್ಲಿ ಸೇರಿದರು. ||೫೪||

ದಯಾಳುವಾದ ಶಿಬಿ ಮಹಾರಾಜನ ಈ ದಾನವನ್ನು ಕಂಡು ಗಗನದಲ್ಲಿದ್ದ ದೇವತೆಗಳು 'ಶಿಬಿಯೇ! ನೀನು ಧನ್ಯನಾದೆ' ಎಂದು ಹೊಗಳಿದರು. ದೇವದುಂದುಭಿಗಳು ಮೊಳಗಿದವು ಶಿಬಿಯ ಮೇಲೆ ಪುಷ್ಪವೃಷ್ಟಿಯಾಯಿತು. ||೫೫||

ಇಂದ್ರ ಅಗ್ನಿಗಳೂ ಕೂಡ ತಮ್ಮ ನಿಜರೂಪವನ್ನು ಧರಿಸಿ 'ಮಹಾರಾಜ ಶಿಬಿ! ನಿನಗಿಷ್ಟವಾದ ವರವನ್ನು ಕೇಳು' ಎಂದು ರಾಜನಿಗೆ ಹೇಳಿದರು. ||೫೬||

ಶಿಬಿರುವಾಚ —

ಯದಿ ಪ್ರೀತೌ ಯುವಾಂ ದೇವೌ ವರಂ ದಾತುಂ ಯದೀಚ್ಛಥಃ ।
ಧರ್ಮೇ ಮೇ ರಮತಾಂ ಬುದ್ಧಿರ್ವರಮೇನಂ ಪ್ರಯಚ್ಛತಮ್ ॥೫೭॥

ಲಭತಾಂ ಪರ್ವತಸ್ತ್ವೇಷ ಕಪೋತಾಖ್ಯಾಂ ಹುತಾಶನ! ।
ಭೂಯಾದಿಂದ್ರ! ತಪಃಸಿದ್ಧಿಃ ಪರ್ವತೇಽಸ್ಮಿಂಸ್ತಪಸ್ವಿನಾಮ್ ॥೫೮॥

ಇತಿ ರಾಜವಚಃ ಶ್ರುತ್ವಾ ದತ್ವಾ ಚಾಭಿಮತಾನ್ ವರಾನ್ ।
ನೃಪಂ ಸಂಭಾವ್ಯ ಶಕ್ರಾಗ್ನೀ ಜಗ್ಮತುಸ್ತ್ರಿದಶೈಃ ಸಹ ॥೫೯॥

ಶಿಬಿರೌಶೀನರಸ್ತತ್ರ ಲೋಹಖಂಡಪುರೇ ತದಾ ।
ಸ್ವಪೌತ್ರಂ ಸ್ಥಾಪಯಾಮಾಸ ಸಮರ್ಥಂ ದೇಶಗುಪ್ತಯೇ ॥೬೦॥

ವೃತ್ತೀರ್ಬ್ರಾಹ್ಮಣಸಾತ್ಕೃತ್ವಾ ದತ್ವಾ ವಿದ್ಭ್ಯೋಽಭಯಂ ನೃಪಃ ।
ಉಷಿತ್ವಾ ಕತಿಚಿನ್ಮಾಸಾನ್ ನಿಜದೇಶಂ ಜಗಾಮ ಹ ॥೬೧॥

ತದಾ ಪ್ರಭೃತಿ ಶೈಲೋಽಭೂತ್ಕಪೋತ ಇತಿ ವಿಶ್ರುತಃ ।
ಲೋಹಖಂಡಂ ಶಿಬಿಪುರಂ ಬಭೂವ ಪ್ರಥಿತಂ ಭುವಿ ॥೬೨॥

ತಸ್ಮಿನ್ ಕಪೋತೇ ಬಹವಃ ಸಿದ್ಧಿಂ ಪ್ರಾಪ್ತಾಸ್ತಪೋಧನಾಃ ।
ಪ್ರಾಪ್ಸ್ಯಂತ್ಯಗ್ರೇಽಪಿ ಸಂಸಿದ್ಧಿಂ ತಾಪಸಾಸ್ತನ್ನಿವಾಸಿನಃ ॥೬೩॥

ಧನ್ಯಂ ಯಶಸ್ಯಮಾಯುಷ್ಯಂ ಕಪೋತಚರಿತಂ ಮಹತ್ ।
ಯೇ ಶೃಣ್ವಂತಿ ನರಾ ಭಕ್ತ್ಯಾ ಧೂತಪಾಪಾ ಭವಂತಿ ತೇ ॥೬೪॥

**ಇತಿಶ್ರೀ ಭವಿಷ್ಯೋತ್ತರ ಪುರಾಣೇ ಉತ್ತರಖಂಡೇ**
**ಕ್ರತುಪುರಮಾಹಾತ್ಮ್ಯೇ ಪ್ರಸ್ತಾವೇ**
**ಕಪೋತಪರ್ವತಮಾಹಾತ್ಮ್ಯವರ್ಣನಂ ನಾಮ ಪ್ರಥಮೋಽಧ್ಯಾಯಃ**

ಶಿಬಿಯು ಹೇಳಿದನು –

ದೇವತೆಗಳೇ! ನೀವು ಸುಪ್ರೀತರೂ, ವರ ಕೊಡಲು ಬಯಸುವವರೂ ಆಗಿರುವಿರೆಂದ ಮೇಲೆ 'ನನ್ನ ಬುದ್ಧಿಯು ಧರ್ಮದಲ್ಲಿ ದೃಢವಾಗಿರುವಂತ ವರವನ್ನು ದಯಪಾಲಿಸಿರಿ' ॥೫೭॥

ಭಗವಾನ್ ಹವ್ಯವಾಹನ! ಈ ಪರ್ವತವು ನಿನ್ನ ಅನುಗ್ರಹದಿಂದ 'ಕಪೋತ ಪರ್ವತ' ಎಂದು ಹೆಸರು ಪಡೆಯಲಿ ಪ್ರಭೋ ದೇವೇಂದ್ರ! ಈ ಪರ್ವತದಲ್ಲಿ ತಪಸ್ವಿಗಳ ತಪಸ್ಸು ಸಿದ್ಧಿಸಲಿ ॥೫೮॥

ರಾಜನ ಮಾತನ್ನು ಕೇಳಿದ ಇಂದ್ರ–ಅಗ್ನಿಗಳು ಅವನಿಗಿಷ್ಟವಾದ ಆ ಎಲ್ಲ ವರಗಳನ್ನು ಕೊಟ್ಟು ಅವನನ್ನು ಪ್ರಶಂಸಿಸಿ ದೇವತೆಗಳೊಂದಿಗೆ ದೇವಲೋಕಕ್ಕೆ ತೆರಳಿದರು ॥೫೯॥

ಉಶೀನರನ ಸುತನಾದ ಶಿಬಿಯು ಸಮರ್ಥನಾದ ತನ್ನ ಮೊಮ್ಮಗನನ್ನು ದೇಶಪಾಲನೆಗಾಗಿ ಲಕ್ಕುಂಡಿಯಲ್ಲಿಯೇ ನೆಲೆಗೊಳಿಸಿದನು ॥೬೦॥

ಶಿಬಿಯು ವಿಪ್ರರಿಗೆ ಜೀವಿಕಾರ್ಥ ವೃತ್ತಿಗಳನ್ನು ಕಲ್ಪಿಸಿಕೊಟ್ಟು ಸಜ್ಜನರಿಗೆ ರಕ್ಷಣೆಯನ್ನಿತ್ತು ಕೆಲವು ಮಾಸ ಲಕ್ಕುಂಡಿಯಲ್ಲಿ ವಾಸ ಮಾಡಿ ತನ್ನ ದೇಶಕ್ಕೆ ತೆರಳಿದನು. ॥೬೧॥

ಆಗಿನಿಂದ ಈ ಪರ್ವತವು 'ಕಪೋತಗಿರಿ' ಎಂದು ಹೆಸರು ಪಡೆಯಿತು. ಲಕ್ಕುಂಡಿಯು ಶಿಬಿಪುರವೆಂದು ಭೂತಲದಲ್ಲಿ ಪ್ರಸಿದ್ಧಿ ಹೊಂದಿತು. ॥೬೨॥

ಆ ಕಪೋತ ಪರ್ವತದಲ್ಲಿ ಅನೇಕ ತಪಸ್ವಿಗಳು ಸಿದ್ಧಿಯನ್ನು ಹೊಂದಿದ್ದರು. ಮುಂದೆಯೂ ಸಹ ಅಲ್ಲಿಯ ನಿವಾಸಿಗಳಾದ ತಾಪಸರು ಸಿದ್ಧಿಯನ್ನು ಹೊಂದುವರು. ॥೬೩॥

ಯಶಸ್ಕರವೂ ಪಾವನವೂ ಆದ ಈ ಕಪೋತ ಚರಿತೆಯನ್ನು ಭಕ್ತಿಯಿಂದ ಕೇಳುವ ಜನರ ಪಾಪವು ಕರಗಿ ಹೋಗುವದು ॥೬೪॥

ಭವಿಷ್ಯೋತ್ತರ ಪುರಾಣದ ಉತ್ತರ ಖಂಡದಲ್ಲಿನ
ಕ್ರತುಪುರ ಮಾಹಾತ್ಮ್ಯಯಲ್ಲಿ
ಕಪೋತಪರ್ವತ ಮಾಹಾತ್ಮ್ಯಯೆಂಬ ಮೊದಲನೆಯ ಅಧ್ಯಾಯವು ಮುಗಿಯಿತು.

# ಅಥ ದ್ವಿತೀಯೋಽಧ್ಯಾಯಃ

**ಋಷಯ ಊಚುಃ –**

ಸಾಧು ಸಾಧು ಮಹಾಭಾಗ ಸೂತ ಜೀವ ಶತಂ ಸಮಾಃ ।
ಕಪೋತಚರಿತಂ ಪುಣ್ಯಂ ಯತ್ತ್ವಯಾ ಶ್ರಾವಿತಂ ಮಹತ್ ॥೧॥

ಬ್ರೂಹಿ ಕ್ರತುಪುರಾಖ್ಯಾನಮುತ್ಕಂಠಾ ನಃ ಪ್ರಬಾಧತೇ ।
ಯದ್ಯಚ್ಚರಿತ್ರಂ ತತ್ರಾಭೂತ್ತತ್ಸರ್ವಂ ಕಥಯಸ್ವ ನಃ ॥೨॥

ಶಂಭೋಸ್ತ್ರಿಕೂಟಸಂಜ್ಞಾ ತು ಕಥಮಾಸೀನ್ಮಹಾತ್ಮನಃ ।
ಕ್ರತುಸಂಜ್ಞಾ ಪುರಸ್ಯಾಪಿ ತದಾಚಕ್ಷ್ವಾಽಭವತ್ಕಥಮ್ ॥೩॥

**ಸೂತ ಉವಾಚ –**

ಶೃಣುಧ್ವಂ ಮುನಯಃ ಸರ್ವೇ ನೈಮಿಷಾರಣ್ಯವಾಸಿನಃ ।
ಏಕಾಗ್ರಮನಸೋ ಭೂತ್ವಾ ಕಥಾಂ ಪಾಪಾಪನೋದಿನೀಮ್ ॥೪॥

ಏಕದಾ ಬ್ರಹ್ಮಣಃ ಪುತ್ರಾ ಮಾನಸಾ ಬ್ರಹ್ಮವಾದಿನಃ ।
ನವ ಬ್ರಹ್ಮಾಣ ಇತಿತೇ ಪುರಾಣೇ ನಿಶ್ಚಯಂ ಗತಾಃ ॥೫॥

ಮರೀಚಿರಂಗಿರಾ ಅತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ ।
ಭೃಗುರ್ವಸಿಷ್ಠೋ ದಕ್ಷಶ್ಚ ನವೈತೇ ಪರಿಕೀರ್ತಿತಾಃ ॥೬॥

ಭೂಲೋಕಮಾಗಮನ್ ತೇ ವೈ ತಪಃ ಕರ್ತುಂ ತಪೋಧನಾಃ ।
ಅನುಜ್ಞಾಪ್ಯ ಸ್ವಪಿತರಂ ಬ್ರಹ್ಮಾಣಂ ಪರಮೇಷ್ಠಿನಮ್ ॥೭॥

ಯಥಾರುಚಿ ಭುವೋ ಭಾಗಾನ್ ಭೇಜಿರೇ ತೇ ಪೃಥಕ್ ಪೃಥಕ್ ।
ಅನ್ವಿಷ್ಯನ್ನುತ್ತಮಂ ಸ್ಥಾನಂ ಕ್ರತುಸ್ತತ್ರಾಜಗಾಮ ಹ ॥೮॥

ಅವಿದೂರೇ ಕಪೋತಸ್ಯ ದದರ್ಶ ಗಹನಂ ಮುನಿಃ ।
ನಾನಾವೃಕ್ಷಲತಾಕೀರ್ಣಂ ಝಿಲ್ಲೀಝಂಕಾರನಾದಿತಮ್ ॥೯॥

ಕುಬೇರಾಕ್ಷವನಂ ಪ್ರಾಹುಸ್ತತ್ರತ್ಯಾಸ್ತದ್ವಿಹುತ್ತಮಃ ।
ವಿಲೋಕ್ಯ ತದ್ವನಂ ತಸ್ಯ ಪ್ರಸಸಾದ ಕ್ರತೋರ್ಮನಃ ॥೧೦॥

ಉವಾಸ ತತ್ರ ಕತಿಚಿದ್ದಿನಾನಿ ದ್ಯುಮಣಿದ್ಯುತಿಃ ।
ಕ್ರತುಸ್ತದಾಭವತ್ತ್ರಾಸಃ ಸಮಂತಾದ್ದ್ವಿಜನ್ಮನಾಮ್ ॥೧೧॥

# ಎರಡನೆಯ ಅಧ್ಯಾಯ

**ಋಷಿಗಳು ಹೇಳಿದರು –**

ಸೂತ! ಮಹತ್ತರವಾದ ಕಪೋತ ಚರಿತೆಯನ್ನು ನಮ್ಮೆಲ್ಲರಿಗೂ ಹೇಳಿದಿ ಮಹಾಭಾಗ ಸೂತ! ನೀನು ನೂರು ವರ್ಷ ಬದುಕು ||೧||

ಸೂತ! ಕ್ರತುಪುರದ ಕಥಾವರ್ಣನೆಯನ್ನು ಕೇಳಲು ನಾವು ಬಹಳ ಉತ್ಕಂಠಿತ ರಾಗಿದ್ದೇವೆ ಆ ಆಖ್ಯಾನದಲ್ಲಿರುವ ಎಲ್ಲ ಚರಿತೆಗಳನ್ನೂ ನಮಗೆ ತಿಳಿಸು ||೨||

ಮಹಾತ್ಮನಾದ ಪರಶಿವನಿಗೆ 'ತ್ರಿಕೂಟೆ'ನೆಂಬ ಹೆಸರು ಹೇಗೆ ಬಂದಿತು? ಆ ಪಟ್ಟಣವು ಕ್ರತುಪುರವೆಂದು ಹೇಗೆ ಪ್ರಸಿದ್ಧಿ ಹೊಂದಿತು? ಇವೆಲ್ಲವನ್ನೂ ತಿಳಿಸು. ||೩||

**ಸೂತನು ಹೇಳಿದನು –**

ನೈಮಿಷಾರಣ್ಯ ವಾಸಿ ಮುನಿಗಳೇ! ಪಾಪನಾಶಕವಾದ ಕಥೆಯನ್ನು ಹೇಳುವೆ. ಏಕಾಗ್ರತೆಯಿಂದ ಕೇಳಿರಿ ||೪||

ಬ್ರಹ್ಮದೇವನಿಗೆ ನವಬ್ರಹ್ಮರೆಂದೇ ಪುರಾಣಗಳಲ್ಲಿ ಪ್ರಸಿದ್ಧರಾದ ತತ್ತ್ವ ಬೋದಕರಾದ ಒಂಬತ್ತು ಜನ ಮಾನಸಪುತ್ರರಿದ್ದರು ಅವರು "ಮರೀಚಿ, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠ, ದಕ್ಷ ಎಂದು ಪ್ರಸಿದ್ಧರಾಗಿದ್ದರು

ಒಮ್ಮೆ ತಪೋಧನರಾದ ಇವರೆಲ್ಲ ತಮ್ಮ ತಂದೆಯಾದ ಬ್ರಹ್ಮದೇವನ ಅಪ್ಪಣೆಯನ್ನು ಪಡೆದು ತಪಃ ಸಾಧನೆಗೈಯಲು ಭೂಲೋಕಕ್ಕಾಗಮಿಸಿದರು. ||೫ ೭||

ಅವರೆಲ್ಲರೂ ತಮಗಿಷ್ಟವಾದ ಆ ಬೇರೆ ಬೇರೆ ಭೂಭಾಗಗಳನ್ನು ಸ್ಥಾನವನ್ನು ಕಂಡುಕೊಂಡರು ಅವರಲ್ಲಿ ಕ್ರತುವೆಂಬ ಮಹರ್ಷಿಗಳು ಉತ್ತಮವಾದ ಸ್ಥಾನವನ್ನು ಅರಸುತ್ತ ಈ ಕಡೆ ಬಂದರು. ||೮||

ಅವರು ಸಮೀಪದಲ್ಲಿಯೇ ಕಪೋತ ಪರ್ವತದ ಸಮೀಪದಲ್ಲಿದ್ದ ಅರಣ್ಯವನ್ನು ನೋಡಿದರು. ಆ ಕಾನನದಲ್ಲಿ ವಿವಿಧ ವೃಕ್ಷರಾಜಿಗಳು ಬೆಳೆದು ನಿಂತಿದ್ದವು. ಆ ಪ್ರದೇಶವು ಜೀರುಂಡ ಹುಳುಗಳ ಝೇಂಕಾರದಿಂದ ತುಂಬಿ ಹೋಗಿತ್ತು. ಅಲ್ಲಿ ಕುಬೇರಾಕ್ಷ ವೃಕ್ಷಗಳು ಅಂದರೆ ಗಜಗದ ಮರಗಳು ಬಹಳ ಇದ್ದ ಕಾರಣ ಜನರು ಅದನ್ನು 'ಕುಬೇರಾಕ್ಷ ವನ' ವೆಂದು ಹೇಳುತ್ತಿದ್ದರು. ಆ ವನವನ್ನು ನೋಡಿ ಕ್ರತುಮುನಿಯ ಮನಸ್ಸು ಬಹಳ ಪ್ರಸನ್ನವಾಯಿತು. || ೯-೧೦ ||

ತೇಜಸ್ವಿಗಳಾದ ಕ್ರತುಮುನಿಗಳು ಕೆಲವು ದಿನ ಅಲ್ಲಿಯೇ ವಾಸ ಮಾಡಿದರು. ಆಗ ಅಲ್ಲಿಯ ಸುತ್ತ-ಮುತ್ತಲಿನ ದೈತ್ಯರಿಗೆ ಭಯವುಂಟಾಯಿತು. ||೧೧||

ಕಪೋತಪರ್ವತೋ ಯಸ್ತು ಸ ಪೂರ್ವಂ ಸಿದ್ಧಪರ್ವತಃ ।
ಕಪೋತರೋಮಾ ತತ್ರಾಸೀದ್ದೈತ್ಯ ಆಕ್ರಾಂತಮಂಡಲಃ ॥೧೨॥

ತಸ್ಮಿನ್ನಿವೃತಿ ನಾವಾತ್ಸುಃ ಪ್ರಜಾ ದೈತ್ಯಭಯಾತುರಾಃ ।
ದೈತೇಯಾ ಏವ ತತ್ರೋಷುಃ ಪರ್ವತೇಷು ತತಸ್ತತಃ ॥೧೩॥

ಕಪೋತರೋಮ್ಣಾ ದೈತ್ಯೇನ ತೇನಾಕಾರಿ ಮಹತ್ತಪಃ ।
ಶೀರ್ಣಪರ್ಣಾಶಿನಾಽತ್ಯುಗ್ರಂ ತಸ್ಮಿನ್ನೇವಾಚಲೇ ಚಿರಮ್ ॥೧೪॥

ತಸ್ಯ ಪ್ರಸನ್ನೋ ದೈತ್ಯಸ್ಯ ಬಭೂವ ಭಗವಾನ್ ಭವಃ ।
ವರಂ ವೃಣೀಷ್ವಾಭಿಮತಮಿತ್ಯುವಾಚ ತಮೀಶ್ವರಃ ॥೧೫॥

ಯಃ ಪುರಾಣಋಷಿಃ ಕಶ್ಚಿತ್ತಸ್ಮಾನ್ಮೃತ್ಯುರ್ಮಮಾಸ್ತ್ವಿತಿ ।
ತಂ ವಿನಾ ಸರ್ವದೇವೇಭ್ಯೋ ಮಾಽಭೂನ್ಮಮ ಪರಾಜಯಃ ॥೧೬॥

ತಸ್ಯ ತದ್ವಚನಂ ಶ್ರುತ್ವಾ ಪ್ರಹಸ್ಯ ಗಿರಿಜಾಪತಿಃ ।
ದೈತೇಯಾಭಿಮತಂ ಯತ್ತೇ ತತ್ತಥೈವ ಭವಿಷ್ಯತಿ ॥೧೭॥

ಇತ್ಯುಕ್ತ್ವಾ ಭಗವಾನ್ ಶಂಭುಸ್ತತ್ರೈವಾಂತರಧೀಯತ ।
ಕಪೋತರೋಮಾ ತಪಸೋ ವಿರರಾಮ ಕೃತಾರ್ಥವತ್ ॥೧೮॥

ತತೋಽಸ್ಯ ಬಾಂಧವಾಃ ಸರ್ವೇ ಸಮಾಪೇತುಸ್ತತಸ್ತತಃ ।
ಸಮಾಚಕ್ರಾಮ ತೈಃ ಸಾರ್ಧಂ ಸ ದೇವವರದರ್ಪಿತಃ ॥೧೯॥

ಜಹಾರ ಕನ್ಯಾ ಲೋಕಾನಾಂ ರೂಪಿಣೀಃ ಸತತಂ ತತಃ ।
ಪ್ರಾಗುಕ್ತಂ ಲೋಹಖಂಡಂ ಯತ್ತತ್ತೇನ ರಚಿತಂ ಪುರಮ್ ॥೨೦॥

ತತ್ರೋವಾಸ ಸ ದುಷ್ಟಾತ್ಮಾ ಸ್ಥಾಪಿತಾಃ ಸ್ವಾಃ ಸಮಂತತಃ ।
ನಾಗಾರ್ಜುನಾಹ್ವಯಸ್ತಸ್ಯ ಶ್ಯಾಲೋ ನಾಗಪುರೇಽವಸತ್ ॥೨೧॥

ಸ ಸಿದ್ಧವಲ್ಲೀಂ ಜಾನಾತಿ ಪುರಟಂ ಜಾಯತೇ ಯಯಾ ।
ಶೈಲಂ ನಾಗಪುರಾಭ್ಯಾಶೇ ಸ ಸ್ವರ್ಣಂ ಕರ್ತುಮುದ್ಯತಃ ॥೨೨॥

ಕ್ರತೌ ಸಮಾಗತೇ ತತ್ರ ತೇಷಾಂ ತ್ರಾಸೋ ಮಹಾನಭೂತ್ ।
ಯೇತಿರೇ ತೇ ತದಾ ವಿಘ್ನಾನ್ ಕರ್ತುಂ ನೈಕವಿಧಾನ್ ಕ್ರತೋಃ ॥೨೩॥

ನ ಶೇಕುಸ್ತೇ ಕ್ರತುಂ ಜೇತುಂ ಶಲಭಾ ಇವ ಪಾವಕಮ್ ।
ಚಕ್ರುಃ ಪುನಃ ಪುನರ್ಯತ್ನಂ ಕ್ರತುಂ ಜೇತುಂ ತಪೋನಿಧಿಮ್ ॥೨೪॥

ಈಗಿನ ಕಪೋತ ಪರ್ವತವು ಪೂರ್ವದಲ್ಲಿ ಸಿದ್ಧ ಪರ್ವತವೆಂದು ಹೆಸರುವಾಸಿಯಾಗಿತ್ತು. ಆ ಪ್ರದೇಶವನ್ನೆಲ್ಲ ವಶಪಡಿಸಿಕೊಂಡಿದ್ದ ಕಪೋತರೋಮನೆಂಬ ಅಸುರನು ಅಲ್ಲಿ ವಾಸವಾಗಿದ್ದನು ।।೧೨।।

ಆ ಜನಪದದಲ್ಲಿ ದೈತ್ಯನ ಭೀತಿಯಿಂದ ಯಾವ ಪ್ರಜೆಗಳೂ ವಾಸಿಸಲಿಲ್ಲ. ಅದನ್ನು ದನುಜರೇ ತಮ್ಮ ವಾಸಸ್ಥಾನ ಮಾಡಿಕೊಂಡರು ।।೧೩।।

ಆ ಪರ್ವತದಲ್ಲಿ ಕಪೋತರೋಮ ದೈತ್ಯನು ಹಣ್ಣಾಗಿ ಉದುರಿದ ಎಲೆಗಳನ್ನು ತಿಂದುಕೊಂಡು ಬಹಳ ಕಾಲ ಅತ್ಯುಗ್ರವಾದ ತಪಸ್ಸನ್ನಾಚರಿಸಿದನು ।।೧೪।।

ಅವನ ತಪಸ್ಸಿಗೆ ಮೆಚ್ಚಿದ ಭಗವಾನ್ ಪರಶಿವನು ಇಷ್ಟವಾದ ವರವನ್ನು ಕೇಳಲು ಆ ದನುಜನಿಗೆ ಹೇಳಿದನು ।।೧೫।।

ಆ ದೈತ್ಯನು 'ಬಹಳ ಪ್ರಾಚೀನನಾದ ಋಷಿಯಿಂದ ಮಾತ್ರ ನನಗೆ ಮೃತ್ಯು ಒದಗಲಿ ಅವನ ಹೊರತು ಯಾವ ದೇವತೆಗಳಿಂದಲೂ ನನಗೆ ಅಪಾಯವು ಉಂಟಾಗದಿರಲಿ' ಎಂದು ಬೇಡಿದನು ।।೧೬।।

ಕಪೋತರೋಮನ ನುಡಿಯನ್ನಾಲೈಸಿದ ಪಾರ್ವತೀವಲ್ಲಭನಾದ ಶಂಕರನು ಮುಗುಳುನಗೆ ಬೀರಿ 'ದನುಜ! ನಿನ್ನ ಅಭಿಮತದಂತೆಯೇ ಆಗುವುದೆಂದು ಹೇಳಿ ಅಲ್ಲಿಯೇ ಅಂತರ್ಧಾನನಾದನು. ತನಗಿಷ್ಟವಾದ ವರ ಹೊಂದಿದ ಕಪೋತರೋಮನು ತನ್ನ ತಪಃಸಾಧನೆಯನ್ನು ಮುಗಿಸಿದನು ।। ೧೭–೧೮ ।।

ನಂತರ ಸುತ್ತಮುತ್ತಲಿನಿಂದ ಅವನ ಮಿತ್ರ ಬಾಂಧವರು ಅವನನ್ನು ಆಶ್ರಯಿಸಿದರು. ಪರಶಿವನ ವರದಿಂದ ದರ್ಪಿಷ್ಠನಾದ ಕಪೋತರೋಮನು ತನ್ನ ಬಾಂದವರೊಡನೆ ಅಕ್ಕಪಕ್ಕದ ಜನರ ಸುಂದರ ಕನ್ಯೆಯರನ್ನು ಅಪಹರಿಸಿದನು. ಹಿಂದೆ ಹೇಳಿದ (ಲೋಹಖಂಡ) ಲಕ್ಕುಂಡಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ತನ್ನ ಸುತ್ತಲೂ ತನ್ನ ಜನರನ್ನೇ ಸ್ಥಾಪಿಸಿದನು. ಕಪೋತರೋಮ ದೈತ್ಯನ ಹೆಂಡತಿಯ ಸೋದರ 'ನಾಗಾರ್ಜುನ' ನೆಂಬುವನು ಸಮೀಪದ 'ನಾಗಪುರ' (ನಾಗಾವಿ) ದಲ್ಲಿ ವಾಸಿಸುತ್ತಿದ್ದನು ।।೧೯–೨೧।।

ಬಂಗಾರವನ್ನು ತಯಾರಿಸುವ ವನಸ್ಪತಿಯೊಂದನ್ನು ಅರಿತಿದ್ದ ನಾಗಾರ್ಜುನನು ನಾಗಾವಿಯ ಹತ್ತಿರವಿದ್ದ ಪರ್ವತವನ್ನು ಸ್ವರ್ಣವನ್ನಾಗಿ ಮಾಡಲುಪಕ್ರಮಿಸಿದನು.।।೨೨।।

ಅಲ್ಲಿಗೆ ಕ್ರತುಮುನಿಗಳಾಗಮಿಸಿದೊಡನೆ ಅಸುರರಿಗೆ ಬಹಳ ತೊಂದರೆಯಾಯಿತು. ಆದ್ದರಿಂದ ಅಸುರರೆಲ್ಲರೂ ಕ್ರತು ಮುನಿಗಳಿಗೆ ವಿವಿಧ ಉಪದ್ರವಗಳನ್ನು ಮಾಡಲು ಪ್ರಯತ್ನಿಸಿದರು ।।೨೩।।

ಆದರೆ ಬೆಂಕಿಯನ್ನು ಪತಂಗವು ಎದುರಿಸಲಾಗದ ಹಾಗೆ ಆ ದನುಜರಿಗೆ ಕ್ರತುಮುನಿಗಳನ್ನು ಎದುರಿಸಲಾಗಲಿಲ್ಲ. ಆದರೂ ತಪೋನಿಧಿಯಾದ ಕ್ರತುಮುನಿಯನ್ನು ಗೆಲ್ಲಲು ಮತ್ತೆ ಮತ್ತೆ ಯತ್ನಿಸಿದರು. ।।೨೪।।

ಏಕಸ್ಮಿನ್ನಿವನೇಽಕಸ್ಮಾದ್ವಾಗಾಸೀದಶರೀರಿಣೀ ।
ಕ್ರತೋ! ಮಾ ಖಿದ್ಯ ಗಚ್ಛ ತ್ವಂ ತ್ವರಯಾ ಬದರೀವನಮ್ ।।೨೫।।

ಪುರಾಣೌ ತತ್ರ ವರ್ತೇತೇ ನರನಾರಾಯಣಾವೃಷೀ ।
ಧರ್ಮಪುತ್ರೌ ಹರೇರಂಶೌ ಮಹತಾಂ ತಪಸಾಂ ನಿಧೀ ।।೨೬।।

ನಾರಾಯಣಸ್ತಯೋರ್ಜ್ಯಾಯಾನ್ ಪ್ರಾರ್ಥಯಿತ್ವಾ ತಮಾನಯ ।
ಸ ಏತಾನಸುರಾನ್‌ತ್ಸರ್ವಾನ್ನಿಃಶೇಷಂ ನಾಶಯಿಷ್ಯತಿ ।।೨೭।।

ಕಪೋತರೋಮ್ಣಾ ದೈತ್ಯೇನ ವರ ಏಷ ವೃತಃ ಪುರಾ ।
ಯಃ ಪುರಾಣಋಷಿಃ ಕಶ್ಚಿತ್ತಸ್ಮಾನ್ಮೃತ್ಯುರ್ಮಮಾಸ್ತ್ವಿತಿ ।।೨೮।।

ಇತಿ ತಾಂ ವಾಚಮಾಕರ್ಣ್ಯ ಯೋಗಗತ್ಯಾ ಕ್ರತುರ್ವಿಯತ್ ।
ತದೈವಾಚಕ್ರಮೇ ಗಂತುಮಚಿರಾತ್ತುಹಿನಾಚಲಮ್ ।।೨೯।।

ಸ ಗಂಧಮಾದನೇಽದ್ರಾಕ್ಷೀನ್ನರನಾರಾಯಣಾಶ್ರಮಮ್ ।
ಮುನ್ಯಾಶ್ರಮೈಃ ಪರಿವೃತಂ ಬದರೀಖಂಡಮಂಡಿತಮ್ ।।೩೦।।

ವಿಷ್ಣುಪದ್ಯಾ ಮಹಾನದ್ಯಾ ಪರೀತಂ ಸುಮನೋಹರಮ್ ।
ಕೂಜತ್ಪಕ್ಷಿಕುಲಾನೇಕವಿಧಾರಾವಹೃತಶ್ರಮಮ್ ।।೩೧।।

ಅಪೇತಪಾರಷಡ್ಭ್ಯೋ ಷ್ಯರುಪೇತ್ಯೈಃ ಪಾರಷಡ್ಗುಣ್ಯೈಃ ।
ವೇದಘೋಷೈಃ ಸಮಾಘುಷ್ಟಂ ಶಾಸ್ತ್ರಪಾರೈರಿತಸ್ತತಃ ।।೩೨।।

ತಪಸ್ವಿಭಿರ್ಧ್ಯಾನಪರೈರಾತ್ಮಾರಾಮೈರಲಂಕೃತಮ್ ।
ಸಿದ್ಧಗಂಧರ್ವವಿದ್ಯಾಧ್ರಯಕ್ಷಕಿನ್ನರಸೇವಿತಮ್ ।।೩೩।।

ತಮಾಶ್ರಮಂ ಸಮಾಸಾದ್ಯ ದೃಷ್ಟ್ವಾ ನಾರಾಯಣಂ ಮುನಿಮ್ ।
ವವಂದೇ ಮನಸಾ ಭಕ್ತ್ಯಾ ಭಗವಂತಂ ಸನಾತನಮ್ ।।೩೪।।

ತುಷ್ಟಾವ ವಾಗ್ಭಿರಿಷ್ಟಾಭಿಃ ಪ್ರೇಮತುಷ್ಟಾಭಿರಾದರಾತ್ ।
ವಿಶಿಷ್ಟಂ ಸರ್ವದೇವಾನಾಂ ಪುರುಹೂತಂ ಪುರುಷ್ಟುತಮ್ ।।೩೫।।

ಕ್ರತುರುವಾಚ —

ಓಂ ನಮಃ ಸರ್ವಭೂತಾನಾಂ ಜನ್ಮಸ್ಥಿತ್ಯಂತಹೇತವೇ ।
ಸಚ್ಚಿದಾನಂದರೂಪಾಯ ಮಾಯಿನೇ ಪರಮಾತ್ಮನೇ ।।೩೬।।

ಒಂದು ದಿನ ಅಕಸ್ಮಾತ್ ಅಶರೀರವಾಣಿಯೊಂದು "ಕ್ರತುಮುನಿಯೇ! ನೀನು ಖಿನ್ನನಾಗಬೇಡ ಬೇಗನೇ ಬದರಿಕಾಶ್ರಮಕ್ಕೆ ಹೋಗು. ಅಲ್ಲಿ ಪ್ರಾಚೀನರಾದ ನರ ನಾರಾಯಣ ಋಷಿಗಳಿದ್ದಾರೆ ಅವರಿಬ್ಬರೂ ಮಹಾವಿಷ್ಣುವಿನ ಅಂಶದವರೂ, ಧರ್ಮಪುತ್ರರೂ, ತಪೋನಿಧಿಗಳೂ ಆಗಿರುವರು

ಅವರಿಬ್ಬರಲ್ಲಿ ಹಿರಿಯನಾದ ನಾರಾಯಣ ಋಷಿಯನ್ನು ಪ್ರಾರ್ಥಿಸಿ ಇಲ್ಲಿಗೆ ಕರೆದು ತಾ ಆತನೇ ಈ ಎಲ್ಲ ದಾನವರನ್ನು ಸಂಪೂರ್ಣವಾಗಿ ಸಂಹರಿಸುವನು

ಕಪೋತರೋಮದನುಜನು ಪ್ರಾಚೀನನಾದ ಯಾವನಾದರೂ ಋಷಿಯಿಂದಲೇ ತನಗೆ ಮೃತ್ಯುವೊದಗಬೇಕು ಎಂದು ಪರಶಿವನಿಂದ ವರ ಪಡೆದಿದ್ದಾನೆ" ಎಂದು ನುಡಿಯಿತು ॥೨೫–೨೮॥

ಈ ಅಶರೀರವಾಣಿಯನ್ನು ಕೇಳಿದ ಕ್ರತುಮುನಿಯು ಯೋಗ ಬಲದಿಂದ ಆಕಾಶವನ್ನು ಸೇರಿ ಕೂಡಲೇ ಹಿಮಾಲಯಕ್ಕೆ ಹೋಗಲನುವಾದನು. ॥೨೯॥

ಕ್ರತುಮುನಿಯು ಮಾರ್ಗ ಕ್ರಮಿಸುತ್ತ ಗಂಧಮಾದನಪರ್ವತದಲ್ಲಿ ಶ್ರೀನರ ನಾರಾಯಣಾಶ್ರಮವನ್ನು ನೋಡಿದನು ಅನೇಕ ಮುನಿಗಳ ಆಶ್ರಮಗಳಿಂದ ಸುತ್ತುವರಿದಿದ್ದ ನಾರಾಯಣಾಶ್ರಮವು ಬದರಿಯ ಒಂದು ಭಾಗದಲ್ಲಿ ವಿರಾಜಮಾನವಾಗಿತ್ತು ಅದರ ಸುತ್ತಲೂ ಪರಮಪಾವನಯಾದ ಅಲಕನಂದಾನದಿಯು ಪ್ರವಹಿಸುತ್ತಿತ್ತು. ವಿವಿಧ ಪಕ್ಷಿಗಳ ಬಗೆ ಬಗೆಯ ಮಧುರ ಸ್ವರಗಳಿಂದ ಆ ಆಶ್ರಮ ಪ್ರದೇಶವು ಅಲ್ಲಿಗೆ ಹೋದವರ ಆಯಾಸವನ್ನು ಪರಿಹರಿಸುತ್ತಿತ್ತು. ॥೩೦–೩೧॥

ಪಾರಕರ ಷಡ್ದೋಷಗಳಿಂದ ರಹಿತವಾದ, ಷಡ್ಗುಣಗಳಿಂದ ಕೂಡಿದ ವೇದಘೋಷವು ಅಲ್ಲಿ ಪ್ರತಿಧ್ವನಿಸುತ್ತಿತ್ತು ಅಲ್ಲಲ್ಲಿ ವಿವಿಧ ಶಾಸ್ತ್ರಪಾಠಗಳು ಕೇಳಿ ಬರುತ್ತಿದ್ದವು ॥೩೨॥

ಬ್ರಹ್ಮಾನುಭಾವಿಗಳಾದ ತಪಸ್ವಿಗಳು, ಸಿದ್ಧರು, ಗಂಧರ್ವರು, ವಿದ್ಯಾಧರರು, ಕಿನ್ನರರು ನಾರಾಯಣಾಶ್ರಮವನ್ನು ಆಶ್ರಯಿಸಿದ್ದರು ॥೩೩॥

ಕ್ರತುಮುನಿಯು ಆಶ್ರಮವನ್ನು ಸಮೀಪಿಸಿ ಪ್ರಾಚೀನನಾದ ಭಗವಾನ್ ನಾರಾಯಣ ಮುನಿಯನ್ನು ಕಂಡು ಭಕ್ತಿಯಿಂದ ಮನಃಪೂರ್ವಕ ನಮಿಸಿದನು. ॥೩೪॥

ಪ್ರೇಮಭರಿತವಾದ ಸುಂದರ ನುಡಿಗಳಿಂದ ದೇವತೆಗಳಿಗೊಡೆಯನಾದ ಜಗದ್ವಂದ್ಯನಾದ ನಾರಾಯಣನನ್ನು ಸ್ತುತಿಸಿದನು. ॥೩೫॥

ಕ್ರತುವು ಹೇಳಿದನು –

ಸಕಲ ಜೀವಿಗಳ ಸೃಷ್ಟಿ–ಸ್ಥಿತಿ ನಾಶಗಳಿಗೆ ಕಾರಣನಾದ ಸಚ್ಚಿದಾನಂದ ಸ್ವರೂಪಿಯಾದ ಮಾಯಾಶ್ರಯನಾದ ನಾರಾಯಣ ಪರಮಾತ್ಮನಿಗೆ ನಮಸ್ಕಾರವಿರಲಿ. ॥೩೬॥

ಅನಂತಕಲ್ಯಾಣಗುಣಾಲಂಕೃತಾಯಾಗುಣಾಯ ಚ ।
ಗುಣೈರಗಣ್ಯೈರ್ಮುನಿಭಿರ್ಭಾವಿತಾಯ ಭವಚ್ಛಿದೇ ॥೩೭॥

ನಮೋ ವೇದೈಕವೇದ್ಯಾಯ ವೇದಾತೀತಾಯ ವಿತ್ತಯೇ ।
ವಿಯತ್ಪವನತೇಜೋಂಭೋದರಾಂತರ್ಯಾಮಿಣೇ ನಮಃ ॥೩೮॥

ತ್ವತ್ತಃ ಸರ್ವಂ ತ್ವಯಾ ಸರ್ವಂ ತ್ವಯಿ ಸರ್ವಂ ಪ್ರತಿಷ್ಠಿತಮ್ ।
ತ್ವಮೇವ ಸರ್ವಂ ಸರ್ವೇಶ! ಜೀವಾಃ ಸರ್ವೇ ತ್ವದಂಶಕಾಃ ॥೩೯॥

ಸೃಷ್ಟಯೇ ಬ್ರಹ್ಮರೂಪೋಽಸಿ ಸ್ಥಿತಯೇ ವಿಷ್ಣುರೂಪಧೃಕ್ ।
ರುದ್ರರೂಪೋಽಸಿ ಜಗತಾಮಂತೇ ಸಂಹೃತಯೇ ಭವಾನ್ ॥೪೦॥

ಅಸ್ಮತ್ಪಿತಾ ನ ತೇ ಪುತ್ರಸ್ತಸ್ಯ ಪೌತ್ರೋ ಭವಾನಪಿ ।
ಯತಃ ಪುತ್ರೋಽಸಿ ಮೇ ದೇವ! ತ್ವಾಮತೋ ವಚ್ಮಿ ತಚ್ಛೃಣು॥೪೧॥

ದಕ್ಷಿಣೇ ಕೃಷ್ಣವೇಣ್ಯಾಸ್ತು ಸ್ಥಾನಮಸ್ತ್ಯತಿಪಾವನಮ್ ।
ಕಪೋತರೋಮ್ಣಾ ದೈತ್ಯೇನ ತದಾಕ್ರಾಂತಂ ಜಗದ್ಗುರೋ! ॥೪೨॥

ತಸ್ಯ ಮೃತ್ಯುರ್ಭವಾನೇವ ಕಾಲಕಂಠೇನ ಕಲ್ಪಿತಃ ।
ಅತ ಏಹಿ ಮಯಾ ಸಾರ್ಧಂ ಜಹಿ ತಂ ಲೋಕಕಂಟಕಮ್ ॥೪೩॥

ಮಾ ಭಾಂಕ್ಷೀಃ ಪ್ರಣಯಂ ದೇವ! ಪ್ರಣತಾರ್ತಿಪ್ರಭಂಜನ! ।
ಜಗದ್ಧೇತೋ! ಪ್ರಸನ್ನಾಸ್ಯ! ಶರಣ್ಯ! ಶರಣಾರ್ಥಿನಃ ॥೪೪॥

ತತಃ ಪ್ರಸನ್ನೋ ಭಗವಾನೂಚೇ ನಾರಾಯಣಃ ಕ್ರತುಮ್ ।
ತವಾಭಿಲಷಿತಂ ಕುರ್ವೇ ಯತೋ ಮಾನ್ಯೋ ಭವಾನ್ ಮಮ ॥೪೫॥

ಇತ್ಯುಕ್ತ್ವಾ ಕ್ರತುನಾ ತೇನ ಪ್ರತಸ್ಥೇ ಭಗವಾಂಸ್ತದಾ ।
ಜಗ್ಮತುರ್ಯೋಗಗತ್ಯಾ ತೌ ಕ್ರತುನಾರಾಯಣಾವೃಷೀ ॥೪೬॥

ಆಸೇದತುರ್ಮುಹೂರ್ತೇನ ಶೂನ್ಯಂ ಗ್ರಾಮಮಹೋಬಲಮ್ ।
ತತ್ರ ನಾರಾಯಣೋ ನ್ಯಜಂ ಯೋಗಿರೂಪಂ ನ್ಯವೀವಿಶತ್ ॥೪೭॥

ವೀರನಾರಾಯಣೋ ಭೂತ್ವಾ ರಥಮಾರುಹ್ಯ ದಂಶಿತಃ ।
ನಿಜಾಯುಧಾನಿ ಬಿಭ್ರಾಣಃ ಪ್ರತಸ್ಥೇ ಕ್ರತುಸಾರಥಿಃ ॥೪೮॥

ಕುಬೇರಾಕ್ಷವನಂ ಪ್ರಾಪ್ಯ ಶಂಖಂ ದಧ್ಮೌ ಪ್ರತಾಪವಾನ್ ।
ತೇನ ನಾದೇನ ದೈತ್ಯಾನಾಂ ಹೃದಯಾನಿ ವ್ಯದಾರಯತ್ ॥೪೯॥

ಅಪಾರ ಮಂಗಲಗುಣಭೂಷಿತನಾದ, ಗುಣರಹಿತನಾದ, ಅಸಂಖ್ಯಾತ ಸದಾಚಾರಿ ಮುನಿಗಳಿಂದ ವಂದಿತನಾದ, ಸಂಸಾರ ಚಿಂತಾಪಹಾರಕನಾದ, ಪ್ರಭುವಿಗೆ ನಮಸ್ಕಾರ ।೩೭।

ಆಗಮ ವೇದ್ಯನಾದ, ವೇದಾತೀತನಾದ, ಜ್ಞಾನಸ್ವರೂಪನಾದ, ಪಂಚಭೂತಗಳಲ್ಲಿ ಅಂತರ್ಯಾಮಿಯಾಗಿರುವ, ಪ್ರಭುವಿಗೆ ನಮಸ್ಕಾರ ।।೩೮।।

ಪ್ರಭುನಾರಾಯಣ! ನಿನ್ನಿಂದಲೇ ನಿರ್ಮಾಣವಾದ ಈ ಜಗತ್ತು ನಿನ್ನಲ್ಲಿಯೇ ನೆಲೆಸಿದೆ ನೀನೇ ಸರ್ವಸ್ವರೂಪನಿರುವಿ ಈ ಜೀವರಲ್ಲರೂ ನಿನ್ನ ಅಂಶ ಸ್ವರೂಪರೇ ಇದ್ದಾರೆ ।।೩೯।।

ಜಗತ್ತನ್ನು ಸೃಷ್ಟಿಸುವಾಗ ಬ್ರಹ್ಮರೂಪವನ್ನು ಧರಿಸುವ ನೀನು ಜಗತ್ತಿನ ಸಂರಕ್ಷಣೆಗಾಗಿ ವಿಷ್ಣುರೂಪವನ್ನು ತಾಳುವಿ ಪ್ರಲಯ ಕಾಲದಲ್ಲಿ ಜಗತ್ತನ್ನು ಸಂಹರಿಸುವ ಶಂಕರನ ರೂಪವನ್ನು ಹೊಂದುವಿ ।।೪೦।।

ನೀನು ನಮ್ಮ ತಂದೆಯಾದ ಬ್ರಹ್ಮದೇವನಿಗೆ ಪಿತನಾಗಿದ್ದರೂ ಆತನಿಗೆ ಪೌತ್ರನಾಗಿರುವಿ ನನಗೆ ನೀನು ಪುತ್ರಸಮಾನ ಆದ್ದರಿಂದ ನಾನು ಹೇಳುವ ಈ ಮಾತನ್ನು ಆಲಿಸು ।।೪೧।।

ಜಗದ್ಗುರು ನಾರಾಯಣ! ಕೃಷ್ಣಾ ನದಿಯ ದಕ್ಷಿಣ ಭಾಗದಲ್ಲಿ ಅತಿ ಪಾವನವಾದ ಸ್ಥಾನವೊಂದಿದೆ ಕಪೋತರೋಮನೆಂಬ ದೈತ್ಯನು ಅದನ್ನು ಆಕ್ರಮಿಸಿದ್ದಾನೆ. ಅವನ ಮರಣವು ನಿನ್ನಿಂದಲೇ ಆಗುವುದೆಂದು ಪರಶಿವನು ನುಡಿದಿದ್ದಾನೆ ಅವನ ವಧೆಗಾಗಿ ನನ್ನೊಂದಿಗೆ ಆಗಮಿಸು ಲೋಕಕಂಟಕನಾದ ಆ ದಾನವನನ್ನು ಸಂಹರಿಸು ।।೪೨ ೪೩।।

ಪ್ರಭು ನಾರಾಯಣ! ನೀನು ಭಕ್ತರ ಸಂಕಷ್ಟಗಳನ್ನು ಪರಿಹರಿಸುವವನು. ಸಕಲ ಜಗತ್ತಿಗೆ ಕಾರಣನು ಪ್ರಸನ್ನಮುಖನು ಎಲ್ಲ ಶರಣಾರ್ಥಿಗಳಿಗೆ ರಕ್ಷಣೆ ನೀಡುವವನಿರುವಿ ಇಂತಹ ನೀನು ನನ್ನ ಪ್ರಾರ್ಥನೆಯನ್ನು ತಿರಸ್ಕರಿಸದಿರು ।।೪೪।।

ಇದರಿಂದ ಪ್ರಸನ್ನನಾದ ಭಗವಾನ್ ನಾರಾಯಣನು 'ಕ್ರತುಮುನಿಯೇ! ನೀನು ನನಗೆ ಮಾನ್ಯನಿರುವಿ ಆದಕಾರಣ ನಿನ್ನ ಇಷ್ಟದಂತೆಯೇ ಮಾಡುವೆನೆಂದು ಹೇಳಿ ಕ್ರತುಮುನಿಯೊಂದಿಗೆ ಹೊರಟನು ಅವರಿಬ್ಬರೂ ಸ್ವಲ್ಪ ಸಮಯದಲ್ಲಿಯೇ ನಿರ್ಜನವಾದ 'ಅಹೋಬಲ (ಹೊಂಬಳ) ವೆಂಬ ಗ್ರಾಮವನ್ನು ಸೇರಿದರು.

ಅಲ್ಲಿ ನಾರಾಯಣನು ತನ್ನ ನಿಜರೂಪವನ್ನು ಹೊಂದಿ ವೀರನಾರಾಯಣನಾಗಿ ದಾನವರೊಂದಿಗೆ ಹೋರಾಡಲು ಸಿದ್ಧನಾದನು

ನಂತರ ವೀರನಾರಾಯಣನು ಕವಚವನ್ನು ತೊಟ್ಟು ರಥವನ್ನೇರಿ ತನ್ನ ಆಯುಧಗಳನ್ನು ತೆಗೆದುಕೊಂಡು ಹೊರಟನು. ಕ್ರತುಮುನಿಯು ವೀರನಾರಾಯಣನ ರಥದ ಸಾರಥಿಯಾದನು ।।೪೫-೪೮।।

ವೀರನಾರಾಯಣನು ಗಜಗದ ಪಕ್ಕ (ಗದಗ) ತೆರಳಿ ತನ್ನ (ಪಾಂಚಜನ್ಯ) ಶಂಖವನ್ನು ಊದಿದನು. ಆ ಶಂಖನಾದವು ದಾನವರ ಎದೆಯನ್ನು ನಡುಗಿಸಿತು. ।।೪೯।।

ಆಃ ಕಿಮೇತದಿತಿ ಕ್ರೋಧಾತ್ಸಮುತ್ಥಾಯ ನಿಜಾಸನಾತ್ ।
ಕಿಂ ಕಿಮಿತ್ಯುಕ್ತವಾನ್ ದೂತಾನ್ ತೇ ತಮೂಚುರ್ಭಯಾರ್ದಿತಾಃ ॥೫೦॥

ಭೋ ಆಯುಷ್ಮನ್! ಕುಬೇರಾಕ್ಷವನೇ ದ್ವೌ ತಾಪಸೌ ರುಷಾ ।
ಯುಯುತ್ಸೂ ಸಮುಪಾಯಾತೌ ತೌ ದೃಷ್ಟ್ವಾ ವಯಮಾಗತಾಃ ॥೫೧॥

ಇತಿ ತೇಷಾಂ ವಚಃ ಶ್ರುತ್ವಾ ಸ ದಷ್ಟದಶನಚ್ಛದಃ ।
ಕಪೋತರೋಮಾ ಧೃತೇಯಃ ಸೈನಿಕಾನ್ ಸಮಯೂಯುಜತ್ ॥೫೨॥

ರಥೈಃ ಕೇಚಿದ್ಗಜೈರಶ್ವೈರುಷ್ಟ್ರೈಃ ಕೇಚಿತ್ಖರೈರ್ವೃಷೈಃ ।
ಯುದ್ಧಾಯ ಪ್ರಯಯುಃ ಕ್ರುದ್ಧಾಃ ಸನ್ನದ್ಧಾಸ್ತಸ್ಯ ಸೈನಿಕಾಃ ॥೫೩॥

ಕಪೋತರೋಮಾ ಸಂವ್ಯೂಹ್ಯ ಸ್ವಾಂ ಸೇನಾಂ ಚತುರಂಗಿಣೀಮ್ ।
ಲೋಹಖಂಡಾದ್ವಿನಿಷ್ಕ್ರಮ್ಯ ಕುಬೇರಾಕ್ಷವನಂ ಯಯೌ ॥೫೪॥

ಇತಿಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ
ಕ್ರತುಪುರಮಾಹಾತ್ಮ್ಯಪ್ರಸ್ತಾವೇ
ಯುದ್ಧೋದ್ಯೋಗೋ ನಾಮ ದ್ವಿತೀಯೋಧ್ಯಾಯಃ

ದಾನವ ಕಪೋತರೋಮನು ಸಿಟ್ಟಿನಿಂದ ಇದೇನೆಂದು ತನ್ನ ಆಸನದಿಂದ ಮೇಲೆದ್ದು ಹೀಗಾಗಲು ಕಾರಣವೇನೆಂದು ದೂತರನ್ನು ಪ್ರಶ್ನಿಸಿದನು. ಭೀತರಾದ ದೂತರು ''ಆಯುಷ್ಮನ್! ಇಬ್ಬರು ತಾಪಸರು ಯುದ್ಧ ಮಾಡಲು ಕೋಪದಿಂದ ಕುಬೇರಾಕ್ಷ ವನಕ್ಕೆ ಬಂದಿದ್ದಾರೆ ಅವರನ್ನು ಕಂಡು ನಾವಿತ್ತ ಬಂದೆವು'' ಎಂದರು ||೫೦–೫೧||

ದೂತರ ಮಾತನ್ನು ಆಲೈಸಿದ ಕಪೋತರೋಮನು ಕೋಪದಿಂದ ತುಟಿಯನ್ನು ಕಡಿಯುತ್ತ ತನ್ನ ಸೈನಿಕರನ್ನೆಲ್ಲ ಅಣಿಗೊಳಿಸಿದನು ಅವನ ಸೈನಿಕರಲ್ಲಿ ಕೆಲವರು ರಥಗಳನ್ನೂ, ಕೆಲವರು ಆನೆಗಳನ್ನೂ, ಇನ್ನು ಕೆಲವರು ಕುದುರೆಗಳನ್ನೂ, ಒಂಟೆಗಳನ್ನೂ, ಕತ್ತೆಗಳನ್ನೂ, ಎತ್ತುಗಳನ್ನೂ, ಏರಿ ಸನ್ನದ್ಧರಾಗಿ ಕೋಪದಿಂದ ಯುದ್ಧಕ್ಕೆ ಹೊರಟರು ||೫೨–೫೩ ||

ಕಪೋತರೋಮನು ತನ್ನ ಚತುರಂಗ ಬಲದಲ್ಲಿ ವ್ಯೂಹಗಳನ್ನು ಮಾಡಿ ಲಕ್ಕುಂಡಿಯಿಂದ ಗಜಗದವನ (ಗದಗ)ಕ್ಕೆ ಹೋದನು.

ಭವಿಷ್ಯೋತ್ತರ ಪುರಾಣದ ಉತ್ತರ ಖಂಡದಲ್ಲಿನ
ಕ್ರತುಪುರಮಾಹಾತ್ಮ್ಯಯಲ್ಲಿ
ಯುದ್ಧೋದ್ಯೋಗವೆಂಬ ಎರಡನೆಯ ಅಧ್ಯಾಯವು ಮುಗಿಯಿತು

# ಅಥ ತೃತೀಯೋಽಧ್ಯಾಯಃ

ಋಷಯ ಊಚುಃ –

ಕಥಂ ತದಭವದ್ಯುದ್ಧಂ ತುಮುಲಂ ರೋಮಹರ್ಷಣಮ್ ।
ಸೂತ ವಿಸ್ತರತೋ ಬ್ರೂಹಿ ಪರಂ ಕೌತೂಹಲಂ ಹಿ ನಃ ॥೧॥

ಸೂತ ಉವಾಚ –

ಶೃಣ್ವಂತು ಮುನಯಃ ಶ್ರೀಮನ್ನಾರಾಯಣಪರಾಕ್ರಮಮ್ ।
ಉರ್ವಶೀ ನಿರ್ಮಿತಾ ಯೇನ ಕ್ಷಣಾತ್ ಕಾಮಃ ಪರಾಜಿತಃ ॥೨॥

ದಂಭೋದ್ಭವಾಹ್ವಯಃ ಕಶ್ಚಿದ್ಬಾಹುಜೋ ಬಲದರ್ಪಿತಃ ।
ಇಷೀಕಾಭಿಃ ಸಸೈನ್ಯಸ್ತು ಲೀಲಯೈವ ವಿನಿರ್ಜಿತಃ ॥೩॥

ಬಹವೋ ಜಯಿನೋ ಲೋಕೇ ಜೇತುಂ ಯಂ ನಾಶಕನ್ ಬಲಾತ್ ।
ಸ ಕಾಮೋ ನಿರ್ಜಿತೋ ಯೇನ ತಸ್ಯೇದಂ ಮುನಯಃ ಕಿಯತ್ ॥೪॥

ವೀರನಾರಾಯಣೋ ವೀಕ್ಷ್ಯ ಸೇನಾಂ ತಾಮಾಸುರೀಂ ತದಾ ।
ಪುನಃ ಶಂಖವರಂ ದಧ್ಮೌ ದಿಶ ಆಪೂರಯನ್ನಿವ ॥೫॥

ತತಃ ಪ್ರವವೃಧೇ ಯುದ್ಧಂ ತೇಷಾಂ ತಸ್ಯ ಚ ದಾರುಣಮ್ ।
ತೋಮರೈರ್ಮುದ್ಗರೈಃ ಪ್ರಾಸೈಃ ಪಟ್ಟಿಶೈರ್ಪರಿಘೈರಪಿ ॥೬॥

ತೇಽಂಜನಾಚಲಸಂಕಾಶಾ ಅಸುರಾ ರಣಕರ್ಕಶಾಃ ।
ಅಹಂಪೂರ್ವಮಹಂಪೂರ್ವಮಿತ್ಯುಕ್ತ್ವಾ ಯುಯುಧುರ್ಮೃಧೇ ॥೭॥

ನಾರಾಯಣೋ ಧನುರ್ಮುಕ್ತೈಃ ಶರ್ಕರಾಶೀವಿಷೋಪಮೈಃ ।
ಶಿರಾಂಸಿ ತೇಷಾಂ ಚಿಚ್ಛೇದ ಶತಶೋಽಥ ಸಹಸ್ರಶಃ ॥೮॥

ದೈತ್ಯದೇಹೋದ್ಭವೈರಸ್ರೈರೂಹುಃ ಕುಲ್ಯಾ ರಣಾಜಿರೇ ।
ಶಿರಾಂಸಿ ಲುಲುಠುರ್ಗಂಡಶೈಲಾಭಾನಿ ತತಸ್ತತಃ ॥೯॥

ವಿಹಾಯ ಸಮರಂ ಕೇಚಿತ್ ಕಾಂದಿಶೀಕಾ ಯಯುರ್ಭಟಾಃ ।
ಕೇಚಿತ್ ಕಪೋತರೋಮಾಣಮಾಸೇದುರ್ಜೀವಿತಾರ್ಥಿನಃ ॥೧೦॥

ನಾಗಾರ್ಜುನೋ ವೇಲ್ಲಘಾಡಃ ಕಲಶಾಖ್ಯ ಇಮೇ ತ್ರಯಃ ।
ಮಾ ಭೈಷ್ಟೇತ್ಯಭಯಂ ದತ್ವಾ ಯೋದ್ಧುಂ ಸಮುಪಚಕ್ರಮುಃ ॥೧೧॥

# ಮೂರನೆಯ ಅಧ್ಯಾಯ

**ಋಷಿಗಳು ಹೇಳಿದರು —**

ಸೂತನೇ! ವೀರನಾರಾಯಣ ಕಪೋತರೋಮರ ಆ ತುಮುಲ ಯುದ್ಧವು ಹೇಗ ನಡೆಯಿತೆಂದು ವಿಸ್ತಾರವಾಗಿ ಹೇಳು ಇದನ್ನು ಕೇಳಲು ನಾವು ಬಹಳ ಉತ್ಸುಕರಾಗಿದ್ದೇವೆ ||೧||

**ಸೂತನು ಹೇಳಿದನು —**

ಮುನಿಗಳೇ! ಉರ್ವಶಿಯಂತಹ ಲೋಕೋತ್ತರ ಸುಂದರಿಯನ್ನು ನಿರ್ಮಿಸಿದ ಮತ್ತು ಮನ್ಮಥನನ್ನು ಕ್ಷಣಮಾತ್ರದಲ್ಲಿ ಪರಾಜಯಗೊಳಿಸಿದ ಶ್ರೀನಾರಾಯಣನ ಪರಾಕ್ರಮವನ್ನು ಹೇಳುವ ಕೇಳಿರಿ ||೨||

ತನ್ನ ಬಲದಿಂದ ಗರ್ವಿತನಾಗಿದ್ದ ದಂಭೋದ್ಭವನೆಂಬ ಕ್ಷತ್ರಿಯನನ್ನೂ ಅವನ ಸೈನ್ಯವನ್ನೂ ನಾರಾಯಣನು ಕೇವಲ ದರ್ಭದ ತುದಿಯಿಂದ ಲೀಲಾಜಾಲವಾಗಿ ಗೆದ್ದನು ||೩||

ಲೋಕದಲ್ಲಿ ಬಹಳ ಮಂದಿ ವಿಜಯಶಾಲಿಗಳಿಗೂ ಸಹ ಹರದಿಂದಲೂ ಗೆಲ್ಲಲಾಗದ ಕಾಮನನ್ನು ಈ ನಾರಾಯಣನು ಗೆದ್ದಿದ್ದಾನೆಂದ ಮೇಲೆ ಈ ದಾನವರು ಎಷ್ಟರವರು? ||೪||

ವೀರನಾರಾಯಣನು ದಾನವರ ಆ ಸೈನ್ಯವನ್ನು ನೋಡಿ ದಿಕ್ಕುಗಳನ್ನು ಶಬ್ದದಿಂದಲೇ ತುಂಬುವವನಂತೆ ತನ್ನ ಶಂಖವನ್ನು ಮೊಳಗಿಸಿದನು ನಂತರ ವೀರನಾರಾಯಣನಿಗೂ ದಾನವರಿಗೂ ದಾರುಣವಾದ ಸಮರವು ಪ್ರಾರಂಭವಾಯಿತು. ಆ ಯುದ್ಧದಲ್ಲಿ ಪರಸ್ಪರ ತೋಮರ ಮುದ್ಗರ, ಈಟಿ, ಪಟ್ಟಿಶ, ಬಾಣಗಳನ್ನು ಪ್ರಯೋಗಿಸಿದರು ||೫-೬||

ರಣ ಭಯಂಕರರಾದ ಕಾಡಿಗೆಯ ಬೆಟ್ಟದಂತೆ ಕಪ್ಪಗಿದ್ದ ಅಸುರರು 'ನಾನು ಮುಂದೆ ನಾನು ಮುಂದೆ ಎನ್ನುತ್ತಾ ಸಾಗಿ ಯುದ್ಧ ಮಾಡಿದರು. ||೭||

ವೀರನಾರಾಯಣನು ಸರ್ಪಗಳಂತಿದ್ದ ಬಾಣಗಳನ್ನು ಬಿಟ್ಟು ಸಾವಿರಾರು ದಾನವರ ತಲೆಗಳನ್ನು ಕಡಿದನು. ||೮||

ದಾನವರ ದೇಹದಿಂದ ಹರಿದ ರಕ್ತದಿಂದ ಆ ರಣರಂಗದಲ್ಲಿ ಅನೇಕ ಚಿಕ್ಕ ನದಿಗಳೇ ಹರಿದವು. ತಲೆಗಳು ಬಂಡೆಗಲ್ಲುಗಳಂತೆ ಉರುಳಿದವು. ||೯||

ಕೆಲವು ದಾನವ ಸೈನಿಕರು ಭೀತರಾಗಿ ಸಮರವನ್ನು ಬಿಟ್ಟು ಓಡಿಹೋದರು ಕೆಲವರು, ಜೀವವುಳಿಸಿಕೊಳ್ಳಲು ಕಪೋತರೋಮನಲ್ಲಿಗೆ ಓಡಿದರು ನಾಗಾರ್ಜುನ, ವೇಲ್ಲಘಾಡ, ಕಲಶ ಎಂಬ ಮೂವರು ರಾಕ್ಷಸರು ಹೆದರಬೇಡಿರೆಂದು ಸೈನಿಕರನ್ನು ಸಮಾಧಾನಪಡಿಸಿ ಯುದ್ಧ ಮಾಡಲಾರಂಭಿಸಿದರು. ||೧೦ ೧೧||

ತಾನಾಪತತ ಆಲೋಕ್ಯ ವೀರನಾರಾಯಣಃ ಶರೈಃ ।
ಚಿಚ್ಛೇದ ತೇಷಾಂ ವರ್ಮಾಣಿ ಹಸ್ತೌ ಪಾದಾನ್ ಧನೂಂಷಿ ಚ ॥೧೨॥

ತೇಽಪಿ ಕ್ರುದ್ಧಾ ದುರಾತ್ಮಾನಃ ಕ್ಷತಜಾರುಣಚಕ್ಷುಷಃ ।
ವೀರನಾರಾಯಣೇ ಬಾಣಾನ್ ವವೃಷುಸ್ತೋಯದಾ ಇವ ॥೧೩॥

ಪ್ರಹಸ್ಯ ಭಗವಾಂಸ್ತೇಷಾಂ ತ್ರಯಾಣಾಂ ತ್ರಿಭಿರಾಶುಗೈಃ ।
ನಿಮೇಷಾರ್ಧೇನ ಚಿಚ್ಛೇದ ಶಿರಾಂಸಿ ಯುಗಪದ್ಧರಿಃ ॥೧೪॥

ಪುನರ್ವಿನಾಶಯಾಮಾಸ ತತ್ಸೈನ್ಯಂ ಸಪದಾತಿಕಮ್ ।
ಸಾಶ್ವರೋಹಗಜಾರೋಹಂ ಗ್ರೀಷ್ಮೇ ಕಕ್ಷಮಿವಾನಲಃ ॥೧೫॥

ಕಪೋತರೋಮಾ ಕೋಪೇನ ಜ್ವಲನ್ ಯೋದ್ಧುಮುಪಾಯಯೌ ।
ನಾರಾಯಣಕ್ರತೂ ವೀಕ್ಷ್ಯ ಬಭಾಷೇ ದಾರುಣಂ ವಚಃ ॥೧೬॥

ರೇ ದುಷ್ಟತಾಪಸೌ! ಕ್ರೂರಾಂ ವೃತ್ತಿಮೇತಾಮುಪಾಶ್ರಿತೌ ।
ತಪೋ ವಿಹಾಯ ನೈತದ್ವಾಮುಚಿತಂ ಕುರ್ವತೋಸ್ತಪಃ ॥೧೭॥

ನಾರಾಯಣಸ್ತಮಾಹೇದಂ ಸತ್ಯಮುಕ್ತಂ ತ್ವಯಾಽಸುರ! ।
ತ್ವಾದೃಶಾಂ ಪಾಪಿನಾಂ ಹಿಂಸಾ ಸೈವಾಸ್ಮಾಕಂ ಮಹತ್ತಪಃ ॥೧೮॥

ತೇನ ವಾಕ್ಯೇನ ಸಂಕ್ರುದ್ಧಃ ಪದಾ ಸ್ಪೃಷ್ಟ ಇವೋರಗಃ ।
ಧನುರ್ವಿಸ್ಫಾರ್ಯ ತರಸಾ ಜಗರ್ಜ ಚ ಮಹಾಸುರಃ ॥೧೯॥

ಪಶ್ಯ ಬಾಹ್ವೋರ್ಬಲಂ ಮೇಽದ್ಯ ಪರ್ವತಾನಪಿ ನಿಘ್ನತೋಃ ।
ಭವಾನ್ಮರ್ತುಮಿಹಾಯಾತಃ ಕಾಲೇನೈವಾಹೃತೋ ಬಲಾತ್ ॥೨೦॥

ನಾರಾಯಣಸ್ತಂ ಬಭಾಷ ಇದಮೇವೋತ್ತರಂ ಮಮ ।
ಭವಾನ್ಮರ್ತುಮಿಹಾಯಾತಃ ಕಾಲೇನೈವಾಹೃತೋ ಬಲಾತ್ ॥೨೧॥

ಮೂಢ! ಕಿಂ ಜಲ್ಪಿತೈರೇತೈಃ ಕ್ರಿಯಯಾ ತತ್ಸಮಾಚರ ।
ವಾಗ್ಯುದ್ಧಂ ಶೋಭತೇ ಸ್ತ್ರೀಣಾಂ ಶೂರಾಣಾಂ ತು ಪರಾಕ್ರಮಃ ॥೨೨॥

ತದಾ ಕ್ರುದ್ಧಃ ಸ ದೈತೇಯೋ ಮುಮೋಚ ಸುಬಹೂನ್ ಶರಾನ್ ।
ಅಪ್ರಾಪ್ತಾನೇವ ತಾನ್ ಬಾಣಾನ್ ಸ್ವಬಾಣೈರಚ್ಛಿನದ್ಧರಿಃ ॥೨೩॥

ಬಾಣಯುದ್ಧಂ ತಯೋರಾಸೀತ್ಕೃತಪ್ರತಿಕೃತೈಷಿಣೋಃ ।
ಮುಹೂರ್ತಂ ದಾರುಣಂ ಯೇನ ತದ್ದಿನಂ ದುರ್ದಿನಂ ಬಭೌ ॥೨೪॥

ವೀರನಾರಾಯಣನು ತನ್ನ ಮೇಲೆರಗಿ ಬರುತ್ತಿದ್ದ ಆ ದಾನವರನ್ನು ನೋಡಿ ಬಾಣಗಳನ್ನು ಪ್ರಯೋಗಿಸಿ ಅವರ ಕವಚ, ಕೈ–ಕಾಲು, ಧನುಸ್ಸುಗಳನ್ನು ತುಂಡರಿಸಿದನು ಕೋಪದಿಂದ ದಾನವರ ಕಣ್ಣುಗಳು ಕೆಂಪಾದವು ಆ ಅಸುರರು ಮೋಡವು ಮಳೆಗರೆದಂತೆ ವೀರನಾರಾಯಣನ ಮೇಲೆ ಬಾಣಗಳನ್ನು ಸುರಿಸಿದರು ॥ ೧೨–೧೩ ॥

ಭಗವಾನ್ ವೀರನಾರಾಯಣನು ನಸುನಕ್ಕು ಮೂರು ಬಾಣಗಳಿಂದ ಒಂದೇ ಸಲಕ್ಕೆ ಆ ಮೂರೂ ದಾನವರ ತಲೆಗಳನ್ನು ನಿಮಿಷಾರ್ಧದಲ್ಲಿ ತುಂಡರಿಸಿದನು ॥೧೪॥

ಪುನಃ ಅವರ ಆನೆ ಸವಾರರು, ಕುದುರೆ ಸವಾರರು ಹಾಗೂ ಕಾಲಾಳುಗಳು ಈ ಎಲ್ಲ ಸೈನ್ಯಗಳನ್ನು ಗ್ರೀಷ್ಮ ಕಾಲದಲ್ಲಿ ಅಗ್ನಿಯು ಒಣಹುಲ್ಲನ್ನು ಸುಡುವಂತೆ ನಾಶ ಮಾಡಿದನು ॥೧೫॥

ಕೋಪದಿಂದ ಜ್ವಲಿಸುತ್ತ ಯುದ್ಧ ಮಾಡಲು ಬಂದ ದಾನವ ಕಪೋತರೋಮನು ವೀರನಾರಾಯಣ, ಕ್ರತುಮುನಿಗಳನ್ನು ಕಂಡು ದಾರುಣವಾದ ಮಾತನ್ನಾಡಿದನು ॥೧೬॥

ದುಷ್ಟ ತಾಪಸರೇ! ನಿಮ್ಮ ತಪಸ್ಸನ್ನು ಬಿಟ್ಟು ಕ್ರೂರವಾದ ಈ ಹಿಂಸಾ ವೃತ್ತಿಯನ್ನೇಕೆ ಹಿಡಿದಿರಿ? ತಪಸ್ವಿಗಳಾದ ನಿಮಗೆ ಇದು ಉಚಿತವಲ್ಲ. ॥೧೭॥

ಆಗ ನಾರಾಯಣನು ''ದಾನವನೇ! ನೀನು ಸತ್ಯವನ್ನೇ ಹೇಳಿದಿ ನಿನ್ನಂಥ ಪಾಪಿಗಳನ್ನು ವಧಿಸುವುದೇ ನಮಗೆ ಬಹುದೊಡ್ಡ ತಪಸ್ಸು'' ಎಂದನು ॥೧೮॥

ಈ ಮಾತನ್ನು ಕೇಳಿದೊಡನೆಯೇ ಆ ಅಸುರನು ಕಾಲಿನ ತುಳಿತಕ್ಕೆ ಸಿಕ್ಕ ಹಾವಿನಂತೆ ಸಿಟ್ಟಿಗೆದ್ದು ಧನುಷ್ಟಂಕಾರವನ್ನು ಮೊಳಗಿಸಿ ಗರ್ಜಿಸಿದನು. ॥೧೯॥

'ದುಷ್ಟ! ಪರ್ವತಗಳನ್ನು ಸೀಳಿ ಹಾಕುವ ನನ್ನ ಬಾಹುಗಳ ಬಲವನ್ನು ಇಂದು ನೀನು ಕಾಣುವೆ ನೀನು ಸಾಯಲೆಂದೇ ಯಮನು ಬಲಾತ್ಕಾರವಾಗಿ ನಿನ್ನನ್ನಿಲ್ಲಿಗೆ ಕಳಿಸಿದ್ದಾನೆ' ಎಂದನು ॥೨೦॥

'ನನ್ನ ಉತ್ತರವೂ ಸಹ ಇದೇ ಆಗಿದೆ ದಾನವನೇ! ನೀನು ಸಾಯಲೆಂದೇ ಅಂತಕನು ನಿನ್ನನ್ನಿಲ್ಲಿಗೆ ಕಳಿಸಿರುವನು. ಮೂರ್ಖ ದೈತ್ಯನೇ! ವೃಥಾ ಮಾತಿನಿಂದೇನು ಪ್ರಯೋಜನ? ಹೇಳುವುದನ್ನು ಮಾಡಿ ತೋರಿಸು. ಈ ವಾಗ್ಯುದ್ಧವು ಕೇವಲ ಅಬಲೆಯರಿಗೆ ಸರಿ ಹೊಂದುವುದು ಆದರೆ ಶೂರರಿಗೆ ಪರಾಕ್ರಮವೇ ಸರಿ'ಯೆಂದು ನಾರಾಯಣನು ಹೇಳಿದನು. ॥೨೧ ೨೨॥

ಆಗ ಕ್ರುದ್ಧನಾದ ಕಪೋತರೋಮನು ಅಸಂಖ್ಯಾತ ಬಾಣಗಳನ್ನು ಬಿಟ್ಟನು. ವೀರನಾರಾಯಣನು ಆ ಬಾಣಗಳು ತನ್ನನ್ನು ಸಮೀಪಿಸುವದಕ್ಕೂ ಮುಂಚೆಯೇ ತಾನೂ ಬಾಣಗಳನ್ನು ಬಿಟ್ಟು ಅವನ್ನು ತುಂಡರಿಸಿದನು. ॥೨೩॥

ಪರಸ್ಪರ ಗೆಲ್ಲುವ ಛಲದಿಂದ ಬಾಣಗಳನ್ನು ಬಿಡುತ್ತ ಅವರಿಬ್ಬರೂ ಭೀಕರ ಯುದ್ಧ ಮಾಡಿದರು. ಆದರಿಂದ ಆ ದಿನವು ಮೋಡ ಕವಿದ ವಾತಾವರಣವನ್ನುಂಟು ಮಾಡಿತು. ॥೨೪॥

ಏತಸ್ಮಿನ್ನಂತರೇ ಬಾಣೈರ್ವ್ಯಶ್ವಸೂತರಥಂ ಕ್ಷಣಾತ್ ।
ಹರಿಃ ಕಪೋತರೋಮಾಣಂ ಚಕಾರ ಪ್ರಹಸನ್ನಿವ ॥೨೫॥

ತದಾ ಕಪೋತರೋಮಾಽಸೌ ಹತಾಶ್ವೋ ಹತಸಾರಥಿಃ ।
ಸಸರ್ಜ ವಿವಿಧಾ ಮಾಯಾ ಆಸುರೀರ್ವ್ಯೋಮಗೋಽಸುರಃ ॥೨೬॥

ಕಾಲಮೇಘ ಇವಾಸ್ತ್ರಾಣಿ ವವರ್ಷ ಹರಿಮೂರ್ಧನಿ ।
ವಿಸ್ಮಯಂ ದೇವತಾ ಜಗ್ಮುರ್ದೃಷ್ಟ್ವಾ ದೈತ್ಯಪರಾಕ್ರಮಮ್ ॥೨೭॥

ಮಾಯಾಸ್ತಾ ವ್ಯಧಮದ್ದೇವೋ ದಿವ್ಯಾಸ್ತ್ರೈರಭಿಮಂತ್ರಿತೈಃ ।
ಉಸ್ರೈಃ ಪ್ರಸೃಮರೈಃ ಸ್ವೀಯೈರ್ನೀಹಾರಮಿವ ಭಾಸ್ಕರಃ ॥೨೮॥

ಪ್ರಣಷ್ಟಮಾಯೋ ದೈತೇಯೋ ಗದಾಮುದ್ಯಮ್ಯ ವೀರ್ಯವಾನ್ ।
ಆಜಿಮಾಗಮ್ಯ ಯುದ್ಧಾಯ ತಸ್ಥೌ ಗರ್ಜನ್ ಹರೇಃ ಪುರಃ ॥೨೯॥

ರಥಾದಾಪ್ಲುತ್ಯ ದೇವೋಽಪಿ ಗದಾಂ ಕೌಮೋದಕೀಂ ಪ್ರಿಯಾಮ್ ।
ಗೃಹೀತ್ವಾ ದೈತ್ಯನಾಶಾಯ ತಸ್ಥೌ ಶೃಂಗೀವ ಪರ್ವತಃ ॥೩೦॥

ಪ್ರಾಕೃತಾಽಪ್ರಾಕೃತಾಭ್ಯಾಂ ತೌ ಗದಾಭ್ಯಾಂ ದೈತ್ಯಮಾಧವೌ ।
ಶಿರಸ್ಯುರಸಿ ಚಾನ್ಯೋನ್ಯಂ ದಾರುಣಂ ಸಂಪ್ರಜಹ್ರತುಃ ॥೩೧॥

ಗದಾಮಾವಿಧ್ಯ ಭಗವಾನ್ ವೀರನಾರಾಯಣಸ್ತದಾ ।
ಪಾತಯಾಮಾಸ ತನ್ಮೂರ್ಧ್ನಿ ಸ ಪಪಾತ ಮಮಾರ ಚ ॥೩೨॥

ಮುಕ್ತ್ವಾ ಸುದರ್ಶನಂ ಚಕ್ರಂ ತತ್ಪಕ್ಷೀಯಾನ್ ಮಹಾಸುರಾನ್ ।
ನಿಃಶೇಷಂ ನಾಶಯಾಮಾಸ ವೀರನಾರಾಯಣಃ ಪ್ರಭುಃ ॥೩೩॥

ತದಾ ಬ್ರಹ್ಮಾದಯೋ ದೇವಾ ವೀರನಾರಾಯಣಂ ಪ್ರಭುಮ್ ।
ಅಸ್ತುವನ್ ವಿಷ್ಣುವೀರ್ಯಾಣಿ ಸ್ಮರಂತೋ ನತಕಂಧರಾಃ ॥೩೪॥

ದೇವಾ ಊಚುಃ —

ನಮೋ ನಮಸ್ತೇ ಪುರುಷೋತ್ತಮಾಯ
ಪರಾವರೇಶಾಯ ಪುರಾಣಮೂರ್ತಯೇ ।
ಸ್ವಮಾಯಯೋದ್ಭಾವಿತಭೂತಭೌತಿಕ
ಪ್ರಪಂಚಭೇದಾಯ ತದೇಕಸಾಕ್ಷಿಣೇ ॥೩೫॥

ಅಷ್ಟರಲ್ಲಿ ವೀರನಾರಾಯಣನು ನಸುನಗುತ್ತ ಕಪೋತರೋಮನ ರಥವನ್ನು ತುಂಡರಿಸಿ ಅಶ್ವ, ಸಾರಥಿಗಳನ್ನು ಸಂಹರಿಸಿದನು ।।೨೫।।

ತನ್ನ ಅಶ್ವಗಳೂ, ಸಾರಥಿಯೂ ಮೃತರಾದದ್ದನ್ನು ನೋಡಿ ದಾನವ ಕಪೋತರೋಮನು ಆಕಾಶಕ್ಕೆ ನೆಗೆದು ಬಗೆ ಬಗೆಯ ತನ್ನ ಆಸುರೀಮಾಯೆಗಳನ್ನು ತೋರಿಸಲಾರಂಭಿಸಿದನು ।।೨೬।।

ಕಾಲಮೇಘವು ಮಳೆ ಸುರಿಸಿದಂತೆ ಈ ಕಪೋತರೋಮನು ವೀರನಾರಾಯಣನ ಶಿರಸ್ಸಿನ ಮೇಲೆ ವಿವಿಧಾಸ್ತ್ರಗಳನ್ನು ಸುರಿಸಿದನು ದೇವತೆಗಳು ಕಪೋತರೋಮನ ಪರಾಕ್ರಮವನ್ನು ಕಂಡು ಅಚ್ಚರಿಗೊಂಡರು ।।೨೭।।

ಭಾಸ್ಕರನು ತನ್ನ ಕಿರಣಗಳಿಂದ ಇಬ್ಬನಿಯನ್ನು ನಾಶ ಮಾಡುವಂತೆ ವೀರ ನಾರಾಯಣನು ಅಭಿಮಂತ್ರಿತವಾದ ತನ್ನ ದಿವ್ಯಾಸ್ತ್ರಗಳಿಂದ ಕಪೋತರೋಮನ ಮಾಯೆಯನ್ನು ಧ್ವಂಸಗೈದನು. ।।೨೮।।

ತನ್ನ ಮಾಯೆಯು ನಾಶವಾದುದನ್ನರಿತು ಪ್ರತಾಪಶಾಲಿಯಾದ ಕಪೋತರೋಮನು ಗದೆಯನ್ನೆತ್ತಿ ರಣರಂಗಕ್ಕೆ ಬಂದು ವೀರನಾರಾಯಣನ ಎದುರು ಗರ್ಜಿಸುತ್ತ ನಿಂತನು.।।೨೯।।

ವೀರನಾರಾಯಣನೂ ಸಹ ರಥದಿಂದಿಳಿದು ತನ್ನ ಕೌಮೋದಕೀ ಗದೆಯನ್ನೆತ್ತಿ ಹಿಡಿದು ದೈತ್ಯನನ್ನು ವಧಿಸಲು ಕೋಡುಗಲ್ಲಿರುವ ಪರ್ವತದಂತೆ ನಿಂತನು. ।।೩೦।।

ಕೌಮೋದಕೀ ಹಾಗೂ ಸಾಮಾನ್ಯ ಗದೆಗಳನ್ನು ಹಿಡಿದ ವೀರನಾರಾಯಣ, ಕಪೋತರೋಮರು ಎದೆಯ ಮೇಲೆ, ತಲೆಗಳ ಮೇಲೆ ಪರಸ್ಪರ ಭೀಕರವಾಗಿ ಹೊಡೆದಾಡಿದರು. ।।೩೧।।

ಆ ಸಮಯದಲ್ಲಿ ಭಗವಾನ್ ವೀರನಾರಾಯಣನು ತನ್ನ ಗದೆಯನ್ನು ತಿರುಗಿಸಿ ಕಪೋತರೋಮನ ಶಿರಸ್ಸಿನಲ್ಲಿ ಅಪ್ಪಳಿಸಿದನು. ದಾರುಣವಾದ ಆ ಪ್ರಹಾರಕ್ಕೆ ಕಪೋತರೋಮನು ಕೆಳಗೆ ಬಿದ್ದು ಮರಣ ಹೊಂದಿದನು. ।।೩೨।।

ನಾರಾಯಣನು ಸುದರ್ಶನ ಚಕ್ರವನ್ನು ಪ್ರಯೋಗಿಸಿ ಕಪೋತರೋಮನ ಸೈನಿಕರನ್ನು ಸಂಪೂರ್ಣವಾಗಿ ನಾಶಗೊಳಿಸಿದನು. ।।೩೩।।

ಆಗ ಬ್ರಹ್ಮಾದಿ ದೇವತೆಗಳು ಆನತರಾಗಿ ಮಹಾವಿಷ್ಣುವಿನ ಪರಾಕ್ರಮವನ್ನು ಸ್ಮರಿಸುತ್ತ ವೀರನಾರಾಯಣ ಸ್ವಾಮಿಯನ್ನು ಸ್ತುತಿಸಿದರು. ।।೩೪।।

**ದೇವತೆಗಳು ಹೇಳಿದರು –**

**ಪುರಾಣ ಪುರುಷನೇ! ಮೂಲಪಂಚ ಮಹಾಭೂತಗಳು, ಅವುಗಳ ಮಿಶ್ರಣ ದಿಂದ ಅನಂತ ಭೌತಿಕ ಪದಾರ್ಥಗಳು, ಈ ಎಲ್ಲ ಜಾಗತಿಕ ವಿಶೇಷಣಗಳನ್ನು ಮಾಯೆಯಿಂದ ನೀನೇ ಪ್ರಕಟಗೊಳಿಸಿರುವಿ. ಈ ಮಾಯಾಶಕ್ತಿಯೂ ಸಹ ನಿನ್ನ ಅಧೀನದಲ್ಲಿಯೇ ಇರುವುದು. ಆದಕ್ಕೆ ನೀನೊಬ್ಬನೇ ಸಾಕ್ಷಿಯಾಗಿರುವಿ. ಸರ್ವೇಶ್ವರನಾದ ಪುರುಷೋತ್ತಮನಾದ ನಿನ್ನನ್ನು ಪುನಃ ಪುನಃ ನಮಿಸುತ್ತೇವೆ. ।।೩೫।।**

ಅಣೋರಣೀಯಾನ್ಮಹತೋ ಮಹೀಯಾಂ -
ಸ್ತ್ವಯಾ ತತಂ ಸರ್ವಮನಂತಮೂರ್ತೇ! ।
ಸಂಭೂಯ ನಾನಾವಿಧಮೂರ್ತಿಭೇದ್ಯೈ-
ರ್ಧರ್ಮಪ್ರತಿಷ್ಠಾಂ ಕುರುಷೇಸ್ಯ ಗುಪ್ತ್ಯೈ ॥೩೬॥
ನಮೋ ವರೇಣ್ಯಾಯ ಮಹಾತಪಸ್ವಿನೇ
ವಿಲಾಸಿನೇ ಶ್ರೀರಮಣಾಯ ತೇ ನಮಃ ।
ನಮಸ್ತ್ವಜೀವೈಕಸುಹೃತ್ತಮಾಯ
ನಮೋಽಸ್ಯ ಜನ್ಮಸ್ಥಿತಿನಾಶಹೇತವೇ ॥೩೭॥
ಇತಿ ನಾರಾಯಣಂ ಸ್ತುತ್ವಾ ಪ್ರಶ್ರಯಾನಮ್ರಮೂರ್ತಯಃ ।
ಬ್ರಹ್ಮಾದ್ಯಾಃ ಪ್ರಾರ್ಥಯಾಮಾಸುರ್ಭಗವಂತಮಧೋಕ್ಷಜಮ್ ॥೩೮॥
ಕಪೋತರೋಮಪ್ರಮುಖಾ ಅಸುರಾಃ ಸುರಶತ್ರವಃ ।
ಪ್ರಜಾನಾಂ ಕಂಟಕಾಃ ಸರ್ವೇ ಭವತೇಹ ನಿಷೂದಿತಾಃ ॥೩೯॥
ಪುಣ್ಯಸ್ಥಾನಮಿದಂ ದೇವ! ಹತ್ವಾ ಪುಣ್ಯಜನಾನಿಮಾನ್ ।
ಕೃತಂ ನಿಷ್ಕಂಟಕಂ ಭಕ್ತಪ್ರೀತ್ಯೈ ತಿಷ್ಠಾತ್ರ ಮಾಧವ ॥೪೦॥

ನಾರಾಯಣ ಉವಾಚ —

ಕ್ರತುನೇಶವಿಸೃಷ್ಟೇನ ಪ್ರಾರ್ಥಿತೋಽಹಮಿಹಾಗತಃ ।
ಕೃತಂ ಶಿವಸ್ಯಾಭಿಮತಂ ತದಿದಂ ದುಷ್ಟನಾಶನಮ್ ॥೪೧॥
ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತುಮಸಾಂಪ್ರತಮ್ ।
ಇತಿ ಹೇತೋಃ ಶಿವೇನಾಮೀ ದುಷ್ಟಾ ಅಪಿ ನ ಸಂಹೃತಾಃ ॥೪೨॥
ಇದಂ ಮಹೇಶ್ವರಸ್ಥಾನಂ ತಸ್ಯಾನುಮತಿಮಂತರಾ ।
ನೇಹ ಸ್ಥೇಯಂ ಮಯಾ ತಸ್ಮಾದ್ಯಾಮ್ಯಹಂ ಗಂಧಮಾದನಮ್ ॥೪೩॥
ಏವಂ ಬ್ರುವತಿ ವೈಕುಂಠೇ ಶಿತಿಕಂಠಸ್ತದೈವ ಹಿ ।
ತತ್ರ ಪ್ರಾದುರಭೂತ್ಸಾಕ್ಷಾದನೇಕಗಣಸಂಯುತಃ ॥೪೪॥
ಕುಂದೇಂದುಕ್ಷೀರಧವಲಂ ನೀಲಗ್ರೀವಮುಮಾಪತಿಮ್ ।
ಸೂರ್ಯಕೋಟಿಪ್ರಭಂ ಶಂಭುಂ ಚಂದ್ರಕೋಟಿಸುಶೀತಲಮ್ ॥೪೫॥
ಖಂಡೇಂದುಶೇಖರಂ ತ್ರ್ಯಕ್ಷಮಕ್ಷಮಾಲಾಧರಂ ಹರಮ್ ।
ಗಂಗಾಧರಂ ಭುಜಂಗಾಂಗಭೂಷಣಂ ಭೂತಿಭೂಷಿತಮ್ ॥೪೬॥
ವ್ಯಾಘ್ರಚರ್ಮಪರೀಧಾನಂ ಗಜಚರ್ಮೋತ್ತರೀಯಕಮ್ ।
ಈಶಾನಂ ಸರ್ವವಿದ್ಯಾನಾಂ ಸರ್ವಲೋಕಮಹೇಶ್ವರಮ್ ॥೪೭॥
ತಮಾಸೇಚನಕಂ ದೃಷ್ಟ್ವಾ ಬ್ರಹ್ಮನಾರಾಯಣಾದಯಃ ।
ಪ್ರಣಮ್ಯ ಶಿರಸಾ ಭೂಮೌ ಸ್ತೋತುಂ ಸಮುಪಚಕ್ರಮುಃ ॥೪೮॥

ಭಗವಾನ್! ನಾರಾಯಣ! ನೀನು ಅಣುವಿಗಿಂತ ಸೂಕ್ಷ್ಮನೂ, ಮಹತ್ತರವಾದದ್ದಕ್ಕಿಂತ ಮಹತ್ತಮನೂ ಆಗಿರುವಿ ನಿನ್ನಿಂದಲೇ ಈ ಎಲ್ಲವೂ ವಿಸ್ತೃತವಾಗಿದೆ. ಈ ಜಗತ್ತಿನ ಪಾಲನೆಗಾಗಿ ವಿವಿಧ ರೂಪಗಳನ್ನು ಧರಿಸಿ ಅನಂತಮೂರ್ತಿಯೆನಿಸಿ ಧರ್ಮವನ್ನು ಸ್ಥಾಪಿಸುವಿ ||೩೬||

ಪ್ರಭು ಲಕ್ಷ್ಮೀವಲ್ಲಭ! ಸಕಲ ಜೀವಿಗಳಿಗೂ ನೀನೊಬ್ಬನೇ ಆಪ್ತ ಮಿತ್ರನಿರುವಿ ಮಹಾತಪಸ್ವಿಯಾದ ಲೀಲಾಪುರುಷನಾದ ಪ್ರಭು ಶ್ರೀ ನಾರಾಯಣ! ನಿನ್ನನ್ನು ನಮಿಸುವೆವು ನೀನು ಈ ಜಗತ್ತಿನ ಸೃಷ್ಟಿ–ಸ್ಥಿತಿ ಪಾಲನೆಗಳಿಗೆ ಕಾರಣನಿರುವಿ ||೩೭||

ಈ ರೀತಿ ಬ್ರಹ್ಮಾದಿ ದೇವತೆಗಳು ವಿನಯದಿಂದ ತಲೆಬಾಗಿ ಭಗವಾನ್ ವೀರನಾರಾಯಣನನ್ನು ಸ್ತುತಿಸಿ ಪ್ರಾರ್ಥಿಸಿದರು ||೩೮||

ಹೇ ಮಾಧವ! ಪ್ರಜಾಪೀಡಕರಾಗಿ ದೇವದ್ವೇಷಿಗಳಾದ ಈ ಕಪೋತರೋಮನೇ ಮೊದಲಾದ ದಾನವರನ್ನು ಸಂಹರಿಸಿದಿ. ||೩೯||

'ಭಗವನ್! ನಾರಾಯಣ! ಈ ಪುಣ್ಯಸ್ಥಳವನ್ನು ದಾನವ ಸಂಹಾರದಿಂದ ನಿರಾತಂಕಗೊಳಿಸಿದಿ ಪ್ರಭೋ! ಭಕ್ತಾನುಗ್ರಹಕ್ಕಾಗಿ ನೀನಿಲ್ಲಿಯೇ ನೆಲೆಸು' ಎಂದು ವಿನಂತಿಸಿದರು. ||೪೦||

ನಾರಾಯಣನು ಹೇಳಿದನು —

ಶಂಕರನು ಕಳಿಸಿದ ಈ ಕ್ರತುಮುನಿಯು ನನ್ನಲ್ಲಿಗೆ ಬಂದು ಪ್ರಾರ್ಥಿಸಿದನು ಅದರಂತೆ ಇಲ್ಲಿಗೆ ಬಂದು ಪರಶಿವನ ಇಷ್ಟದಂತೆ ಈ ದುಷ್ಟದಾನವರನ್ನು ಸಂಹರಿಸಿದೆ ||೪೧||

ತಾನು ಬೆಳೆಸಿದ್ದು ವಿಷವೃಕ್ಷವಾದರೂ ಅದನ್ನು ತಾವೇ ಕಡಿಯಲು ಯಾರಿಗೂ ಮನಸ್ಸಾಗದಂತೆ ಈ ದಾನವರು ದುಷ್ಟರಾಗಿದ್ದರೂ ಸಹ ತಾನೇ ವರವಿತ್ತ ಕಾರಣ ಶಂಕರನು ಇವರನ್ನು ಸಂಹರಿಸಲಿಲ್ಲ. ||೪೨||

ಇದು ಭಗವಾನ್ ಶಂಕರನ ಸ್ವಂತದ ವಾಸಸ್ಥಾನವಾಗಿದೆ. ಶಂಕರನ ಅಪ್ಪಣೆಯಿಲ್ಲದೇ ನಾನಿಲ್ಲಿ ವಾಸ ಮಾಡಲಾರೆ. ಆದ್ದರಿಂದ ನಾನು ಗಂಧಮಾದನ ಪರ್ವತಕ್ಕೆ ಹಿಂತಿರುಗುವೆ.||೪೩||

ನಾರಾಯಣನು ಹೀಗೆ ಹೇಳುವಷ್ಟರಲ್ಲಿ ಭಗವಾನ್ ಶ್ರೀ ನೀಲಕಂಠೇಶ್ವರನು ತನ್ನ ಪರಿವಾರ ಗಣದೊಂದಿಗೆ ಅಲ್ಲಿ ಪ್ರತ್ಯಕ್ಷನಾದನು. ||೪೪||

ಪರಶಿವನು ಮಾಹೀಮಲ್ಲಿಗೆಯಂತೆ, ಚಂದ್ರನಂತೆ, ಹಾಲಿನಂತೆ, ಶುಭ್ರನಾಗಿದ್ದನು. ಹಾಲಾಹಲವನ್ನು ಕಂಠದಲ್ಲಿ ಧರಿಸಿದ್ದರಿಂದ ನೀಲಗ್ರೀವನೆನಿಸಿದನು. ಕೋಟಿಸೂರ್ಯ ಪ್ರಕಾಶನಾದ ಉಮಾಪತಿಯು ಕೋಟಿಚಂದ್ರರಂತೆ ತಂಪೆರೆಯುವವನೂ ಆಗಿದ್ದನು. ಮುಕ್ಕಣ್ಣ ಪರಶಿವನು ಶಿರಸ್ಸಿನಲ್ಲಿ ಅರ್ಧಚಂದ್ರನನ್ನೂ, ಗಂಗೆಯನ್ನೂ, ಕೊರಳಲ್ಲಿ ಸ್ಫಟಿಕ ಮಾಲೆಯನ್ನೂ, ನೊಸಲಿನಲ್ಲಿ ವಿಭೂತಿಯನ್ನೂ ಧರಿಸಿದ್ದನು. ವ್ಯಾಘ್ರಚರ್ಮವನ್ನು ತೊಟ್ಟು, ಗಜಚರ್ಮವನ್ನು ಹೊದ್ದ ಸಕಲ ವಿದ್ಯೆಗಳಿಗೂ ಅಧಿಪತಿಯಾದ ಮತ್ತು ಎಷ್ಟು ನೋಡಿದರೂ ತೃಪ್ತಿಯಾಗದ ಭವ್ಯರೂಪವನ್ನು ಧರಿಸಿದ ಪರಶಿವನನ್ನು ನಮಿಸಿ ಬ್ರಹ್ಮನಾರಾಯಣನಾದಿಗಳು ಸ್ತುತಿಸಲಾರಂಭಿಸಿದರು. ||೪೫-೪೮||

ದೇವಾ ಊಚುಃ —

ನಮಸ್ತೇ ಮನ್ಯವೇ ರುದ್ರ ತವಾಸ್ತ್ವಿಷವೇ ನಮಃ ।
ನಮಸ್ತೇಽಸ್ತು ಪಿನಾಕಾಯ ಬಾಹುಭ್ಯಾಂ ತೇ ನಮೋ ನಮಃ ॥೪೯॥

ಯಾ ತೇ ಶಿವಾ ತನುರ್ಘೋರಾ ಯಾ ಚ ತಾಭ್ಯಾಂ ನಮೋ ನಮಃ ।
ಅಮುಷ್ಯೈ ತವ ಚಿಚ್ಛಕ್ತ್ಯೈ ರುದ್ರಾಣ್ಯೈ ಚ ನಮೋ ನಮಃ ॥೫೦॥

ಯಾ ಅಷ್ಟೌ ಮೂರ್ತಯಸ್ತಾಭಿಸ್ತ್ವಯಾ ವ್ಯಾಪ್ತಂ ಚರಾಚರಮ್ ।
ತತ್ತತ್ತ್ವಂ ನೈವ ಪಶ್ಯಾಮೋ ಯತ್ತ್ವಂ ನ ಬವಸೀಶಿತಃ ॥೫೧॥

ತ್ವತ್ಸತ್ತಯಾನುವಿದ್ಧೇಯಂ ಸುಷುವೇ ಪ್ರಕೃತಿರ್ಜಗತ್ ।
ಕಾದಂಬಿನೀವ ತ್ವಯ್ಯೇವ ವಿಧೃತ್ಯ ಪ್ರತಿಲೀಯತೇ ॥೫೨॥

ತವ ನಿಃಶ್ವಸಿತಂ ವೇದಾಸ್ತವೇಕ್ಷಾ ಲೋಕಸಂಭವಃ ।
ತವ ಕ್ರೋಧೋದ್ಭವೋ ಮೃತ್ಯುರತಃ ಸರ್ವೋತ್ತಮೋ ಭವಾನ್ ॥೫೩॥

ಶಕ್ತಯಃ ಸರ್ವಭಾವಾನಾಮಚಿಂತ್ಯಜ್ಞಾನಗೋಚರಾಃ ।
ಸರ್ಗಾದೌ ಬ್ರಹ್ಮಣಸ್ತ್ವತ್ತಃ ಸರ್ವಾಃ ಪ್ರಾದುರ್ಭವಂತಿ ತಾಃ ॥೫೪॥

ಯಲ್ಲಿಂಗಾಂಕಂ ತ್ರ್ಯಂಬಕಃ ಸರ್ವಮೀಶೋ
ದೇವೀ ಸರ್ವಂ ಯಚ್ಚ ಲೋಕೇ ಭಗಾಂಕಮ್ ।
ತಸ್ಮಾದಸ್ಯ ತ್ವಂ ಪಿತೋಮೈವ ಮಾತಾ
ಲೋಕಸ್ಯಾತಸ್ತ್ವಾಂ ನುಮಃ ಸಾಂಬಮೀಶಮ್ ॥೫೫॥

ಸೂತ ಉವಾಚ —

ಇತಿ ಪ್ರಗೃಣತಾಂ ತೇಷಾಂ ಬ್ರಹ್ಮನಾರಾಯಣಾವುಭೌ ।
ಶಂಕರಃ ಸ್ವಯಮುತ್ಥಾಯ ಪ್ರೇಮ್ಣಾ ತೌ ಪರಿಷಸ್ವಜೇ ॥೫೬॥

ಆಸಾಂಚಕ್ರೇ ಭವಾನೀಶಸ್ತಾಭ್ಯಾಂ ಸಹ ನಿಜಾಸನೇ ।
ವ್ಯಾಜಹಾರ ತ್ರಯಾಣಾಂ ನೋ ನ ಭಿದಾಸ್ತಿ ಸ್ವರೂಪತಃ ॥೫೭॥

ಘಟಾಕಾಶಾದಿವದ್ಭೇದೋ ವ್ಯವಹಾರೇಽಸ್ತು ತೇನ ಕಿಮ್ ।
ಈಶಿತವ್ಯಾ ಇಮೇ ಸರ್ವೇ ಜೀವಾ ಈಶಾ ವಯಂ ತ್ರಯಃ ॥೫೮॥

ತಸ್ಮಾದಸ್ಮಿನ್ ಮಮ ಕ್ಷೇತ್ರೇ ವೀರನಾರಾಯಣ! ತ್ವಯಾ ।
ವಸ್ತವ್ಯಂ ಬ್ರಹ್ಮಣಾಽಪೀಹ ಯಷ್ಟವ್ಯಂ ಪ್ರೀತಯೇ ಮಮ ॥೫೯॥

ದೇವತೆಗಳು ಹೇಳಿದರು –

ಜಗದೀಶ! ಪರಶಿವ! ನಿನ್ನ ಕೋಪ, ಬಾಣಗಳನ್ನು ನಿನ್ನ ಧನುಸ್ಸಾದ ಪಿನಾಕವನ್ನು, ನಿನ್ನ ಬಾಹುಗಳನ್ನು ನಮಿಸುವೆವು ॥೪೯॥

ಶಿಷ್ಟ ಪರಿಪಾಲನೆಗೆ ತಾಳುವ ನಿನ್ನ ಸೌಮ್ಯ ರೂಪಕ್ಕೂ, ದುಷ್ಟ ನಿಗ್ರಹಕ್ಕಾಗಿ ಧರಿಸುವ ನಿನ್ನ ಉಗ್ರರೂಪಕ್ಕೂ ನಮಸ್ಕಾರ. ಈ ನಿನ್ನ ಚಿಚ್ಛಕ್ತಿಯಾದ ರುದ್ರಾಣೀ ಶ್ರೀಪಾರ್ವತೀದೇವಿಗೂ ನಮಸ್ಕಾರ. ॥೫೦॥

ನಿನ್ನ ಅಷ್ಟ ಶರೀರಗಳಿಂದಲೇ ಚರಚರಾತ್ಮಕವಾದ ಈ ಜಗತ್ತು ವ್ಯಾಪ್ತವಾಗಿದ ನೀನು ವ್ಯಾಪಿಸದೇ ಇದ್ದ ಯಾವ ತತ್ತ್ವವನ್ನೂ ನಾವು ಕಾಣಲಾರೆವು ॥೫೧॥

ನಿನ್ನ ಸತ್ತ್ವದಿಂದಲೇ ಪ್ರಕೃತಿಯು ಈ ಜಗತ್ತನ್ನು ಸೃಷ್ಟಿಸಿತು. ಮೋಡಗಳು ತಮ್ಮಿಷ್ಟಕ್ಕೆ ತಾವೇ ಆಕಾಶದಲ್ಲಿ ಹುಟ್ಟಿ ಕರಗುವಂತೆ ಈ ಜಗತ್ತು ನಿನ್ನಲ್ಲಿಯೇ ಹುಟ್ಟಿ ಲೀನವಾಗುವುದು. ॥೫೨॥

ನಿನ್ನ ನಿಃಶ್ವಾಸವೇ ವೇದಗಳೆನಿಸಿದೆ ನಿನ್ನ ನೋಟ ಮಾತ್ರದಿಂದ ಲೋಕ ಸೃಷ್ಟಿಯಾಗಿದೆ. ನಿನ್ನ ಕ್ರೋಧದಿಂದ ಮೃತ್ಯುವು ಜನ್ಮತಾಳಿತು ಆದ್ದರಿಂದ ನೀನೇ ಸರ್ವೋತ್ತಮನಿರುವಿ. ॥೫೩॥

ತೇಜಸ್ಸು ಮೊದಲಾದ ಎಲ್ಲ ಪದಾರ್ಥಗಳ ದಾಹಕತ್ವಾದಿ ವಿವಿಧ ಶಕ್ತಿಗಳ ರಹಸ್ಯಗಳು ಸರ್ವಜ್ಞನಾದ ನಿನಗೆ ಮಾತ್ರ ತಿಳಿಯುವಂತಹವು ಈ ಎಲ್ಲ ಶಕ್ತಿಗಳು ಸೃಷ್ಟಿಯ ಆರಂಭದಲ್ಲಿ ಪರಬ್ರಹ್ಮಸ್ವರೂಪನಾದ ನಿನ್ನಿಂದಲೇ ಪ್ರಕಟವಾಗುವವು ॥೫೪॥

ಲೋಕದೊಳಿರುವ ಸಕಲ ಪುರುಷಜೀವಿಗಳು ನೀನಾದರ, ಎಲ್ಲ ಸ್ತ್ರೀ ಜೀವಿಗಳೂ ಮಾತೆ ಗಿರಿಜೆಯ ಸ್ವರೂಪರಾಗಿರುವರು. ಆದ್ದರಿಂದ ಶ್ರೀರಾಜರಾಜೇಶ್ವರೀದೇವಿ ಹಾಗೂ ನೀನು ಲೋಕದ ಮಾತಾಪಿತೃಗಳಾಗಿರುವಿರಿ. ಕಾರಣ ಪಾರ್ವತೀಪತಿಯಾದ ನಿನ್ನನ್ನು ನಮಿಸುವೆವು. ॥ ೫೫ ॥

ಸೂತನು ಹೇಳಿದನು –

ದೇವತೆಗಳು ಈ ರೀತಿ ತನ್ನನ್ನು ಸ್ತುತಿಸುತ್ತಿರಲು ಭಗವಾನ್ ಶಂಕರನು ತಾನೇ ಎದ್ದುಬಂದು ಬ್ರಹ್ಮ ನಾರಾಯಣರಿಬ್ಬರನ್ನೂ ಪ್ರೇಮದಿಂದ ಆಲಿಂಗಿಸಿದನು. ॥೫೬॥

ಭವಾನೀಪತಿಯಾದ ಪರಶಿವನು ಅವರಿಬ್ಬರೊಂದಿಗೆ ತನ್ನ ಆಸನದಲ್ಲಿ ಕುಳಿತು "ನಮ್ಮ ಮೂವರಲ್ಲಿ ಸ್ವಭಾವತಃ ಭೇದವಿಲ್ಲ. ಆಕಾಶವು ಒಂದೇ ಆದರೂ ಉಪಾಧಿ ಯಿಂದಾಗಿ "ಘಟಾಕಾಶ–ಮಠಾಕಾಶ"ವೆಂದು ಭೇದ ಹೊಂದಿದೆ. ಆದರೆ ಅದರಿಂದ ಆಕಾಶವು ಬಹಳ ಇವೆಯೆಂದು ಯಾರೂ ಅನ್ನುವುದಿಲ್ಲ. ನಾವು ಮೂವರೂ ನಿಯಾಮಕರು. ಸಕಲ ಜೀವರು ನಿಯಮ್ಯರು. । ೫೭–೫೮ ॥

ಆದ್ದರಿಂದ ನಾರಾಯಣ! ಈ ನನ್ನ ಕ್ಷೇತ್ರದಲ್ಲಿ ನೀನು ನೆಲಸಬೇಕು. ಬ್ರಹ್ಮದೇವ! ನೀನು ಈ ಕ್ಷೇತ್ರದಲ್ಲಿ ಯಾಗವನ್ನು ಮಾಡು. ಇದರಿಂದ ನನಗೆ ಸಂತಸ ವಾಗುವುದು ಎಂದನು. ॥೫೯॥

ಕ್ರತುಮಾಹ ಮಹೇಶಾನೋ ದೇವಕಾರ್ಯಂ ಕೃತಂ ತ್ವಯಾ ।
ಇದಂ ಕ್ರತುಪುರಂ ನಾಮ ತವ ನಾಮ್ನಾ ಭವಿಷ್ಯತಿ ॥೬೦॥

ನಿಖಾಯ ಲಿಂಗತ್ರಿತಯಮೇಕಸ್ಮಿನ್ ಪೀಠಕೇ ತ್ವಯಾ ।
ಮತ್ಪ್ರತಿಷ್ಠಾ ವಿಧಾತವ್ಯಾ ತ್ರಿಕೂಟೇಶ್ವರಸಂಜ್ಞಯಾ ॥೬೧॥

ವೀರನಾರಾಯಣಸ್ಯಾಸ್ಯ ಮೂರ್ತಿಂ ಕೃತ್ವಾ ವಿಧಾನತಃ ।
ತ್ವಯಾ ಪ್ರತಿಷ್ಠಾ ಕರ್ತವ್ಯಾ ನರಸಿಂಹಸಮೀಪತಃ ॥೬೨॥

ಪ್ರಾದುರ್ಭೂಯಾತ್ಸ್ರವಂತ್ಯತ್ರ ಯಾ ನಾಮ್ನಾ ಗುಪ್ತಗಾಮಿನೀ ।
ಬ್ರಾಹ್ಮಣಾದ್ಯಾಃ ಪ್ರಜಾಃ ಸರ್ವಾಃ ಸಮೇಷ್ಯಂತಿ ತತಸ್ತತಃ ॥೬೩॥

ಮಮ ವಿಷ್ಣೋಶ್ಚ, ಸಾನ್ನಿಧ್ಯಂ ಕ್ಷೇತ್ರೇಽಸ್ಮಿನ್ ಸರ್ವದಾ ಭವೇತ್ ।
ಶಿವಕ್ಷೇತ್ರಮಿದಂ ಜ್ಞೇಯಂ ವಿಷ್ಣುಕ್ಷೇತ್ರಮಿದಂ ತಥಾ ॥೬೪॥

ಚತುರ್ಣಾಂ ಪುರುಷಾರ್ಥಾನಾಂ ಸಿದ್ಧಿರತ್ರ ಕರಸ್ಥಿತಾ ।
ಕಿಂ ತಸ್ಯ ದುಷ್ಕರಂ ಯಸ್ಯ ಪ್ರಸನ್ನೌ ಹರಿಶಂಕರೌ ॥೬೫॥

ಯುಗೇ ಯುಗೇ ಸಮುಚ್ಛಿತ್ತಿಮಿದಂ ಕ್ಷೇತ್ರಂ ಪ್ರಯಾಸ್ಯತಿ ।
ಜೀರ್ಣೋದ್ಧಾರಂ ಕರಿಷ್ಯಂತಿ ಧರ್ಮಿಷ್ಠಾಸ್ತತ್ರ ಯೇ ನೃಪಾಃ ॥೬೬॥

ಮಯಾ ಯದುಕ್ತಂ ತತ್ಸರ್ವಂ ಕ್ರತೋ ! ಸಮ್ಯಗ್ವಿಧಾಯ ಚ ।
ವಾಸಯಿತ್ವಾ ಪ್ರಜಾಃ ಸರ್ವಾಃ ಸತ್ಯಲೋಕಂ ತತೋ ವ್ರಜ ॥೬೭॥

ಗಣೇಶಂ ಯೋಜಯಾಮಾಸ ಕ್ರತೋಃ ಸಾಹಾಯ್ಯಕರ್ಮಣಿ ।
ಘಂಟಾಕರ್ಣಂ ಚ ಭಗವಾನ್ ಮಹೇಶೋ ಸಿದ್ಧಿದಾಯಕಮ್ ॥೬೮॥

ಇತ್ಯುಕ್ತ್ವಾಂತರ್ದಧೇ ಶಂಭುಸ್ತಥಾ ನಾರಾಯಣೋ ವಿಭುಃ ।
ಇಂದ್ರಾದ್ಯಾ ದೇವತಾಃ ಸರ್ವಾಃ ಸ್ವಾನಿ ಸ್ಥಾನಾನಿ ಭೇಜಿರೇ ॥೬೯॥

**ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ**
**ಕ್ರತುಪುರಮಾಹಾತ್ಮ್ಯೇ**
**ದೈತ್ಯವಧೋ ನಾಮ ತೃತೀಯೋಽಧ್ಯಾಯಃ**

ನಂತರ ಪರಶಿವನು ಕ್ರತುಮುನಿಯನ್ನು ಕುರಿತು ''ಕ್ರತುಮುನಿಯೇ! ನೀನು ದೇವಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಿದಿ ಈ ಪಟ್ಟಣವು 'ಕ್ರತುಪುರ'ವೆಂದು ನಿನ್ನ ಹೆಸರಿನಿಂದಲೇ ಪ್ರಸಿದ್ಧಿ ಹೊಂದುವುದು ।।೬೦।।

ಒಂದೇ ಸೋಮಸೂತ್ರಪೀಠದಲ್ಲಿ ಮೂರು ಲಿಂಗಗಳನ್ನು ಕಡೆದು 'ತ್ರಿಕೂಟೇಶ್ವರ' ನೆಂಬ ಹೆಸರಿನಿಂದ ಪ್ರತಿಷ್ಠಾಪಿಸು ।।೬೧।।

ಅದರಂತೆಯೇ ನೃಸಿಂಹಸ್ವಾಮಿಯ ಸಮೀಪ ವೀರನಾರಾಯಣನ ಮೂರ್ತಿ ಯನ್ನು ನಿರ್ಮಿಸಿ ವಿಧಿವತ್ತಾಗಿ ಪ್ರತಿಷ್ಠಾಪಿಸು ।।೬೨।।

ಗುಪ್ತಗಾಮಿನಿಯೆಂದೇ ಹೆಸರುಳ್ಳ ಒಂದು ನದಿಯು ಪ್ರಕಟವಾಗುವುದು. ಬ್ರಾಹ್ಮಣಾದಿ ಚತುರ್ವರ್ಣೀಯ ಜನರೂ ಬೇರೆ ಬೇರೆ ಪ್ರದೇಶಗಳಿಂದ ಇಲ್ಲಿಗೆ ಬರುವರು. ।।೬೩।।

ನನ್ನ ಹಾಗೂ ವಿಷ್ಣುವಿನ ಸಾನ್ನಿಧ್ಯವು ಈ ಕ್ಷೇತ್ರದಲ್ಲಿ ಸರ್ವದಾ ಇರುವುದು ಶಿವಕ್ಷೇತ್ರವಾದ ಇದನ್ನು ವಿಷ್ಣುಕ್ಷೇತ್ರವೆಂದೂ ತಿಳಿಯಬೇಕು. ।।೬೪।।

ಚತುರ್ವಿಧ ಪುರುಷಾರ್ಥಗಳ ಸಿದ್ಧಿಯು ಇಲ್ಲಿ ಕರಗತವಾಗಿರುವುದು ಶಿವ-ನಾರಾಯಣರು ಪ್ರಸನ್ನರಾದರೆ ಈ ಲೋಕದಲ್ಲಿ ಅಸಾಧ್ಯವಾದದ್ದು ಏನಿದೆ? ।।೬೫।।

ಕಾಲಾನುಸಾರ ಈ ಕ್ಷೇತ್ರವು ಶಿಥಿಲವಾದಾಗ ಧರ್ಮನಿಷ್ಠರಾದ ರಾಜರು ಇದರ ಜೀರ್ಣೋದ್ಧಾರಗೈಯುವರು ।।೬೬।।

ಕ್ರತುಮುನಿಯೇ! ನಾನು ಹೇಳಿದ ಎಲ್ಲ ಕಾರ್ಯಗಳನ್ನು ಸರಿಯಾಗಿ ಮಾಡಿ, ಈ ಕ್ಷೇತ್ರದಲ್ಲಿ ಜನರು ವಾಸಿಸುವಂತೆ ಮಾಡಿ ನಂತರ ಸತ್ಯಲೋಕವನ್ನು ಹೊಂದು ಎಂದು ಹೇಳಿದನು. ।।೬೭।।

ನಂತರ ಪರಶಿವನು ಕ್ರತುಮುನಿಯ ಕಾರ್ಯಗಳಿಗೆ ಸಹಾಯಕರನ್ನಾಗಿ ಗಣಪತಿಯನ್ನೂ, ತನ್ನ ಪ್ರಮಥಗಣದಲ್ಲೊಬ್ಬನಾದ ಘಂಟಾಕರ್ಣನನ್ನೂ ನಿಯೋಜಿಸಿದನು. ।।೬೮।।

ಇಷ್ಟು ಹೇಳಿ ಪರಶಿವನು ಅಂತರ್ಧಾನ ಹೊಂದಿದನು. ಬ್ರಹ್ಮ ನಾರಾಯಣರೂ ಸಹ ಅದೃಶ್ಯರಾದರು. ಇಂದ್ರಾದಿ ದೇವತೆಗಳು ತಮ್ಮ ತಮ್ಮ ಸ್ಥಾನಗಳಿಗ ತೆರಳಿದರು. ।। ೬೯ ।।

ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ
ಕ್ರತುಪುರಮಾಹಾತ್ಮ್ಯೆಯಲ್ಲಿ
ದೈತ್ಯವಧೆಯೆಂಬ ಮೂರನೇ ಅಧ್ಯಾಯವು ಮುಗಿಯಿತು.

# ಅಥ ಚತುರ್ಥೋಽಧ್ಯಾಯಃ

**ಸೂತ ಉವಾಚ –**

ಘಂಟಾಕರ್ಣಂ ಕ್ರತುಃ ಪ್ರಾಹ ಸಮಂತಾದಟವೀಮಿಮಾಮ್।
ಛಿತ್ತ್ವಾ ಲೋಕನಿವಾಸಾಯ ಯೋಗ್ಯಸ್ಥಾನಂ ವಿಧೀಯತಾಮ್ ॥೧॥

ತದಾಕರ್ಣ್ಯ ಕ್ರತುವಚೋ ಘಂಟಾಕರ್ಣೋ ಗಣೈಃ ಸಹ।
ವನಂ ಛೇತ್ತುಂ ಸಮಾರೇಭೇ ಸಮಂತಾದ್ಯೋಜನತ್ರಯಮ್ ॥೨॥

ಏಕೇನ ಮಾಸಾ ವಿಪಿನಂ ಕಂಟಕದ್ರುಮಭೀಷಣಮ್ ।
ಛಿತ್ತ್ವಾ ಭೂಮಿಂ ಸಮಾಂ ಚಕ್ರೇ ಆವಾಸಾನ್ಲೋಕಹರ್ಷಿಣಾ ॥೩॥

ಕ್ರತೋರಾಜ್ಞಾಂ ಪುರಸ್ಕೃತ್ಯ ಮಾಪಯಿತ್ವಾ ಮಹೀಂ ತತಃ ।
ಪ್ರಾಕಾರಂ ಪರಿತಶ್ಚಕ್ರೇ ಚತುರ್ಗೋಪುರಮಂಡಿತಮ್ ॥೪॥

ಶಂಭೋಃಪ್ರಾಸಾದಮವರಂ ವೀರನಾರಾಯಣಸ್ಯ ಚ ।
ಕಾರಯಾಮಾಸ ಕುಶಲೈಃ ಶಿಲ್ಪಿಭಿಃ ಶಿವಪಾರ್ಷದಃ ॥೫॥

ಸಮಾಜಗ್ಮುಃ ಪ್ರಜಾಃ ಕಾಲೇ ಶ್ರುತ್ವಾ ಕ್ರತುಪುರಪ್ರಥಾಮ್ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಅಥ ವಿಲೋಮಜಾಃ ॥೬॥

ತತ್ರಾಗತಾನಾಂ ಲೋಕಾನಾಂ ಯದ್ಯತ್ತೇಷಾಮಪೇಕ್ಷಿತಮ್ ।
ಹೇರಂಬಃ ಪ್ರಾಪಯಾಂಚಕ್ರೇ ಶಿವಕ್ಷೇತ್ರಪಿವೃದ್ಧಯೇ ॥೭॥

ಸತ್ಯಲೋಕಂ ಸಮಾಸಾದ್ಯ ಬ್ರಹ್ಮಾಣಂ ಪ್ರಣತಃ ಕ್ರತುಃ ।
ವ್ಯಜಿಜ್ಞಪದ್ಯಜ್ಞಕಾಲಂ ದೇವಯೋಃ ಸ್ಥಾಪನಂ ತಥಾ ॥೮॥

ಸಂತಃ ಪರಾರ್ಥೈಕಫಲಾ ಇತಿ ಶಿಕ್ಷಾನ್ಯಥಾ ಕಥಮ್ ।
ಲೋಕೇ ಪ್ರವರ್ತತಾಂ ಸಂತೋ ಯದಿ ಸ್ಯುಃ ಸ್ವಾರ್ಥತತ್ಪರಾಃ ॥೯॥

ತಸ್ಯ ಪ್ರಾರ್ಥಿತಮಾಕರ್ಣ್ಯ ಬ್ರಹ್ಮಾ ದೇವೈಃ ಸಹರ್ಷಿಭಿಃ ।
ಗಂಧರ್ವೈರಪ್ಸರೋಭಿಶ್ಚ ಭುವಮಾಯಾನ್ಮುದಾನ್ವಿತಃ ॥೧೦॥

ವೀಕ್ಷ್ಯ ಕ್ರತುಪುರಂ ರಮ್ಯಂ ಪ್ರಾಸಾದೌ ಶೈವವೈಷ್ಣವೌ ।
ಮುದಂ ಪರಮಿಕಾಂ ಲೇಭೇ ಸಾಧು ಸಾಧ್ವಿತ್ಯಭಾಷತ ॥೧೧॥

ಲೋಕೇಶ ಆಗತೇ ತತ್ರ ಸಮಾಜಗ್ಮುಃ ಸಹಸ್ರಶಃ ।
ತಪೋಧನಾ ಮಹಾಭಾಗಾಸ್ತಾನ್ವಕ್ಷ್ಯಾಮಿ ಸಮಾಸತಃ ॥೧೨॥

# ನಾಲ್ಕನೆಯ ಅಧ್ಯಾಯ

ಸೂತನು ಹೇಳಿದನು –

ಎಲ್ಲ ದೇವತೆಗಳು ತಮ್ಮ ಸ್ಥಾನಗಳಿಗೆ ತೆರಳಿದ ನಂತರ ಕ್ರತುಮುನಿಗಳು ಘಂಟಾಕರ್ಣನಿಗೆ ಅಕ್ಕಪಕ್ಕದಲ್ಲಿರುವ ಈ ಅರಣ್ಯವನ್ನು ನಿವಾರಿಸಿ ಜನವಸತಿಗೆ ತಕ್ಕ ಸ್ಥಾನ ಮಾಡಲು ಹೇಳಿದರು ॥೧॥

ಕ್ರತುಮುನಿಯ ಮಾತನ್ನು ಕೇಳಿದ ಘಂಟಾಕರ್ಣನು ತನ್ನ ಗಣಗಳೊಂದಿಗೆ ಅಕ್ಕಪಕ್ಕದ ಮೂರುಯೋಜನ ಅರಣ್ಯ ಪ್ರದೇಶವನ್ನು ಸವರಲಾರಂಭಿಸಿ ಒಂದು ಮಾಸದಲ್ಲಿ ಪಕ್ಷಿ ಮೊದಲಾದವುಗಳಿಗೆ ಅನುಕೂಲವಾದ ವೃಕ್ಷಗಳನ್ನು ಹೊರತುಪಡಿಸಿ ಉಳಿದ ಮುಳ್ಳು ಗಿಡಮರಗಳಿಂದ ಭಯಂಕರವಾಗಿದ್ದ ಆ ಅರಣ್ಯವನ್ನು ಕಡಿದು ಭೂಮಿಯನ್ನು ಸಮಗೊಳಿಸಿ ವಾಸಿಸಲು ಯೋಗ್ಯಗೊಳಿಸಿದನು ॥೨–೩॥

ಕ್ರತುಮುನಿಯ ಆಜ್ಞೆಯನ್ನು ಪುರಸ್ಕರಿಸಿ ಭೂಮಿಯನ್ನು ಅಳೆದು ಮಟ್ಟಗೊಳಿಸಿ ಸುತ್ತಲೂ ಪ್ರಾಕಾರವನ್ನೂ ಅದಕ್ಕೆ ನಾಲ್ಕು ಗೋಪುರಗಳನ್ನೂ ನಿರ್ಮಿಸಿದನು ॥೪॥

ಶಿವಾನುಚರನಾದ ಆ ಘಂಟಾಕರ್ಣನು ಕುಶಲರಾದ ಶಿಲ್ಪಿಗಳಿಂದ ತ್ರಿಕೂಟೇಶ್ವರನ ಹಾಗೂ ವೀರನಾರಾಯಣನ ಭವ್ಯಮಂದಿರವನ್ನು ಕಟ್ಟಿಸಿದನು. ॥೫॥

ಕಾಲಕ್ರಮೇಣ ಕ್ರತುಪುರದ ಪ್ರಸಿದ್ಧಿಯನ್ನು ಕೇಳಿ ಬ್ರಾಹ್ಮಣ–ಕ್ಷತ್ರಿಯ–ವೈಶ್ಯ - ಶೂದ್ರ ಮೊದಲಾದ ಜನರು ಅಲ್ಲಿ ನೆಲೆಸಲು ಬಂದರು ॥೬॥

ಶಿವಕ್ಷೇತ್ರವು ಅಭಿವೃದ್ಧಿಯಾಗಲೆಂಬ ಬಯಕೆಯಿಂದ ಗಣಪತಿಯು ಅಲ್ಲಿಗೆ ಆಗಮಿಸಿದ ಜನರು ಅಪೇಕ್ಷಿಸಿದ್ದೆಲ್ಲವನ್ನೂ ಪೂರೈಸಿದನು. ॥೭॥

ಇಷ್ಟಾದ ಮೇಲೆ ಕ್ರತುಮುನಿಗಳು ಸತ್ಯಲೋಕಕ್ಕೆ ತೆರಳಿ ಬ್ರಹ್ಮದೇವನನ್ನು ನಮಿಸಿ 'ಶಿವ, ನಾರಾಯಣರ ಪ್ರತಿಷ್ಠೆಯ, ಹಾಗೂ ಯಜ್ಞಕರ್ಮದ ಕಾಲವು ಸಮೀಪಿಸಿದೆ ಎಂದು ವಿಜ್ಞಾಪಿಸಿದರು. ॥೮॥

ಕ್ರತುಮುನಿಯ ಪರೋಪಕಾರ ಕಾರ್ಯವು ಪ್ರಶಂಸನೀಯ. ಸಜ್ಜನರು ಸ್ವಾರ್ಥಿಗಳಾದರೆ ಅವರು ಪರೋಪಕಾರಕುಶಲರೆಂಬ ಸುಭಾಷಿತವು ಹೇಗೆ ತಾನೇ ಸರಿಹೊಂದೀತು ? ॥೯॥

ಕ್ರತುಮುನಿಯ ನಿವೇದನೆಯನ್ನು ಆಲಿಸಿದ ಬ್ರಹ್ಮದೇವನು ಸಂತುಷ್ಟನಾಗಿ ಸಕಲ ದೇವತೆಗಳನ್ನೂ, ಮಹರ್ಷಿಗಳನ್ನೂ, ವಿದ್ಯಾಧರರನ್ನೂ ಅಪ್ಸರ ಸ್ತ್ರೀಯರನ್ನೂ ಕರೆದುಕೊಂಡು ಭೂಲೋಕಕ್ಕಾಗಮಿಸಿದನು. ॥೧೦॥

ಕ್ರತುಪುರವನ್ನೂ, ಶಿವನಾರಾಯಣರ ಮಂದಿರವನ್ನೂ ನೋಡಿ ಬ್ರಹ್ಮದೇವನು ಬಹಳ ಸಂತೋಷ ಹೊಂದಿ 'ಸಾಧು ಸಾಧು' ಎಂದು ಹೊಗಳಿದನು. ಮುನಿಗಳೇ! ಬ್ರಹ್ಮ ದೇವನು ಕ್ರತುಪುರಕ್ಕೆ ಬಂದನಂತರ ಸಹಸ್ರಾರು ತಪಸ್ವಿಗಳೂ, ಮಹಾತ್ಮರೂ ಆಗಮಿಸಿದರು. ಅದೆಲ್ಲ ಬಹಳ ವಿಸ್ತಾರವಾಗುವ ಕಾರಣ ಸಂಕ್ಷೇಪವಾಗಿ ಹೇಳುವೆ. ॥೧೧–೧೨॥

ಮರೀಚಿರಂಗಿರಾ ಅತ್ರಿಃ ಪುಲಸ್ತ್ಯಃ ಪುಲಹೋ ಭೃಗುಃ ।
ದಕ್ಷೋ ವಸಿಷ್ಠಶ್ಚತ್ವಾರಃ ಸನಕಾದ್ಯಾಃ ಸನಾರದಾಃ ॥೧೩॥

ಬೃಹಸ್ಪತಿರುತಥ್ಯಶ್ಚ ಸಂವರ್ತಃ ಕಶ್ಯಪೋಽಸಿತಃ ।
ದೇವಲೋ ಗೌತಮಃ ಕಣ್ವೋ ಜಾತೂಕರ್ಣ್ಯಸ್ತಥಾಸುರಿಃ ॥೧೪॥

ಬೃಹದಶ್ವಾ ಯಾಜ್ಞವಲ್ಕ್ಯೋ ವಾಮದೇವೋದ್ವಿತಸ್ತ್ರಿತಃ ।
ಏಕತಃ ಶಂಖಲಿಖಿತೌ ಗಾಧಿರ್ಮೋರ್ಧಾಂಯನಸ್ತಥಾ ॥೧೫॥

ಆಪಸ್ತಂಬೋ ಭರದ್ವಾಜೋ ಗರ್ಗಃ ಶಾತಾತಪಃ ಕಪಿಃ ।
ಶಾಕಲಃ ಕಪಿಲೋ ಧೌಮ್ಯ ಇತ್ಯಾದ್ಯಾ ಋಷಯೋಽಪರೇ ॥೧೬॥

ತತೋ ಬ್ರಹ್ಮಾ ಸುರೈಶ್ಚಾನ್ಯೈರ್ಋಷಿಭಿಃ ಸಹ ತಾಸ್ತ್ರತಃ ।
ಪ್ರತಿಷ್ಠಾಪ್ಯ ತ್ರಿಕೂಟೇಶಂ ಹೋಮಂ ಕೃತ್ವಾ ವಿಧಾನತಃ ॥೧೭॥

ಬ್ರಾಹ್ಮಣಾನ್ ಭೋಜಯಿತ್ವಾಥ ಸ್ವಾದ್ವನ್ನೈರಮೃತೋಪಮೈಃ ।
ಮಹಾಂತಂ ಕಾರಯಾಮಾಸ ಮಹಂ ಬ್ರಹ್ಮಾ ಮಹೇಶಿತುಃ ॥೧೮॥

ಗಣೇಶಂ ಸ್ಥಾಪಯಾಮಾಸ ತ್ರಿಕೂಟೇಶಸ್ಯ ದಕ್ಷಿಣೇ ।
ಪುರಗುಪ್ತ್ಯೈ ಅಧಿಕೃತೋ ಘಂಟಾಕರ್ಣೋಽಬ್ಜಯೋನಿನಾ ॥೧೯॥

ವೀರನಾರಾಯಣಂ ದೇವಂ ಪ್ರತಿಷ್ಠಾಪಯಿತುಂ ವಿಧಿಃ ।
ವಿಧಿಂ ಪ್ರವರ್ತಯಾಮಾಸ ಸ್ವಸುತೈರ್ವಿಧಿಕೋವಿದೈಃ ॥೨೦॥

ಮುಹೂರ್ತೇ ಶೋಭನೇ ದೇವಂ ಪ್ರತಿಷ್ಠಾಪ್ಯ ರಮಾಪತಿಮ್ ।
ನೃಸಿಂಹಂ ಚ ಪ್ರತಿಷ್ಠಾಪ್ಯ ಕೃತ್ವಾ ಬ್ರಾಹ್ಮಣತರ್ಪಣಮ್ ॥೨೧॥

ತ್ರಯಾಣಾಮುತ್ಸವಾನಾಂ ಚ ಕೃತ್ವಾಽವಭೃಥಮಂತತಃ ।
ಸಂತೋಷಂ ಪರಮಂ ಲೇಭೇ ಬ್ರಹ್ಮಾ ಲೋಕಪಿತಾಮಹಃ ॥೨೨॥

ಲೋಕೇಶಂ ನಾರದೋಭ್ಯೇತ್ಯ ಪ್ರಾಹ ಪ್ರಶ್ರಯಪೂರ್ವಕಮ್ ।
ಪ್ರತಿಷ್ಠಾ ಕಾರಿತಾ ಸಮ್ಯಕ್ ವೃಷಾಕಪ್ಯೋರ್ಯಥಾವಿಧಿ ॥೨೩॥

ಲಕ್ಷ್ಮೀಪುರೇ ಮಹಾಲಕ್ಷ್ಮೀಃ ಸ್ವನಾಮ್ನಾ ಲಿಂಗಮುತ್ತಮಮ್ ।
ಪ್ರತಿಷ್ಠಾಪ್ಯ ತಪಸ್ಯಂತೀ ವರ್ತತೇ ಪತಿಲಬ್ಧಯೇ ॥೨೪॥

ಆನೀಯತಾಂ ಮಹಾಲಕ್ಷ್ಮೀರ್ಭರ್ತ್ರಾ ಯೋಜಯ ಮಾಚಿರಮ್ ।
ಇತಿ ತಸ್ಯ ವಚಃ ಶ್ರುತ್ವಾ ಮುಮುದೇ ಕಮಲಾಸನಃ ॥೨೫॥

ಮರೀಚಿ – ಅಂಗಿರಸ – ಅತ್ರಿ – ಪುಲಸ್ತ್ಯ – ಪುಲಹ – ಭೃಗು – ದಕ್ಷ – ವಸಿಷ್ಠ – ಸನಕ – ಸನಂದನ – ಸನಾತನ – ಸನತ್ಸುಜಾತ – ಸನತ್ಕುಮಾರ – ನಾರದ – ಬೃಹಸ್ಪತಿ – ಉತಥ್ಯ – ಸಂವರ್ತ – ಕಶ್ಯಪ – ಅಸಿತ – ದೇವಲ – ಗೌತಮ – ಕಣ್ವ – ಜಾತುಕರ್ಣ್ಯ – ಅಸುರಿ – ಬೃಹದಶ್ವ – ಯಾಜ್ಞವಲ್ಕ್ಯ – ವಾಮದೇವ – ದ್ವಿತ – ತ್ರಿತ – ಏಕತ – ಶಂಖ – ಲಿಖಿತ – ಗಾಧಿ – ಬೋಧಾಯನ – ಆಪಸ್ತಂಬ – ಬಾರದ್ವಾಜ – ಗರ್ಗ – ಶಾತಾತಪ– ಕಪಿ – ಶಾಕಲ – ಕಪಿಲ – ಧೌಮ್ಯ – ಮೊದಲಾದ ಮುನಿಗಳು ಬಂದಿದ್ದರು ॥ ೧೩–೧೭ ॥

ನಂತರ ಬ್ರಹ್ಮದೇವನು ದೇವತೆಗಳೊಂದಿಗ, ಮಹರ್ಷಿಗಳೊಂದಿಗೆ ವಿಧಿವತ್ತಾಗಿ ಯಾಗವನ್ನು ನೆರವೇರಿಸಿ ಶಾಸ್ತ್ರೋಕ್ತವಾಗಿ ತ್ರಿಕೂಟೇಶ್ವರನನ್ನು ಪ್ರತಿಷ್ಠಾಪಿಸಿದನು. ॥೧೭॥

ಅಮೃತ ಸಮಾನವಾದ ಪಕ್ವಾನ್ನಗಳಿಂದ ವಿಪ್ರರಿಗ ಭೋಜನ ಮಾಡಿಸಿದ ಬ್ರಹ್ಮದೇವನು ಪರಶಿವನ ಉತ್ಸವವನ್ನು ವಿಜೃಂಭಣಯಿಂದ ನಡೆಸಿದನು ॥೧೮॥

ನಂತರ ತ್ರಿಕೂಟೇಶ್ವರನ ಬಲಭಾಗಕ್ಕೆ ಗಣಪತಿಯನ್ನೂ ಹಾಗೂ ಪುರರಕ್ಷಣೆಗಾಗಿ ಘಂಟಾಕರ್ಣನನ್ನೂ ಸ್ಥಾಪಿಸಿ ಶ್ರೀ ವೀರನಾರಾಯಣನ ಪ್ರತಿಷ್ಠೆಗೆ ಸೂಕ್ತವಾದ ಮುಹೂರ್ತವೊಂದನ್ನು ಸಿದ್ಧಪಡಿಸಲು ವಿಧಿರಹಸ್ಯಗಳನ್ನೆಲ್ಲ ಅರಿತ ತನ್ನ ಮಕ್ಕಳಾದ ಮರೀಚಿ ಮೊದಲಾದವರಿಗೆ ಆಜ್ಞಾಪಿಸಿದನು. ॥ ೧೯–೨೦ ॥

ಅವರು ನಿರ್ಧರಿಸಿದ ಶುಭಮುಹೂರ್ತದಲ್ಲಿ ಲಕ್ಷ್ಮೀಪತಿಯಾದ ಶ್ರೀವೀರ–ನಾರಾಯಣ ಹಾಗೂ ಶ್ರೀನೃಸಿಂಹ ಸ್ವಾಮಿಯನ್ನು ಪ್ರತಿಷ್ಠಾಪಿಸಿ ವಿಪ್ರಸಂತರ್ಪಣೆಯನ್ನು ನೆರವೇರಿಸಿದನು ॥೨೧॥

ಈ ಮೂರೂ ಮಹೋತ್ಸವಗಳನ್ನು ನಡೆಸಿ ಅಂತಿಮವಾಗಿ ಅವಭೃಥ ಸ್ನಾನವನ್ನೂ ಮಾಡಿ ಲೋಕಪಿತಾಮಹ ಬ್ರಹ್ಮನು ಸಂತುಷ್ಟನಾದನು. ॥೨೨॥

ಬ್ರಹ್ಮದೇವನ ಮಾನಸ ಪುತ್ರರಾದ ನಾರದ ಮುನಿಗಳು ಆತನಲ್ಲಿಗೆ ಬಂದು ವಿನಯದಿಂದ "ತಂದೆ! ವಿಧಿವತ್ತಾಗಿ ತ್ರಿಕೂಟೇಶ್ವರ ವೀರನಾರಾಯಣರ ಪ್ರತಿಷ್ಠೆಯನ್ನು ಮಾಡಿದಿ. ಲಕ್ಷ್ಮೀಪುರದಲ್ಲಿ (ಲಕ್ಷ್ಮೇಶ್ವರ) ಮಹಾಲಕ್ಷ್ಮೀಯು ತನ್ನ ಹೆಸರಿನಿಂದಲೇ ಭವ್ಯಲಿಂಗವನ್ನು ಪ್ರತಿಷ್ಠಿಸಿ ಪತಿಯನ್ನು ಹೊಂದಲು ತಪಸ್ಸು ಮಾಡುತ್ತಿರುವಳು. ಮಹಾಲಕ್ಷ್ಮೀಯನ್ನು ಒಡನೆಯೇ ಇಲ್ಲಿಗೆ ಕರೆತಂದು ಪತಿಯಾದ ಭಗವಾನ್ ವೀರ ನಾರಾಯಣನೊಂದಿಗೆ ಪ್ರತಿಷ್ಠಾಪಿಸು" ಎಂದನು. ನಾರದರ ಮಾತನ್ನು ಕೇಳಿ ಬ್ರಹ್ಮದೇವನು ಬಹಳ ಸಂತೋಷ ಹೊಂದಿದನು. ॥ ೨೩–೨೫ ॥

ನಾರಾಯಣಾಜ್ಞಯಾ ಬ್ರಹ್ಮಾ ಗತ್ವಾ ಲಕ್ಷ್ಮೀಪುರಂ ಜವಾತ್ ।
ಲಕ್ಷ್ಮೀಲಿಂಗಂ ಚ ಲಕ್ಷ್ಮೀಂ ಚ ನತ್ವಾ ಭಕ್ತ್ಯಾ ಪುನಃ ಪುನಃ ॥೨೬॥

ಸಂಪ್ರಾರ್ಥ್ಯ ಲಕ್ಷ್ಮೀಂ ಲೋಕೇಶ ಆನಿನಾಯ ಕ್ರತೋಃ ಪುರಮ್ ।
ಯುಯೋಜ ಹರಿಣಾ ಲಕ್ಷ್ಮೀಂ ದಾಂಪತ್ಯಂ ತದ್ವಭೌ ತದಾ ॥೨೭॥

ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ ।
ಪುಷ್ಪವೃಷ್ಟಿಃ ಪಪಾತೋಚ್ಚೈರ್ಲಕ್ಷ್ಮೀನಾರಾಯಣೋತ್ಸವೇ ॥೨೮॥

ತೌ ಪ್ರಾಂಚೌ ದಂಪತೀ ದೇವಾ ಋಷಯಶ್ಚ ತಪೋಧನಾಃ ।
ಪ್ರಣೇಮುಸ್ತುಷ್ಟುವುರ್ಭಕ್ತ್ಯಾ ಸೂಕ್ತೈರಾನಂದಮೇದುರಾಃ ॥೨೯॥

ಅಥಾತ್ಮಭೂರ್ನಿಜಸುತಾನಾಹೂಯೇದಮಭಾಷತ ।
ಸೋಮಾದಿಕಾಃ ಸಪ್ತಸಂಸ್ಥಾಃ ಕ್ಷೇತ್ರೇಽಸ್ಮಿನ್ ವಿದಧಾಮ್ಯಹಮ್ ॥೩೦॥

ಯಜ್ಞಶಾಲಾ ವಿಧೀಯಂತಾಮಾಮಂತ್ರ್ಯಂತಾಮೃತ್ವಿಜಃ ।
ಸಂಭಾರಾಃ ಸಂಶ್ರಿಯಂತಾಂ ಚ ಶ್ವೋ ಯಕ್ಷ್ಯೇ ದೀಕ್ಷಣೀಯಯಾ ॥೩೧॥

ಇತ್ಯುಕ್ತಾಸ್ತೇ ಮರೀಚ್ಯಾದ್ಯಾ ಇಂದ್ರಾದ್ಯಾಶ್ಚ ದಿವೌಕಸಃ ।
ಸರ್ವಂ ಸಂಪಾದಯಾಮಾಸುರ್ಯದುಕ್ತಂ ಯಜ್ಞಸಾಧನಮ್ ॥೩೨॥

ಬ್ರಹ್ಮಾ ವಸಿಷ್ಠಸ್ತತ್ರಾಸೀದಧ್ವರ್ಯುಃ ಸಸುತೋಽಂಗಿರಾಃ ।
ಭೃಗುರ್ಹೋತಾಭವತ್ತತ್ರ ತತ್ಸುತಾಸ್ತದ್ಗಣೇಽಭವನ್ ॥೩೩॥

ಅತ್ರಿರೌದ್ಗಾತ್ರಮಕರೋತ್ಸ್ವಪುತ್ರೈಃ ಸಹಿತೋ ಮುನಿಃ ।
ಪುಲಸ್ತ್ಯಪುಲಹಾದ್ಯಾಶ್ಚ ಸರ್ವೇ ಆಸನ್ ಸಭಾಸದಃ ॥೩೪॥

ಚೈತ್ರ್ಯಾಂ ಬ್ರಹ್ಮಾ ದೀಕ್ಷಿತೋಽಭೂದ್ದೀಕ್ಷಣೀಯಂ ವಿಧಾಯ ಸಃ ।
ಆರಬ್ಧಾ ಪ್ರಾಯಣೀಯೇಷ್ಟಿರ್ಋತ್ವಿಗ್ಭಿಃ ಕರ್ಮಕೋವಿದೈಃ ॥೩೫॥

ಪ್ರವರ್ತಮಾನೇ ವೈಧಾತ್ರೇ ಯಜ್ಞೇ ಸರ್ವಗುಣಾನ್ವಿತೇ ।
ಚತುರ್ವಿಧಾನಾಮನ್ನಾನಾಂ ಪರ್ವತಾಃ ಸರ್ವತೋ ಬಭುಃ ॥೩೬॥

ಸುಪರ್ವಣಾಂ ಸುಧಾಪಾನಾಜ್ಜಡಿಮಾ ರಸನೇಽಭವತ್ ।
ತನ್ನಿವೃತ್ತ್ಯೈ ಸದನ್ನಾನಿ ಜಜಕ್ಷುಃ ಷಡ್ರಸಾನಿ ತೇ ॥೩೭॥

ಮತ್ತು ವೀರನಾರಾಯಣನ ಅಪ್ಪಣೆಯನ್ನು ಪಡೆದು ಒಡನೆಯೇ ಲಕ್ಷ್ಮೀಪುರಕ್ಕ (ಲಕ್ಷ್ಮೇಶ್ವರ) ತೆರಳಿ ಲಕ್ಷ್ಮೀಶ್ವರನನ್ನೂ ಶ್ರೀ ಮಹಾಲಕ್ಷ್ಮಿಯನ್ನೂ ಪುನಃ ಪುನಃ ನಮಿಸಿ ಪ್ರಾರ್ಥಿಸಿ ಭಗವತೀ ಮಹಾಲಕ್ಷ್ಮಿಯನ್ನು ಕ್ರತುಪುರಕ್ಕ ಕರತಂದು ವೀರನಾರಾಯಣ ನೊಂದಿಗೆ ಪ್ರತಿಷ್ಠಾಪಿಸಿದನು ।। ೨೬–೨೭ ।।

ಗಂಧರ್ವರಾಜರು ಲಕ್ಷ್ಮೀನಾರಾಯಣರನ್ನು ಸ್ತುತಿಸಿದರು ಅಪ್ಸರೆಯರು ನರ್ತಿಸಿದರು. ಲಕ್ಷ್ಮೀನಾರಾಯಣರ ಈ ಉತ್ಸವದಲ್ಲಿ ಆಕಾಶದಿಂದ ಪುಷ್ಪವೃಷ್ಟಿ ಯಾಯಿತು. ।।೨೮।।

ಸಂತುಷ್ಟರಾದ ತಪಸ್ವಿಗಳೂ, ಮಹರ್ಷಿಗಳೂ, ದೇವತೆಗಳೂ ಪ್ರಾಚೀನರಾದ ಲಕ್ಷ್ಮೀನಾರಾಯಣ ದಂಪತಿಗಳನ್ನು ಭಕ್ತಿಯಿಂದ ನಮಿಸಿ ಸ್ತುತಿಸಿದರು ।।೨೯।।

ನಂತರ ಬ್ರಹ್ಮದೇವನು ತನ್ನ ಸುತರನ್ನು ಕರೆದು ಈ ಪಾವನ ಕ್ಷೇತ್ರದಲ್ಲಿ ಸೋಮಯಾಗವೇ ಮೊದಲಾದ ಸಪ್ತ ಸಂಸ್ಥೆಗಳನ್ನು ಮಾಡುವೆನು ನೀವು ಯೋಗ್ಯ ಋತ್ವಿಜರನ್ನು ಆಮಂತ್ರಿಸಿ ಯಜ್ಞಶಾಲೆಯೊಂದನ್ನು ನಿರ್ಮಿಸಿ ಅಲ್ಲಿ ಸಕಲಯಜ್ಞ ಸಾಮಗ್ರಿಗಳನ್ನು ಸಿದ್ಧಪಡಿಸಿರಿ. ನಾನು ನಾಳೆಯೇ ದೀಕ್ಷಣೀಯೇಷ್ಟಿಯನ್ನು ಪ್ರಾರಂಭಿಸುವೆ. ।। ೩೦–೩೧ ।।

ಬ್ರಹ್ಮದೇವನ ಮಾತನ್ನು ಕೇಳಿದ ಮರೀಚ್ಯಾದಿ ಮಹರ್ಷಿಗಳು ಇಂದ್ರಾದಿ ದೇವತೆಗಳು ಬ್ರಹ್ಮದೇವನು ತಿಳಿಸಿದ ಯಜ್ಞದ ಸಾಧನೆ – ಸಲಕರಣೆಗಳನ್ನೆಲ್ಲ ಸಿದ್ಧಪಡಿಸಿದರು. ।।೩೨।।

ಆ ಯಜ್ಞದಲ್ಲಿ ವಸಿಷ್ಠಋಷಿಗಳು ಬ್ರಹ್ಮತ್ವ ಪ್ರಯೋಗವನ್ನು ಮಾಡಿದ್ದರು. ಅಂಗಿರಾ ಋಷಿಗಳು ತಮ್ಮ ಮಕ್ಕಳಿಂದೊಡಗೂಡಿ ಅಧ್ವರ್ಯುವಿನ ಕಾರ್ಯವನ್ನು ನಿರ್ವಹಿಸಿದರು. ಭೃಗು ಋಷಿಗಳು ಹೌತ್ರವನ್ನೂ, ಅವರ ಮಕ್ಕಳು ಆ ಗಣದಲ್ಲಿಯ ಬೇರ ಬೇರೆ ಕಾರ್ಯಗಳನ್ನು ಮಾಡಿದರು. ಅತ್ರಿಮಹಾಮುನಿಗಳು ತಮ್ಮ ಮಕ್ಕಳಿಂದೊಡಗೂಡಿ ಉದ್ಗಾತೃ ಗಣದ ಕೆಲಸಗಳನ್ನು ಜರುಗಿಸಿದರು. ಪುಲಸ್ತ್ಯ, ಪುಲಹ, ಮೊದಲಾದ ಎಲ್ಲ ಋಷಿಗಳು ಸಭಾಸದರಾಗಿದ್ದರು. ।।೩೩–೩೪।।

ಬ್ರಹ್ಮದೇವನು ಚೈತ್ರ ಪೂರ್ಣಿಮಾದಲ್ಲಿ ದೀಕ್ಷಣೀಯೇಷ್ಟಿಯನ್ನು ಮಾಡಿ ದೀಕ್ಷಿತನಾದನು. ನಂತರ ಕರ್ಮವಿಧಾನವರಿತ ಋತ್ವಿಜರೊಂದಿಗೆ ಪ್ರಾಯಣೀಯೇಷ್ಟಿ ಯನ್ನು ನೆರವೇರಿಸಿ ಸಕಲಗುಣಪೂರ್ಣವಾದ 'ವೈಧಾತ್ರ'ವೆಂಬ ಯಜ್ಞವನ್ನು ಪ್ರಾರಂಭಿಸಿದನು. ಆ ಸಮಯ ಸಂತರ್ಪಣೆಗಾಗಿ ಸಿದ್ಧಪಡಿಸಿದ ನಾಲ್ಕು ವಿಧದ ಪಕ್ವಾನ್ನಗಳು ಪರ್ವತಗಳಂತೆ ಎಲ್ಲ ಕಡೆಯೂ ಕಾಣಬರುತ್ತಿದ್ದವು. ।।೩೫–೩೬।।

ದೇವತೆಗಳು ಯಥೇಚ್ಛವಾಗಿ ಸೋಮಪಾನ ಮಾಡಿದ್ದರಿಂದ ಅವರ ನಾಲಿಗೆಗೆ ಜಾಡ್ಯ ಬಂದಿತು. ಅದನ್ನು ತೊಡೆಯಲು ಷಡ್ರಸಯುತವಾದ ಆ ದಿವ್ಯಾನ್ನಗಳನ್ನು ಭಕ್ಷಿಸಿದರು. ।।೩೭।।

ತೌರ್ಯತ್ರಿಕಂ ವೇದಘೋಷೋ ವಾದಃ ಪ್ರವದತಾಂ ತಥಾ ।
ರೋದಸೀ ಸಮಪೂರ್ಯೇತಾಂ ಮತ್ತ್ಯೈಃ ಶಬ್ದೈರ್ದಿವಾನಿಶಮ್ ॥೩೮॥

ಜಗೃಹುಃ ಸ್ವಸ್ವಭಾಗಾಂಸ್ತಾ ಯಜ್ಞಿಯಾ ದೇವತಾಸ್ತು ಯಾಃ ।
ಸರ್ವದೇವಮಯೋ ದೇವಸ್ತುತೋಷ ಪರಮೇಶ್ವರಃ ॥೩೯॥

ಮೇಘಗಂಭೀರನಿರ್ಘೋಷಾ ವಾಗಾಸೀದಶರೀರಿಣೀ ।
ಇದಂ ಕ್ರತುಪುರಕ್ಷೇತ್ರಂ ಸಮಂತಾದ್ಯೋಜನತ್ರಯಮ್ ॥೪೦॥

ಇದಂ ಶಿವಮಯಂ ಪುಣ್ಯಂ ಶಿವಭೇದ್ಯೈರಲಂಕೃತಮ್ ।
ಕಾಶೀಕ್ಷೇತ್ರಸಮಂ ಭೂಮೌ ಸತ್ಯಂ ಸತ್ಯಂ ವದಾಮ್ಯಹಮ್ ॥೪೧॥

ಇತಿ ಶ್ರುತ್ವಾ ಗಿರಂ ದಿವ್ಯಾಂ ಭೇರೀಝಾಂಕಾರಸನ್ನಿಭಾಮ್ ।
ಅಹೋಕ್ಷೇತ್ರಮಹೋಕ್ಷೇತ್ರಮಿತಿ ಕೋಲಾಹಲೋಽಭವತ್ ॥೪೨॥

ಚೈತ್ರೀಮಾರಭ್ಯ ವೈಶಾಖೀಮವಧೀಕೃತ್ಯ ಸಂತತಮ್ ।
ಸೋಮಾದ್ಯಾ ವಾಜಪೇಯಾಂತಾ ಯಥಾವಿಧ್ಯಧ್ವರಾಃ ಕೃತಾಃ ॥೪೩॥

ಉದ್ಭೂತಸಲಿಲಾ ತಾವತ್ ಸ್ರವಂತೀ ಗುಪ್ತಗಾಮಿನೀ ।
ಬಭೂವ ತಸ್ಮಿನ್ ವಿತತೇ ಕ್ರತುಕರ್ಮಣಿ ವೇಧಸಃ ॥೪೪॥

ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸತ್ಯಂ ಶ್ರುತೀರಿತಮ್ ।
ತತ್ ಸ್ವಾನುಭವಮಾರೂಢಮಿತ್ಯೂಚುರ್ವಿಸ್ಮಿತಾ ಜನಾಃ ॥೪೫॥

ಸನತ್ಕುಮಾರಪ್ರಮುಖಾ ಮುನಯಃ ಪಾರಮಾರ್ಥಿಕಾಃ ।
ಸಂಭಾವ್ಯ ಸರ್ವಮೇವಾಸ್ತಿ ಮಾಯಾಮಯಮಿತ್ಯವಿಸ್ಮಯಾಃ ॥೪೬॥

ಬ್ರಹ್ಮಾತ್ಮೈಕ್ಯವಿದಾಂ ತೇಷಾಂ ಜ್ಞಾನಿನಾಂ ದಿವ್ಯದರ್ಶನಮ್ ।
ಪ್ರಕೃತಾನುಪಯೋಗಿತ್ವಾತ್ತದಸ್ತು ಮುನಿಪುಂಗವಾಃ! ॥೪೭॥

ಏವಂ ಕ್ರತುಪುರೇ ಕೃತ್ವಾ ಯಜ್ಞಾನ್ ಲೋಕಗುರುರ್ವಿಧಿಃ ।
ರಾಜಾನಂ ಮೈಲವಂಶೀಯಂ ತತ್ರ ಸಂಸ್ಥಾಪ್ಯ ಧಾರ್ಮಿಕಮ್ ॥೪೮॥

ಚಂದ್ರಸೇನಾಹ್ವಯಂ ನಾಮ ಚಾತುರ್ವರ್ಣ್ಯಾಭಿಗುಪ್ತಯೇ ।
ತಸ್ಮೈ ಸಮ್ಯಕ್ಸದಾಚಾರಮಾದಿದೇಶ ಪಿತಾಮಹಃ ॥೪೯॥

ನೃತ್ಯ--ಗೀತ – ವಾದ್ಯ ವೃಂದಗಳು, ವೇದಘೋಷಗಳು ಹಾಗೂ ವಾಗ್ಮಿಗಳ ವಾದಗಳು ನಡದವು. ಅವುಗಳ ಶಬ್ದದಿಂದ ಭೂಮ್ಯಾಕಾಶಗಳು ತುಂಬಿಹೋದವು ||೩೮||

ಸಕಲದೇವತೆಗಳು ಆ ಯಜ್ಞದಲ್ಲಿ ತಮ್ಮ ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸಿದರು ಸಕಲದೇವಸ್ವರೂಪಿಯಾದ ಭಗವಾನ್ ಪರಮೇಶ್ವರನು ಪರಮ ಸಂತುಷ್ಟನಾದನು ||೩೯||

ಆಗ ಮೇಘಗಂಭೀರ ಸ್ವರದಿಂದ ಅಶರೀರವಾಣಿಯು ''ಮೂರು ಯೋಜನ ವಿಸ್ತೀರ್ಣವುಳ್ಳ ಈ ಕ್ರತುಪುರಕ್ಷೇತ್ರವು ಪರಮಪಾವನವಾಗಿದ ವಿವಿಧ ಶಿವಮಂದಿರ ಗಳಿಂದ ಕೂಡಿದ ಈ ಕ್ಷೇತ್ರವು ಶಿವಸ್ವರೂಪವಾಗಿದ್ದು ಭುವಿಯಲ್ಲಿ ಕಾಶೀ ಕ್ಷೇತ್ರಕ್ಕ ಸಮವಾಗಿದೆ. ಇದು ಸತ್ಯ ಪರಮಸತ್ಯ. ಸತ್ಯವನ್ನೇ ಹೇಳುವ '' ಎಂದು ನುಡಿಯಿತು (ಒಂದು ಯೋಜನೆ ಎಂದರೆ = ೧೨ ಕಿ.ಮೀ ) ||೪೦–೪೧||

ಭೇರೀನಾದದಂತೆ ಗಂಭೀರವಾಗಿ ಕೇಳಿಬಂದ ಈ ಅಶರೀರವಾಣಿಯನ್ನು ಕೇಳಿ ಅಹೋ ಈ ಕ್ಷೇತ್ರವು ಎಂಥ ಪುಣ್ಯಕ್ಷೇತ್ರ! ಎಂದು ಪರಸ್ಪರ ಪ್ರಶಂಸಿಸಿದರು ಇದರಿಂದ ದೊಡ್ಡ ಕೋಲಾಹಲವೇ ಆಯಿತು. ||೪೨||

ಚೈತ್ರಪೂರ್ಣಿಮೆಯಿಂದ ವೈಶಾಖಪೂರ್ಣಿಮೆ ವರಗ ಎಡಬಿಡದ ಸೋಮ ಯಾಗವನ್ನು ಮೊದಲ್ಗೊಂಡು ವಾಜಪೇಯದ ವರಗ ಯಾಗಗಳು ವಿಧಿವತ್ತಾಗಿ ನಡೆದವು ||೪೩||

ಬ್ರಹ್ಮದೇವನ ವಿಸ್ತೃತ ಯಜ್ಞಕಾರ್ಯದಲ್ಲಿ ಗುಪ್ತಗಾಮಿನೀ ನದಿಯು ಪ್ರವಹಿಸುತ್ತ ಉದ್ಭವಿಸಿತು. ||೪೪||

''ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ'' ಪರಮಾತ್ಮನ ಇಚ್ಛಾಮಾತ್ರದಿಂದ ಈ ಜಗತ್ತು ಸೃಷ್ಟಿಯಾಗುವುದೆಂದು ವೇದವು ಹೇಳಿದ್ದು ಸತ್ಯವೇ ಇದ ಅದನ್ನೀಗ ನಾವು ಪ್ರತ್ಯಕ್ಷವಾಗಿ ನೋಡಿದೆವೆಂದು ಸಕಲ ಜನರು ವಿಸ್ಮಯದಿಂದ ನುಡಿದರು. ||೪೫||

ಆದರೆ ಸರ್ವದಾ ಬ್ರಹ್ಮಚಿಂತನೆಯಲ್ಲಿಯೇ ತೊಡಗಿರುವ ಸನತ್ಕುಮಾರರೇ ಮೊದಲಾದ ಮುನಿವರ್ಯರು ಇವೆಲ್ಲವೂ ಅವಿದ್ಯಾಮಯವಾದದ್ದೆಂದು ಅರಿತಿದ್ದರಿಂದ ಆಶ್ಚರ್ಯಗೊಳ್ಳಲಿಲ್ಲ. ||೪೬||

ಮುನಿಗಳೇ! ಬ್ರಹ್ಮಜ್ಞಾನಿಗಳಾದ ಅವರ ದಿವ್ಯಸಿದ್ಧಾಂತವನ್ನು ಈಗ ತಿಳಿಸಿದರ ಪ್ರಯೋಜನವಾಗದು. ಆದ್ದರಿಂದ ಈಗ ಅದರ ಪ್ರಸಕ್ತಿ ಬೇಡ. ಕಥೆಯನ್ನೇ ಮುಂದುವರಿಸುವ. ಕೇಳಿರಿ. ||೪೭||

ಈ ರೀತಿ ಲೋಕಗುರು ಬ್ರಹ್ಮನು ಕ್ರತುಪುರದಲ್ಲಿ ಯಜ್ಞಗಳನ್ನು ನರವೇರಿಸಿ ಧಾರ್ಮಿಕನಾದ ಮೈಲವಂಶದ ಚಂದ್ರಸೇನನೆಂಬ ರಾಜನನ್ನು ಚಾತುರ್ವರ್ಣ್ಯಸಂರಕ್ಷಣೆ ಗಾಗಿ ಅಲ್ಲಿಯೇ ನಿಯಮಿಸಿ ಅವನಿಗೆ ಸದಾಚಾರಗಳ ವಿಚಾರವನ್ನೂ ಹಿತವಾಗಿ ಬೋಧಿಸಿದನು. ||೪೮–೪೯||

ಬ್ರಾಹ್ಮಣಾನ್ ಭರ ಭೂದೇವಾನ್ ದೇವಾನ್ ಯಜ ಭಜಸ್ವ ಗಾಃ ।
ಪ್ರಜಾಃ ಪಾಲಯ ಧರ್ಮೇಣ ಶ್ರೇಯಃ ಪರಮವಾಪ್ಸ್ಯಸಿ ॥೫೦॥

ಕಾರಯಸ್ವಾಪ್ರಮಾದೇನ ನಿತ್ಯಪೂಜೋತ್ಸವಾದಿಕಮ್ ।
ತ್ರಿಕೂಟೇಶಸ್ಯ ಲಿಂಗಸ್ಯ ವೀರನಾರಾಯಣಸ್ಯ ಚ ॥ ೫೧॥

ಉಪದಿಶ್ಯೇತಿ ರಾಜಾನಂ ಬ್ರಹ್ಮಾ ಸ್ವತನಯೈಃ ಸಹ ।
ಸತ್ಯಲೋಕಂ ಯಯೌ ದೇವಾ ಇಂದ್ರಾದ್ಯಾಶ್ಚ ಯಯುಸ್ತದಾ ॥೫೨॥

ಇದಂ ಕ್ರತುಪುರಾಖ್ಯಾನಂ ಯೇ ಶೃಣ್ವಂತಿ ಪಠಂತಿ ಚ ।
ನರೋಪಹತಪಾಪ್ಮಾನಸ್ತೇ ಪ್ರಾಪ್ಸ್ಯಂತಿ ಶುಭಾಂ ಗತಿಮ್ ॥೫೩॥

**ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ**
**ಕ್ರತುಪುರಮಾಹಾತ್ಮ್ಯೇ**
**ಬ್ರಹ್ಮಯಜ್ಞೋತ್ಸವೋ ನಾಮ ಚತುರ್ಥೋಽಧ್ಯಾಯಃ**

ಭೂಸುರರಾದ ವಿಪ್ರರನ್ನು ರಕ್ಷಿಸು, ದೇವತೆಗಳನ್ನು ಪೂಜಿಸು, ಗೋಗಳನ್ನು ರಕ್ಷಿಸು, ಪ್ರಜೆಗಳನ್ನು ದರ್ಮದಿಂದ ಪಾಲಿಸು ಹೀಗೆ ರಾಜ್ಯವನ್ನು ಆಳು, ಇದರಿಂದ ಪರಮ ಶ್ರೇಯಸ್ಸನ್ನು ಹೊಂದುವಿ. ।।೫೦।।

ಪ್ರತಿದಿನವೂ ತಪ್ಪದೇ ಶ್ರೀ ತ್ರಿಕೂಟೇಶ್ವರನ ಹಾಗೂ ವೀರನಾರಾಯಣನ ಪೂಜೋತ್ಸವಾದಿಗಳನ್ನು ವಿಧಿವತ್ತಾಗಿ ನಡೆಸು ।।೫೧।।

ಚಂದ್ರಸೇನರಾಜನಿಗೆ ಹಿತವನ್ನು ಬೋಧಿಸಿದ ಬ್ರಹ್ಮದೇವನು ತನ್ನ ಸುತರೊಡನೆ ಸತ್ಯಲೋಕಕ್ಕೆ ಹೋದೊಡನೆ ಇತ್ತ ದೇವತೆಗಳು ಸ್ವರ್ಗಕ್ಕೆ ತೆರಳಿದರು ।।೫೨।।

ಈ ಕ್ರತುಪುರಾಖ್ಯಾನವನ್ನು ಯಾರು ಆಲಿಸುವರೋ, ಪಠಿಸುವರೋ ಆ ಮನುಷ್ಯರು ಪುಣ್ಯವಂತರಾಗಿ ಮುಂದೆ ಉತ್ತಮಗತಿಯನ್ನು ಹೊಂದುವರು ।।೫೩।।

ಭವಿಷ್ಯೋತ್ತರಪುರಾಣದ ಉತ್ತರಖಂಡದಲ್ಲಿನ
ಕ್ರತುಪುರಮಾಹಾತ್ಮ್ಯೆಯಲ್ಲಿ
ಬ್ರಹ್ಮಯಜ್ಞೋತ್ಸವವೆಂಬ ನಾಲ್ಕನೇ ಅಧ್ಯಾಯವು ಮುಗಿಯಿತು

# ಅಥ ಪಂಚಮೋಽಧ್ಯಾಯಃ

ಋಷಯ ಊಚುಃ —

ಪವಿತ್ರಂ ಪರಮಾಖ್ಯಾನಂ ಸೂತ! ಸಂಶ್ರಾವಿತಂ ತ್ವಯಾ ।
ನಾನಾಶ್ಚರ್ಯವತೀ ಭೂಮಿರಸ್ಯಾಂ ಸಂಭಾವ್ಯತೇಽಖಿಲಮ್ ॥೧॥

ಸಂಭಾವ್ಯಂ ಗೋಷು ಸಂಪನ್ನಂ ಸಂಭಾವ್ಯಂ ಬ್ರಾಹ್ಮಣೇ ತಪಃ ।
ಸಂಭಾವ್ಯಂ ಭುವಿಮಾಹಾತ್ಮ್ಯಂ ತೀರ್ಥಕ್ಷೇತ್ರಸಮುದ್ಭವಮ್ ॥೨॥

ಪುನಃ ಕ್ರತುಪುರಸ್ಯಾಂಗಮಾಹಾತ್ಮ್ಯಂ ಶ್ರೋತುಮಾದೃತಾಃ ।
ಸ್ಮೋ ವಯಂ ವಿಸ್ಮಿತಾನಸ್ಮಾನ್ವಿಸ್ಮಾಪಯ ಸುಭಾಷಿತೈಃ ॥೩॥

ಸೂತ ಉವಾಚ —

ಬ್ರಾಹ್ಮಣಾಃ ಸ್ಥಾಪಿತಾಸ್ತತ್ರ ಚಂದ್ರಸೇನೋ ಮಹೀಪತಿಃ ।
ಸ್ಫೀತಂ ಜನಪದಂ ಚಕ್ರೇ ಧರ್ಮತಃ ಪಾಲಯನ್ ಪ್ರಜಾಃ ॥೪॥

ಪೂರಯಾಮಾಸ ಪರಿತಃ ಶಾಖಾಗ್ರಾಮಾನ್ ಸ ಬಾಹುಜಃ ।
ವೃತ್ತೀರಕಲ್ಪಯದ್ರಾಜಾ ದೇವಬ್ರಾಹ್ಮಣಗುಪ್ತಯೇ ॥೫॥

ತಸ್ಯ ಪುತ್ರಾದಿಭೀ ರಾಜ್ಞಶ್ಚಂದ್ರಸೇನಸ್ಯ ಧಾರ್ಮಿಕೈಃ ।
ಬಹುಕಾಲಂ ಕ್ರತುಪುರಮರಕ್ಷಿ ಕ್ಷೇಮಕಾರಿಭಿಃ ॥೬॥

ತತೋ ಭಲ್ಲಾಟಕೇನೇದಮಾಕ್ರಾಂತಂ ದಸ್ಯುನಾ ಪುರಮ್ ।
ಶಿಬಿನಾ ರಾಜಮುಖ್ಯೇನ ಸ ದಸ್ಯುರ್ವಿನಿಪಾತಿತಃ ॥೭॥

ಶಿಬೇಃ ಪುಣ್ಯಕೃತೋ ರಾಜ್ಞಶ್ಚರಿತ್ರಂ ವರ್ಣಿತಂ ಪುರಾ ।
ತಸ್ಯ ಪೌತ್ರಪ್ರಪೌತ್ರಾದ್ಯೈಃ ಪಾಲಿತಂ ಬಹುಪೂರುಷಮ್ ॥೮॥

ತೀರ್ಥಯಾತ್ರಾಪ್ರಸಂಗೇನ ಸ ರಾಜಾ ಜನಮೇಜಯಃ ।
ಪ್ರಾಪ ಕ್ರತುಪುರಕ್ಷೇತ್ರಂ ತತೋಽಪ್ಯಾಲೋಕ್ಯ ಭೂಮಿಪಃ ॥೯॥

ವೈಶಂಪಾಯನತಸ್ತತ್ರ ಪುನಃ ಶುಶ್ರಾವ ಭಾರತಮ್ ।
ವೀರನಾರಾಯಣಸ್ಯಾಗ್ರೇ ಸರ್ವಪಾಪಾಪನುತ್ತಯೇ ॥೧೦॥

# ಐದನೆಯ ಅಧ್ಯಾಯ

**ಋಷಿಗಳು ಹೇಳಿದರು –**

ಸೂತನೇ! ಪರಮಪಾವನವಾದ ಕ್ರತುಪುರ ಮಹಾತ್ಮ್ಯೆಯನ್ನು ನಮ್ಮೆಲ್ಲರಿಗೂ ನೀನು ತಿಳಿಸಿದಿ. ವಿವಿಧಾಶ್ಚರ್ಯಕರವಾದ ಈ ಭೂತಲದಲ್ಲಿ ಗೋಧನಗಳ ಸಮೃದ್ಧಿ, ಬ್ರಾಹ್ಮಣರ ತಪಸ್ಸು ಹಾಗೂ ಇಲ್ಲಿ ಉದ್ಭವಿಸಿರುವ ತೀರ್ಥಕ್ಷೇತ್ರಗಳ ಮಹಾತ್ಮ್ಯ, ಇದೆಲ್ಲವೂ ಅಸಾಧ್ಯವೇನಲ್ಲ ||೧–೨||

ಸೂತ! ಮತ್ತೆ ಈ ಕ್ರತುಪುರದ ಉಪಕಥೆಗಳನ್ನು ಕೇಳಲು ನಾವು ಬಹಳ ಇಷ್ಟಪಟ್ಟಿದ್ದೇವೆ. ಮೊದಲೇ ನಿನ್ನ ನುಡಿಗಳಿಂದ ಬೆರಗುಗೊಂಡ ನಮ್ಮನ್ನು ಇನ್ನಷ್ಟು ಬೆರಗುಗೊಳಿಸು ||೩||

**ಸೂತನು ಹೇಳಿದನು –**

ಬ್ರಹ್ಮದೇವನು ತಿಳಿಸಿದಂತೆ ಚಂದ್ರಸೇನ ರಾಜನು ಕ್ರತುಪುರಕ್ಕೆ ಬ್ರಾಹ್ಮಣರನ್ನು, ಪ್ರಜೆಗಳನ್ನು ಬರಮಾಡಿಕೊಂಡು ಕ್ರತುಪುರವನ್ನು ದೊಡ್ಡದೊಂದು ಜನಪದವನ್ನಾಗಿ ಮಾಡಿ ಧರ್ಮದಿಂದ ಪಾಲಿಸುತ್ತಿದ್ದನು ||೪||

ರಾಜನು ಕ್ರತುಪುರದ ಸುತ್ತಲೂ ಅನೇಕ ಉಪಗ್ರಾಮಗಳನ್ನು ನಿರ್ಮಿಸಿ, ಅವುಗಳಲ್ಲಿ ದೇವದ್ವಿಜರ ರಕ್ಷಣೆಗಾಗಿ ಅವರಿಗುಚಿತವಾದ ಉಂಬಳಿಗಳನ್ನು, ಕಲಸಗಳನ್ನು ಕಲ್ಪಿಸಿಕೊಟ್ಟನು ||೫||

ಆ ಚಂದ್ರಸೇನನ ಮಕ್ಕಳು – ಮೊಮ್ಮಕ್ಕಳು ಪರಮ ಧಾರ್ಮಿಕರೂ, ಸರ್ವದಾ ಜನೋಪಕಾರಿಗಳೂ ಆಗಿದ್ದರು. ಅವರು ಕ್ರತುಪುರವನ್ನು ಚಿರಕಾಲ ಸರಿಯಾಗಿ ಸಂರಕ್ಷಿಸಿದರು. ||೬||

ಅನಂತರ ಭಲ್ಲಾಟಕನೆಂಬ ಚೋರನು ಕ್ರತುಪುರವನ್ನಾಕ್ರಮಿಸಿದನು. ಆತನನ್ನು ರಾಜಪ್ರಮುಖನಾದ ಶಿಬಿಯು ಸಂಹರಿಸಿದನು. ||೭||

ಪುಣ್ಯಪುರುಷನಾದ ಶಿಬಿರಾಜನ ಚರಿತೆಯನ್ನು ಓಂದೆಯೇ ವರ್ಣಿಸಿರುವ ಬಹುಜನರು ವಾಸಿಸುತ್ತಿದ್ದ ಕ್ರತುಪುರವನ್ನು ಶಿಬಿಯ ಮೊಮ್ಮಕ್ಕಳು ಹಾಗೂ ಮರಿಮಕ್ಕಳು ಅನೇಕ ತಲೆಮಾರುಗಳ ವರೆಗೆ ಪಾಲಿಸಿದರು ||೮||

ಪಾಂಡವರ ವಂಶಜನಾದ ಜನಮೇಜಯನು ತೀರ್ಥಯಾತ್ರೆ ಮಾಡುತ್ತ ಕ್ರತುಪುರಕ್ಕಾಗಮಿಸಿ ಆ ಪುರವನ್ನು ಕಂಡು ಬಹಳ ಸಂತೋಷಪಟ್ಟನು ||೯||

ತನ್ನ ಸರ್ಪಹತ್ಯಾ ದೋಷವನ್ನು ಪರಿಹರಿಸಿಕೊಳ್ಳಲು ಕ್ರತುಪುರ ಕ್ಷೇತ್ರದಲ್ಲಿ ಶ್ರೀವೀರನಾರಾಯಣ ಸ್ವಾಮಿಯ ಎದುರು ವೈಶಂಪಾಯನರಿಂದ ಮಹಾಭಾರತವನ್ನು ಕೇಳಿದನು. ||೧೦||

ಕೋನೇರಿತೀರ್ಥನಿಕಟ ಈಜೇ ತತ್ರಾಭಿಮನ್ಯವಃ ।
ಸಹಿತೋ ಬ್ರಾಹ್ಮಣಶ್ರೇಷ್ಠೈಃ ಪಾರಾಶರ್ಯಕೃಪಾದಿಭಿಃ ॥೧೧॥

ಷಣ್ಮಾಸಾನವಸತ್ತತ್ರ ರಾಜಾ ಪಾರಿಕ್ಷಿತಃ ಸುಖಮ್ ।
ಶ್ರೀಮದ್ಭಾಗವತಂ ಚಾಪಿ ಶ್ರುತವಾನ್ ವ್ಯಾಸನಂದನಾತ್ ॥೧೨॥

ಶಿವವಿಷ್ಣೂತ್ಸವಾನ್ ಕೃತ್ವಾ ಸಂತರ್ಪ್ಯ ಬ್ರಾಹ್ಮಣಾನ್ ಬಹೂನ್ ।
ಚಕ್ರೇ ರಥೋತ್ಸವಂ ರಾಜಾ ದೇವಯೋರುಭಯೋರ್ಮುದಾ ॥೧೩॥

ತತ್ರ ಕೋನೇರಿತೀರ್ಥಸ್ಯ ಸಮುತ್ಪತ್ತಿಂ ಸ ಭೂಪತಿಃ ।
ಪಪ್ರಚ್ಛ ವ್ಯಾಸಮಾಸೀನಂ ತ್ರಿಕಾಲಜ್ಞಂ ಮಹಾಮುನಿಮ್ ॥೧೪॥

ವ್ಯಾಸ ಉವಾಚ –

ಆಸೀದತ್ರ ದ್ವಿಜಃ ಕಶ್ಚಿತ್ ಕೋನೇರಿರಿತಿ ವಿಶ್ರುತಃ ।
ಸ ವೇಂಕಟೇಶಭಕ್ತೋ ಭೂದ್ಯಾತ್ರಿಕಃ ಪ್ರತಿವತ್ಸರಮ್ ॥೧೫॥

ಚತ್ವಾರಿಂಶತ್ತಥಾಷ್ಟೌ ಚ ತೇನ ಯಾತ್ರಾಃ ಕೃತಾ ನೃಪ! ।
ಯದಾ ಜೀರ್ಣೋ ಭವದ್ವಿಪ್ರಶ್ಚಿಂತಾಮಾಪ ಭೃಶಂ ತದಾ ॥೧೬॥

ವೃದ್ಧೋಽಹಂ ನೈವ ಶಕ್ನೋಮಿ ಗಂತುಮಗ್ರೇ ಪದಾತ್ಪದಂ ।
ಶ್ರೀಮದ್ವೇಂಕಟನಾಥಸ್ಯ ದರ್ಶನಂ ಮೇ ಕಥಂ ಭವೇತ್ ॥೧೭॥

ಪಾಪೀಯಸೀಂ ಧಿಗ್ ಜರಸಂ ಪುಮಾನ್ ಜೀವನ್ಮೃತೋ ಯಯಾ ।
ಪರಾಧೀನಾಯ ವೃದ್ಧಾಯ ಮರಣಂ ಮೇಽದ್ಯ ರೋಚತೇ ॥೧೮॥

ಇತಿ ಚಿಂತಯತಸ್ತಸ್ಯ ಸ್ವಪ್ನೇ ಶೇಷಾಚಲೇಶ್ವರಃ ।
ನಿಜರೂಪೇಣ ವಿಬಭೌ ತಮಾಹ ಬ್ರಾಹ್ಮಣಂ ಹರಿಃ ॥೧೯॥

ಭಕ್ತ! ಮಾ ಖಿದ್ಯ ಕೋನೇರೇ! ವಸಾಮಿ ಹೃದಯೇ ತವ ।
ಆಂತರಾದ್ದರ್ಶನಾದ್ವಿಪ್ರ! ದವೀಯೋ ಬಾಹ್ಯದರ್ಶನಮ್ ॥೨೦॥

ಗೃಹಾಣೇದಂ ಧನಂ ವಿಪ್ರ! ತೀರ್ಥಂ ಕೋನೇರಿಸಂಜ್ಞಿತಮ್ ।
ಕುರ್ವನೇನ ಧನೇನಾತ್ರ ಪುಣ್ಯಂ ಲೋಕಹಿತಾವಹಮ್ ॥೨೧॥

ಸ್ನಾತ್ವಾ ನಿರಂತರಂ ತತ್ರ ವೀರನಾರಾಯಣಂ ಪ್ರಭುಮ್ ।
ಪಶ್ಯ ಯಾತ್ರಾಫಲಂ ನಿತ್ಯಂ ಪ್ರಾಪ್ಸ್ಯಸ್ಯತ್ರ ನ ಸಂಶಯಃ ॥೨೨॥

ಅಬಿಮನ್ಯುವಿನ ಮೊಮ್ಮಗನಾದ ಆ ಜನಮೇಜಯನು ವ್ಯಾಸ ಮಹರ್ಷಿಗಳು ಹಾಗೂ ಕೃಪಾಚಾರ್ಯರೊಡನೆ 'ಕೋನೇರಿ' ಎಂಬ ತೀರ್ಥದೆಡೆಗೆ ತೆರಳಿ ಆರು ಮಾಸಗಳನ್ನು ಅಲ್ಲಿಯೇ ಸುಖವಾಗಿ ಕಳೆದು ವ್ಯಾಸತನಯರಾದ ಶ್ರೀಶುಕಮಹರ್ಷಿಗಳಿಂದ ಪರಮಪಾವನವಾದ ಶ್ರೀಮದ್ಭಾಗವತವನ್ನು ಕೇಳಿದನು ।।೧೧–೧೨।।

ಜನಮೇಜಯನು ಸಂತೋಷದಿಂದ ಶಿವನಾರಾಯಣರ ಮಹೋತ್ಸವ ವನ್ನೂ ರಥೋತ್ಸವವನ್ನೂ ವೈಭವದಿಂದ ನಡೆಸಿ ವಿಪ್ರ ಸಂತರ್ಪಣೆಯನ್ನು ನೆರವೇರಿಸಿದನು. ।।೧೩।।

ನಂತರ ಜನಮೇಜಯನು ಕೋನೇರಿ ತೀರ್ಥವು ಹೇಗೆ ಉತ್ಪನ್ನವಾಯಿತೆಂದು ತ್ರಿಕಾಲಜ್ಞರಾದ ಭಗವಾನ್ ವ್ಯಾಸಮಹರ್ಷಿಗಳನ್ನು ಪ್ರಶ್ನಿಸಿದನು ।।೧೪।।

ವ್ಯಾಸರು ಹೇಳಿದರು –

ಬಹಳ ಹಿಂದೆ 'ಕೋನೇರಿ' ಎಂಬ ಪ್ರಸಿದ್ಧ ಬ್ರಾಹ್ಮಣನು ಇಲ್ಲಿ ನೆಲಸಿದ್ದನು ಶ್ರೀವೆಂಕಟೇಶಭಕ್ತನಾದ ಆತ ಪ್ರತಿ ವತ್ಸರವೂ ಯಾತ್ರೆಗೆ ಹೋಗುತ್ತಿದ್ದನು ।।೧೫।।

ಜನಮೇಜಯ! ಆತ ನಲವತ್ತೆಂಟು ಸಲ ಯಾತ್ರೆ ಮಾಡಿದನು ಕ್ರಮೇಣ ವೃದ್ಧನಾದಾಗ ಆತ ಬಹಳ ಚಿಂತೆಗೊಳಗಾದನು ।।೧೬।।

''ವೃದ್ಧನಾದ ನನಗೆ ಒಂದು ಹಜ್ಜೆ ಸಹ ಮುಂದಿಡಲು ಆಗುತ್ತಿಲ್ಲ. ಆದ್ದರಿಂದ ನನಗೆ ಹೇಗೆ ತಾನೆ ವೆಂಕಟೇಶ್ವರನ ದರ್ಶನವಾದೀತು? ।।೧೭।।

ಮನುಷ್ಯನು ಜೀವಂತವಿದ್ದೂ ಸತ್ತಂತೆಯೇ ಮಾಡುವ ಹೇಯವಾದ ಈ ವಾರ್ಧಕ್ಯಕ್ಕೆ ಧಿಕ್ಕಾರ! ಪರಾಧೀನನಾದ ವೃದ್ಧನಾದ ನನಗೆ ಈಗ ಮರಣವೇ ಸರಿಯೆಂದು ತೋರುತ್ತಿದೆ!'' ಈ ರೀತಿಯಾಗಿ ಚಿಂತಿಸುತ್ತಿದ್ದ ಆ ಕೋನೇರಿ ವಿಪ್ರನ ಸ್ವಪ್ನದಲ್ಲಿ ಶ್ರೀಶೇಷಾಚಲೇಶ್ವರನು (ವೆಂಕಟೇಶನು) ತನ್ನ ನಿಜರೂಪದಿಂದ ಬಂದು ಆತನಿಗೆ ಹೀಗೆಂದನು. ।। ೧೮–೧೯ ।।

ಭಕ್ತ ಕೋನೇರಿ! ಖಿನ್ನನಾಗದಿರು. ನಾನು ಎಂದೆಂದಿಗೂ ನಿನ್ನ ಹೃದಯದಲ್ಲಿ ವಾಸಿಸುವೆ. ಆಂತರಂಗಿಕ ದರ್ಶನಕ್ಕಿಂತಲೂ ಬಾಹ್ಯದರ್ಶನವು ದೂರವೇ ಇರುವದು. (ಹೀಗಿದ್ದರೂ ಬಾಹ್ಯದರ್ಶನದಲ್ಲಿ ನಿನಗೆ ಆಸ್ಥೆ ಇದ್ದರೆ) ವಿಪ್ರಕೋನೇರಿ! ಈ ಧನವನ್ನು ತೆಗೆದುಕೋ. ಇದರಿಂದ ಇಲ್ಲಿ ಲೋಕಹಿತಕರವಾದ, 'ಕೋನೇರಿ'ಯೆಂಬ ಹೆಸರಿನ ಪಾವನ ತೀರ್ಥವನ್ನು ನಿರ್ಮಿಸು. ।।೨೦–೨೧।।

ಆ ತೀರ್ಥದಲ್ಲಿ ಪ್ರತಿದಿನ ಸ್ನಾನಮಾಡಿ ಪ್ರಭುವಾದ ಶ್ರೀವೀರನಾರಾಯಣನ ದರ್ಶನ ಪಡೆ. ಇದರಿಂದ ನಿತ್ಯವೂ ಯಾತ್ರಾಫಲವನ್ನು ಹೊಂದುವಿ. ಇದರಲ್ಲಿ ಸಂಶಯವೇ ಇಲ್ಲ. ।।೨೨।।

ಇತ್ಯುಕ್ತ್ವಾ ವಸು ದತ್ತ್ವಾ ಚ ತತ್ರೈವಾಂತರ್ದಧೇ ಹರಿಃ ।
ಉತ್ತಸ್ಥೌ ಚ ತದಾ ವಿಪ್ರೋ ದ್ರವ್ಯಪೂರ್ಣಕರದ್ವಯಃ ॥೨೩॥

ಪುತ್ರಾನಾಹೂಯ ವಿದುಷಃ ಪಿತೃಭಕ್ತಿಪರಾಯಣಾನ್ ।
ಕೋನೇರಿಶರ್ಮಾ ಪ್ರೋವಾಚ ಸ್ವಾಪ್ನಿಕಂ ಹರ್ಯನುಗ್ರಹಮ್ ॥೨೪॥

ದ್ರವ್ಯಂ ಪುತ್ರಕರೇ ದತ್ತ್ವಾ ಕಾರಯಾಮಾಸ ದೀರ್ಘಿಕಾಮ್ ।
ನಿಕಟೇ ಗುಪ್ತಗಾಮಿನ್ಯಾಸ್ತತ್ತೀರ್ಥಂ ಸಲಿಲಾಪ್ಲುತಮ್ ॥೨೫॥

ತತ್ರ ಸ್ನಾತ್ವಾಽನುಘಸ್ರಂ ಸ ವೀರನಾರಾಯಣಂ ದ್ವಿಜಃ ।
ಪೂಜಯಾಮಾಸ ವಿಧಿವದ್ವೇಂಕಟೇಶಸ್ವರೂಪಿಣಮ್ ॥೨೬॥

ಜಗಾಮ ಶ್ವಿತ್ರಿಣಾಂ ಶ್ವಿತ್ರಂ ತತ್ತೀರ್ಥಸಲಿಲಾಪ್ಲುತೇಃ ।
ಉಲ್ಲಾಘಾ ರೋಗಿಣೋಽಭೂವನ್ ಪ್ರಾಶನಾತ್ತೀರ್ಥವಾರಿಣಃ ॥೨೭॥

ಏವಂ ಸಂಪೂಜ್ಯ ದೇವೇಶಂ ವೀರನಾರಾಯಣಂ ದ್ವಿಜಃ ।
ಕಾಲೇ ಪಂಚತ್ವಮಾಪನ್ನೋ ಜಗಾಮ ಹರಿಮಂದಿರಮ್ ॥೨೮॥

ಇತಿ ಕೋನೇರಿತೀರ್ಥಸ್ಯ ಮಾಹಾತ್ಮ್ಯಂ ಕುರುವಂಶಜಃ ।
ಶ್ರುತ್ವಾ ಸವಿಸ್ಮಯೋ ರಾಜಾ ಬಾದರಾಯಣವರ್ಣಿತಮ್ ॥೨೯॥

ತತೋ ಜಗಾಮ ನೃಪತಿರ್ವೇದವ್ಯಾಸಾದಿಭಿರ್ವೃತಃ ।
ಸ್ವರಾಜಧಾನೀಂ ಸಂತುಷ್ಟಃ ಸಸೈನ್ಯಃ ಸಾವರೋಧನಃ ॥೩೦॥

ಇತಿ ಕ್ರತುಪುರಾಖ್ಯಾನಮಹಂ ಸಮ್ಯಗಚೀಕಥಮ್ ।
ನೈಮಿಷೀಯೈರ್ಮುನಿವರೈರ್ಭವದ್ಭಿರಭಿನೋದಿತಃ ॥೩೧॥

ಯೇ ಶೃಣ್ವಂತೀದಮಾಖ್ಯಾನಂ ಪವಿತ್ರಂ ಪಾಪನಾಶನಮ್ ।
ನಿರ್ಧೂತಪಾತಕಾಸ್ತೇ ತೇ ಯಾಸ್ಯಂತಿ ಪರಮಂ ಪದಮ್ ॥೩೨॥

ಭಕ್ತ್ಯಾಽಸ್ಯ ಶ್ರವಣಾಲ್ಲೋಕೇ ನಿರ್ಧನೋ ಧನಮಾಪ್ನುಯಾತ್ ।
ಪುತ್ರಾರ್ಥೀ ಪ್ರಾಪ್ನುಯಾತ್ಪುತ್ರಂ ವಿದ್ಯಾರ್ಥೀ ತಾಮವಾಪ್ನುಯಾತ್ ॥೩೩॥

ಮಂತ್ರೇ ತೀರ್ಥೇ ದ್ವಿಜೇ ದೇವೇ ದೈವಜ್ಞೇ ಭೇಷಜೇ ಗುರೌ ।
ಯಾದೃಶೀ ಭಾವನಾ ಯಸ್ಯ ಸಿದ್ಧಿರ್ಭವತಿ ತಾದೃಶೀ ॥೩೪॥

ವೀರನಾರಾಯಣಂ ಯೋ ವೈ ಭಜನ್ ದ್ರುಹ್ಯತಿ ಶಂಕರೇ ।
ಹರಿಂ ದ್ವಿಷನ್ ಭಜೇಚ್ಛಂಭುಂ ತೌ ಜ್ಞೇಯೌ ರೌರವಾಶ್ರಯೌ ॥೩೫॥

ಈ ರೀತಿ ತಿಳಿಸಿದ ನಾರಾಯಣನು ಅಲ್ಲಿಯೇ ಅದೃಶ್ಯನಾದನು ಒಡನೆಯೇ ಆ ವಿಪ್ರನಿಗೆ ಎಚ್ಚರಿಕೆಯಾಗಿ ಎದ್ದನು ಆತನ ಎರಡು ಕೈಗಳೂ ಧನಗಳಿಂದ ತುಂಬಿದ್ದವು ||೨೩||

ನಂತರ ಕೋನೇರಿಯು ವಿದ್ವಾಂಸರಾದ ತನ್ನ ಮಕ್ಕಳನ್ನು ಕರೆದು ಸ್ವಪ್ನದಲ್ಲಿ ಶ್ರೀಹರಿಯು ಮಾಡಿದ ವರಮಾನುಗ್ರಹವನ್ನು ತಿಳಿಸಿದನು. || ೨೪ ||

ಆ ಧನವನ್ನು ಮಕ್ಕಳ ಕೈಗಿತ್ತು ವೀರನಾರಾಯಣನ ಸಮೀಪದಲ್ಲಿ ಮೆಟ್ಟಿಲುಗಳುಳ್ಳ ಬಾವಿಯೊಂದನ್ನು ಮಾಡಿಸಿದನು ಆ ಪವಿತ್ರ ಭಾವಿಯು ಗುಪ್ತಗಾಮಿನೀ ನದಿಯ ನೀರಿನಿಂದ ತುಂಬಿತು ||೨೫||

ವಿಪ್ರ ಕೋನೇರಿಯು ಅದರಲ್ಲಿ ಅನುದಿನವೂ ಮಿಂದು ಶ್ರೀವೆಂಕಟೇಶ ಸ್ವರೂಪೀ ವೀರನಾರಾಯಣನನ್ನು ವಿಧಿವತ್ತಾಗಿ ಪೂಜಿಸಿದನು ||೨೬||

ಆ ತೀರ್ಥಸ್ನಾನದಿಂದ ಕುಷ್ಠರೋಗಿಗಳ ಕುಷ್ಠರೋಗವು ಮಾಯವಾಯಿತು ಆ ತೀರ್ಥಜಲದ ಪಾನದಿಂದ ಇತರ ರೋಗಿಗಳು ಆರೋಗ್ಯವಂತರಾದರು ||೨೭||

ಈ ರೀತಿ ಕೋನೇರಿದ್ವಿಜನು ದೇವಪತಿ ವೀರನಾರಾಯಣನನ್ನು ಪೂಜಿಸಿ ವೃದ್ಧಾಪ್ಯದಿಂದ ಮರಣಹೊಂದಿ ವೈಕುಂಠಲೋಕವನ್ನು ಸೇರಿದನು. ||೨೮||

ಹೀಗೆ ಶ್ರೀವ್ಯಾಸಮಹರ್ಷಿಗಳು ವರ್ಣಿಸಿದ ಕೋನೇರಿ ತೀರ್ಥ ಮಾಹಾತ್ಮ್ಯೆಯನ್ನು ಕೇಳಿ ಕುರುರಾಜನಾದ ಜನಮೇಜಯನು ಬಹಳ ಆಶ್ಚರ್ಯಗೊಂಡನು ||೨೯||

ನಂತರ ಸಂತುಷ್ಟನಾದ ಜನಮೇಜಯನು ಶ್ರೀವೇದವ್ಯಾಸ ಮೊದಲಾದವರೊಡನೆ ಹಾಗೂ ಸೈನ್ಯ ಮತ್ತು ಅಂತಃಪುರ ಸ್ತ್ರೀಯರೊಡನೆ ತನ್ನ ರಾಜಧಾನಿಗೆ ತೆರಳಿದನು ||೩೦||

ನೈಮಿಷಾರಣ್ಯದ ಮುನಿಗಳೇ! ನೀವು ಕೇಳಿದ್ದರಿಂದ ಮಹತ್ತರವಾದ ಕ್ರತುಪುರ ಚರಿತ್ರೆಯನ್ನು ಸರಿಯಾಗಿ ತಿಳಿಸಿದೆ ||೩೧||

ಪವಿತ್ರವೂ ಪಾಪನಾಶಕವೂ ಆದ ಈ ಮಹಾತ್ಮೆಯನ್ನು ಕೇಳುವವರು ಪುಣ್ಯವಂತರಾಗಿ ಪರಮಪದವನ್ನು ಹೊಂದುವರು. ||೩೨||

ಲೋಕದಲ್ಲಿ ಈ ಮಹಾತ್ಮೆಯನ್ನು ಭಕ್ತಿಪೂರ್ವಕವಾಗಿ ಕೇಳುವದರಿಂದ ಧನಾಪೇಕ್ಷಿಗಳು ಧನವನ್ನೂ, ಪುತ್ರಾಪೇಕ್ಷಿಗಳು ಪುತ್ರನನ್ನೂ, ವಿದ್ಯಾರ್ಥಿಗಳು ವಿದ್ಯೆಯನ್ನೂ ಪಡೆಯುವರು ||೩೩||

ಮಂತ್ರ, ತೀರ್ಥಗಳಲ್ಲಿ, ದೇವಬ್ರಾಹ್ಮಣರಲ್ಲಿ, ಜ್ಯೋತಿಷಿ, ವೈದ್ಯ, ಗುರುಗಳ ವಿಷಯದಲ್ಲಿ ಯಾರಿಗೆ ಯಾವ ರೀತಿಯ ಭಾವನೆ ಇರುವದೋ ಅವರಿಗೆ ಆ ರೀತಿಯ ಫಲ ದೊರಕುವದು. ||೩೪||

ವೀರನಾರಾಯಣನನ್ನು ಭಜಿಸಿ ತ್ರಿಕೂಟೇಶ್ವರನನ್ನು ದ್ವೇಷಿಸುವವರೂ, ತ್ರಿಕೂಟೇಶ್ವರನನ್ನು ಭಜಿಸಿ ವೀರನಾರಾಯಣನನ್ನು ದ್ವೇಷಿಸುವವರೂ, ರೌರವ ನರಕವನ್ನು ಸೇರುವರು. ||೩೫||

ಶಿವಂ ವಿನಾ ಹರಿಕ್ಷೇತ್ರಂ ಶಿವಕ್ಷೇತ್ರಂ ಹರಿಂ ವಿನಾ ।
ನಾಸ್ತಿ ಕ್ವಾಪಿ ಮುನಿಶ್ರೇಷ್ಠಾಸ್ತಸ್ಮಾತ್ತಾವೇಕರೂಪಿಣೌ ॥೩೬॥

ಪಾಷಂಡಿನೋ ಭವಿಷ್ಯಂತಿ ಪ್ರಾಯಃ ಕಲಿಯುಗೇ ಜನಾಃ ।
ತಯೋರನ್ಯತರದ್ರೋಹಾದವಾಪ್ಸ್ಯಂತ್ಯಧಮಾಂ ಗತಿಮ್ ॥೩೭॥

ತಸ್ಮಾದ್ಧರಿಹರೌ ದೇವಾವೇಕಭಾವೇನ ಯೋ ಯಜೇತ್ ।
ಶ್ರದ್ಧಯಾ ತೀರ್ಥಮಾಹಾತ್ಮ್ಯಂ ಸ ತೀರ್ಥಫಲಮಾಪ್ನುಯಾತ್ ॥೩೮॥

ಅಥ ತೈರರ್ಚಿತಃ ಸೂತಃ ಶೌನಕಾದ್ಯೈಸ್ತಪೋಧನೈಃ ।
ತಾನನುಜ್ಞಾಪ್ಯ ಪವ್ರಾಜ ಸ್ವಸ್ಥಾನಂ ಲೋಮಹರ್ಷಣಃ ॥೩೯॥

ಶ್ರುತ್ವಾ ಕ್ರತುಪುರಾಖ್ಯಾನಂ ಮುನಯಃ ಶೌನಕಾದಯಃ ।
ವಿಸ್ಮಯಂ ಪರಮಂ ಪ್ರಾಪ್ಯ ಯಯುಃ ಸಂಧ್ಯಾಮುಪಾಸಿತುಮ್॥೪೦॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ
ಕ್ರತುಪುರಮಾಹಾತ್ಮ್ಯಪ್ರಸ್ತಾವೇ
ಕೋಟೇರಿತೀರ್ಥವರ್ಣನಂ ನಾಮ ಪಂಚಮೋಧ್ಯಾಯಃ ।

ಮುನಿವರ್ಯರೇ! ಶಿವನನ್ನು ಬಿಟ್ಟು ವಿಷ್ಣುಕ್ಷೇತ್ರವಿಲ್ಲ ವಿಷ್ಣುವನ್ನು ಹೊರತು ಪಡಿಸಿ ಶಿವಕ್ಷೇತ್ರವಿಲ್ಲ ಆದ್ದರಿಂದಲೇ ಅವರಿಬ್ಬರೂ ಏಕರೂಪದಿಂದಿರುವರು ಕಲಿಯುಗದಲ್ಲಿ ಜನರು ಪ್ರಾಯಃ ಪಾಖಂಡಿಗಳಾಗುವರು ಅವರು ಶಿವನಾರಾಯಣರಲ್ಲಿ ಬೇದಕಲ್ಪಿಸಿ ದ್ವೇಷಿಸಿ ಅದಮಗತಿಯನ್ನು ಹೊಂದುವರು ॥ ೩೬–೩೭ ॥

ಆದ್ದರಿಂದ ಶ್ರದ್ಧಾಪೂರ್ವಕ ಶಿವನಾರಾಯಣರು ಏಕರೂಪಿಗಳೆಂದು ಭಜಿಸುವವರು ಹಾಗೂ ತೀರ್ಥಮಾಹಾತ್ಮ್ಯಯನ್ನು ಕೇಳುವವರು ತೀರ್ಥಫಲವನ್ನು ಪಡೆಯುವರು ॥೩೮॥

ಈ ರೀತಿ ಕಥೆಯನ್ನಾಲಿಸಿದ ಶೌನಕಾದಿ ಮಹರ್ಷಿಗಳು ಲೋಮ ಹರ್ಷಣರಾದ ಸೂತರನ್ನು ಸತ್ಕರಿಸಿದರು ಸೂತರು ಮುನಿಗಳ ಅನುಮತಿ ಪಡೆದು ತಮ್ಮ ಸ್ಥಾನಕ್ಕೆ ಹೋದರು ॥೩೯॥

ಈ ಕ್ರತುಪುರ ಚರಿತೆಯನ್ನು ಕೇಳಿ ವಿಸ್ಮಿತರಾದ ಶೌನಕಾದಿಮುನಿಗಳೂ ಸಹ ಸಂಧ್ಯಾಸಮಯವಾದ್ದರಿಂದ ಆಹ್ನಿಕವನ್ನಾಚರಿಸಲು ತೆರಳಿದರು ॥೪೦॥

ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ
ಕ್ರತುಪುರ ಮಾಹಾತ್ಮ್ಯೆಯಲ್ಲಿ
ಕೋಣೇರಿತೀರ್ಥವರ್ಣನವೆಂಬ ಐದನೆಯ ಅಧ್ಯಾಯವು ಮುಗಿಯಿತು.

# ಅಥ ಷಷ್ಠೋಽಧ್ಯಾಯಃ

ಋಷಯ ಊಚುಃ —

ಸೂತ! ಜೀವ ಚಿರಂ ಸಾಧೋ! ವಯಂ ಪ್ರೀಣೀಮಹೇ ತ್ವಯಿ ।
ಯನ್ನಃ ಶ್ರಾವಯಸೇ ನಿತ್ಯಂ ದಿವ್ಯಂ ಹರಿಕಥಾಮೃತಮ್ ॥೧॥

ನಾರಾಯಣಸ್ಯ ಮಾಹಾತ್ಮ್ಯಂ ಭೂಯಃ ಕಥಯ ಸೌಮ್ಯ! ನಃ ।
ಕೃತಕ್ಷಣಾನಾಂ ಶ್ರವಣೇ ಹರಿಪ್ರವಣಚೇತಸಾಮ್ ॥೨॥

ಸೂತ ಉವಾಚ —

ಸಾಧು ಪೃಷ್ಟಂ ಮಹಾಭಾಗಾಃ! ಶೃಣುಧ್ವಂ ಕಥಯಾಮಿ ವಃ ।
ಮಾಹಾತ್ಮ್ಯಂ ದೇವದೇವಸ್ಯ ವಿಷ್ಣೋರದ್ಭುತಕರ್ಮಣಃ ॥೩॥

ಅವತಾರಾ ಹರೇಃ ಸಂತಿ ಬಹವೋ ಮಂಗಲಾಯನಾಃ ।
ತೇಷಾಮಾದ್ಯಃ ಪರಃ ಪ್ರೋಕ್ತಃ ಸೂಕ್ತೇ ಪುರುಷಸಂಜ್ಞಿಕೇ ॥೪॥

ಸ ಏವ ಮಹದಾದೀನಾಂ ಸ್ರಷ್ಟಾ ಮಾಯೀ ಸ್ವಮಾಯಯಾ ।
ಅನ್ಯೇಷಾಮವತಾರಾಣಾಂ ನಿದಾನಂ ಪರಿಕೀರ್ತಿತಮ್ ॥೫॥

ಸತ್ತ್ವಂ ರಜಸ್ತಮ ಇತಿ ಯ ಉಕ್ತಾಃ ಪ್ರಕೃತೇರ್ಗುಣಾಃ ।
ತದುಪಾಧಿವಶಾದ್ಭೇದಾ ಜಾಯಂತೇ ಪರಮಾತ್ಮನಃ ॥೬॥

ಸ ಏವ ಜಾಯತೇ ಬ್ರಹ್ಮಾ ರಜೋಗುಣಪುರಸ್ಕೃತಃ ।
ತೇನಾಂಡಂ ನಿರ್ಮಿತಂ ತಸ್ಮಾತ್ ಬ್ರಹ್ಮಾಂಡಮಿತಿ ಗೀಯತೇ ॥೭॥

ತಮೋಮೋಹಮಹಾಮೋಹಾಸ್ತಾಮಿಸ್ರಾಂಧತಮಿಸ್ರಕೌ ।
ಅವಿದ್ಯಾ ಪಂಚ ಪರ್ವೈಷಾ ಪ್ರಾದುರ್ಭೂತಾ ಮಹಾತ್ಮನಃ ॥೮॥

ತತ್ಕಾರ್ಯಭೂತಃ ಸರ್ಗೋಽಯಂ ತಸ್ಮಾದಾವಿದ್ಯಕಃ ಸ್ಮೃತಃ ।
ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂರಿತಿ ಚ ಶ್ರುತಿಃ ॥೯॥

ತಸ್ಮಾತ್ಸರ್ವೇಽಪಿ ಯೇ ಜೀವಾಶ್ಚಿದಾಭಾಸಾ ಅಹಂಧಿಯಃ ।
ಭಗವನ್ಮಾಯಯಾ ಮೂಢಾಃ ಸಂಸರಂತಿ ಪುನಃ ಪುನಃ ॥೧೦॥

ಅವಾಪ್ತಾಖಿಲಕಾಮೋಽಪಿ ಜೀವಭೋಗಾರ್ಥಮೇವ ಹಿ ।
ಸೃಷ್ಟಿಸ್ಥಿತ್ಯತ್ಯಯಾನ್ ದೇವಃ ಕಾಲೇಕಾಲೇ ಕರೋತ್ಯಜಃ ॥೧೧॥

# ಆರನೆಯ ಅಧ್ಯಾಯ

**ಋಷಿಗಳು ಹೇಳಿದರು –**

ಮಹಾನುಭಾವ ಸೂತನೇ! ನೀನು ಬಹುಕಾಲ ಬಾಳು ನೀನು ಅನುದಿನವೂ ದಿವ್ಯವಾದ ಶ್ರೀಹರಿಕಥಾಮೃತವನ್ನು ನಮಗೆ ಉಣಬಡಿಸುತ್ತಿರುವಿ ಆದ್ದರಿಂದ ನಿನ್ನನ್ನು ನಾವೆಲ್ಲ ಬಹಳ ಪ್ರೀತಿಸುತ್ತೇವೆ ||೧||

ಶ್ರೀಹರಿಯ ಕಥೆಯನ್ನು ಕೇಳಲು ಕಾತುರರಾಗಿರುವ, ಶ್ರೀಹರಿಯಲ್ಲಿಯೇ ನಟ್ಟ ಮನಸ್ಸುಳ್ಳ ನಮಗೆ ಪುನಃ ವೀರನಾರಾಯಣನ ಮಾಹಾತ್ಮ್ಯೆಯನ್ನು ತಿಳಿಸು. ||೨||

**ಸೂತನು ಹೇಳಿದನು –**

ಮುನಿವರ್ಯರೇ! ಸರಿಯಾಗಿ ಕೇಳಿದಿರಿ ಅದ್ಭುತಕಾರ್ಯವೆಸಗುವ ದೇವಪತಿ ಶ್ರೀನಾರಾಯಣನ ಮಹಿಮೆಯನ್ನು ಅರುಹುವೆ, ಕೇಳಿರಿ ||೩||

ಶ್ರೀಹರಿಯ ಮಂಗಲಮಯವಾದ ಅವತಾರಗಳು ಬಹಳ ಇವೆ ಅವುಗಳಲ್ಲಿ ಮೊದಲನೆಯದಾದ ಶ್ರೇಷ್ಠ ವಿರಾಟ್‌ಸ್ವರೂಪವನ್ನು ಪುರುಷಸೂಕ್ತದಲ್ಲಿ ವಿವರಿಸಲಾಗಿದೆ. ||೪||

ಮಾಯಾಪತಿಯಾದ ಆತನೇ ತನ್ನ ಮಾಯಾ ಪ್ರಭಾವದಿಂದ ಸೃಷ್ಟಿಗೆ ಕಾರಣವಾದ ಮಹತ್ತತ್ತ್ವಾದಿಗಳನ್ನು ಹುಟ್ಟಿಸಿದನು. ಅಲ್ಲದೇ ಇತರ ಸಕಲ ಅವತಾರಗಳಿಗೆ ಈ ವಿರಾಟ್‌ರೂಪವೇ ಮೂಲಕಾರಣವಾಗಿದೆ ||೫||

ಪ್ರಕೃತಿಗೆ 'ಸತ್ತ್ವ–ರಜ-ತಮ' ಎಂಬ ಮೂರು ಗುಣಗಳಿರುವವು ಮೂಲತಃ ಪರಮೇಶ್ವರನು ಒಬ್ಬನೇ ಇದ್ದರೂ ಈ ಭಿನ್ನ ಭಿನ್ನ ಗುಣಗಳ ಸಂಪರ್ಕದಿಂದ ಅವನಲ್ಲಿ ಅನೇಕ ಭೇದಗಳು ತೋರುವವು. ||೬||

ಆತನೇ ರಜೋಗುಣವನ್ನಾಶ್ರಯಿಸಿ ಬ್ರಹ್ಮನೆನಿಸಿ ಈ ಜಗತ್ತೆಂಬ ಅಂಡವನ್ನು ಸೃಷ್ಟಿಸುವನು. ಆದ್ದರಿಂದ ಅದನ್ನು ಬ್ರಹ್ಮಾಂಡವೆಂದು ಕರೆಯುವರು. ||೭||

ತಮಸ್, ಮೋಹ, ಮಹಾಮೋಹ, ತಮಿಸ್ರ, ಅಂಧತಮಿಸ್ರ, ಎಂಬ ಈ ಐದು ಭಾಗಗಳುಳ್ಳ ಅವಿದ್ಯೆಯು ಪರಮಾತ್ಮನಿಂದಲೇ ಪ್ರಕಟವಾಯಿತು ||೮||

ಆ ಅವಿದ್ಯೆಯಿಂದಲೇ ಈ ಜಗತ್ತು ಸೃಷ್ಟಿಯಾಗಿರುವುದರಿಂದ ಇದನ್ನು 'ಆವಿದ್ಯಕ'ವೆಂದು ಹೇಳುವರು. 'ಪರಾಂಚಿಖಾನಿ' (ಕಠ ೨=೧=೧) ಎಂಬ ವಾಕ್ಯವು ಇದಕ್ಕೆ ಪ್ರಮಾಣವಾಗಿದೆ. ||೯||

ಆದ್ದರಿಂದ ಈ ಎಲ್ಲ ಜೀವರೂ ಮೂಲತಃ ಚಿತ್‌ಸ್ವರೂಪರೇ ಆಗಿದ್ದರೂ ಅಹಂಕಾರಾದಿಗಳ ಸಂಬಂಧದಿಂದ ಚಿದಾಭಾಸ ಎನಿಸಿಕೊಳ್ಳುವರು. ಕಾರಣ ಇವರು ಭಗವಂತನ ಮಾಯಾಪ್ರಭಾವದಿಂದ ವಿವೇಕಶೂನ್ಯರಾಗಿ ಮತ್ತೆ ಮತ್ತೆ ಸಂಸಾರದಲ್ಲಿಯೇ ಬೀಳುವರು. ||೧೦||

ತನಗೆ ಯಾವ ಕಾಮನೆಗಳಿಲ್ಲದಿದ್ದರೂ ಜನ್ಮರಹಿತನಾದ ಭಗವಂತನು ಈ ಜೀವರ ಭೋಗಕ್ಕಾಗಿ ಕಾಲ ಕಾಲಕ್ಕೆ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವನು ||೧೧||

ಸತ್ತ್ವೋಪಾಧಿಃ ಪರೇಶೋ ಹಿ ನಿಘ್ನನ್ ವಿಶ್ವದ್ರುಹೋಽಸುರಾನ್ ।
ಸಜ್ಜನಾನ್ ಪಾಲಯನ್ ದೇವೋ ವಿಷ್ಣುಸಂಜ್ಞಾಂ ಬಿಭರ್ತ್ಯಜಃ ॥೧೨॥

ತಮೋಗುಣೋಪಾಧಿಕಃ ಸನ್ ಸಂಪ್ರಾಪ್ತೇ ಪ್ರತಿಸಂಚರೇ ।
ಅತ್ತಿ ಸರ್ವಂ ಮಹಾಗ್ರಾಸೋ ಹರ ಇತ್ಯಭಿವಿಶ್ರುತಃ ॥೧೩॥

ಸಂಜ್ಞಾಭೇದಃ ಕರ್ಮಭೇದೋ ಲೀಲಾಭೇದಶ್ಚ ತಾಪಸಾಃ' ।
ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥೧೪॥

ತಾವತ್ಸರ್ವಮಿದಂ ಸತ್ಯಂ ಗುಣಭೇದಕೃತಂ ಜಗತ್ ।
ಯಾವನ್ನ ಹೃದಯಗ್ರಂಥಿರ್ವಿಭಿನ್ನೋಽನಾದಿರಾತ್ಮನಃ ॥೧೫॥

ಸ್ವಸೃಷ್ಟಮಿದಮಾಪೀಯ ಶೇತೇಽಸೌ ಪ್ರಲಯಾಂಭಸಿ ।
ಆಪೋ ನಾರಾ ಇತಿ ಪ್ರೋಕ್ತಾಸ್ತೇನ ನಾರಾಯಣಃ ಸ್ಮೃತಃ ॥೧೬॥

ತತಃ ಸ್ವನಾಭಿಕಮಲಾತ್ಸ್ವರೂಪಾಂತರಮಾಸ್ಥಿತಃ ।
ಚತುರ್ಮುಖೋಽಭವದ್ಬ್ರಹ್ಮಾ ಲೋಕಸೃಷ್ಟಿವಿಧಾಯಕಃ ॥೧೭॥

ಸೋಽಸೃಜನ್ಮಾನಸಾನ್ ಪುತ್ರಾನ್ ಮರೀಚ್ಯಾದೀನ್ ಸ್ವದೇಹತಃ ।
ಪ್ರವೃತ್ತಿಮಾರ್ಗನಿರತಾನ್ ಸಪತ್ನೀಕಂ ಮನುಂ ತಥಾ ॥೧೮॥

ನಿವೃತ್ತಿಮಾರ್ಗನಿರತಾಂಶ್ಚತುರಃ ಸನಕಾದಿಕಾನ್ ।
ತಥಾಽನ್ಯಾನಪಿ ಲೋಕೇಶೋ ನಿರ್ಮಮೇ ನಾರದಾದಿಕಾನ್ ॥೧೯॥

ತೈರ್ಮರೀಚ್ಯಾದಿಭಿಃಪುತ್ರೈಃ ಸಹಿತಃ ಪದ್ಮಸಂಭವಃ ।
ವ್ಯಸೃಜದ್ವಿವಿಧಾನ್ ದೇವಾನ್ ಯಥಾಕರ್ಮ ಯಥಾಶ್ರುತಮ್ ॥೨೦॥

ಅಸುರಾನ್ ರಾಕ್ಷಸಾನ್ನಾಗಾನ್ ಗಂಧರ್ವಾಪ್ಸರಸಸ್ತಥಾ ।
ಜರಾಯುಜಾನಂಡಜಾಂಶ್ಚ ಸ್ವೇದಜಾನುದ್ಭಿಜೋಽಖಿಲಾನ್ ॥೨೧॥

ಭೂಲೋಕಂ ಚ ಭುವರ್ಲೋಕಂ ಸ್ವರ್ಲೋಕಂ ಚ ಮಹಸ್ತಥಾ ।
ಜನೋಲೋಕಂ ತಪೋಲೋಕಂ ಸತ್ಯಲೋಕಂ ಸಸರ್ಜ ಹ ॥೨೨॥

ತಥಾ ಕೈಲಾಸವೈಕುಂಠಲೋಕೌ ಲೋಕಂ ಗವಾಮಪಿ ।
ಅತಲಾದೀನ್ ಬಿಲಸ್ವರ್ಗಾನ್ ನಿರ್ಮಮೇ ಚತುರಾನನಃ ॥೨೩॥

ಯಾತಿ ಲೋಕತ್ರಯಂ ನಾಶಂ ನಿತ್ಯಂ ದ್ಯನಂದಿನೇ ಲಯೇ ।
ಚತುರ್ಲೋಕೀ ನೃತಿ ನಾಶಂ ಪ್ರಾಕೃತಪ್ರಲಯಾದ್ಯತೇ ॥೨೪॥

ಅಜನಾದ ಭಗವಂತನು ಸತ್ವಗುಣವನ್ನು ಹೊಂದಿ ಲೋಕಕಂಟಕರಾದ ಅಸುರರನ್ನು ಸಂಹರಿಸಿ ಸಜ್ಜನರನ್ನು ಸಂರಕ್ಷಿಸುವನು ಆಗ ಆತನನ್ನು ಎಲ್ಲರೂ 'ಶ್ರೀಮಹಾವಿಷ್ಣು'ವೆಂದು ಕರೆಯುವರು ॥೧೨॥

ಪ್ರಲಯಕಾಲ ಪ್ರಾಪ್ತವಾದಾಗ ತಮೋಗುಣವನ್ನಾಶ್ರಯಿಸಿದ ಭಗವಂತನು ಈ ಜಗತ್ತನ್ನು ಸಂಹರಿಸುವನು ಆತನನ್ನೇ 'ಹರ'ನೆಂದು ಹೇಳುವರು. ॥೧೩॥

ಮುನಿವರ್ಯರೇ! ಈ ಮೂವರ ಹೆಸರುಗಳಲ್ಲಿ ಇವರು ಮಾಡುವ ಕರ್ಮಗಳಲ್ಲಿ ತೋರುವ ಲೀಲೆಗಳಲ್ಲಿ ಬಿನ್ನತೆಯು ಕಂಡುಬಂದರೂ ಇದೆಲ್ಲವೂ ಮಾಯಾಮೂಲಕವೇ ಆಗಿದೆ ವಸ್ತುತಃ ಇವುಗಳಲ್ಲಿ ಯಾವ ಭೇದವೂ ಇಲ್ಲ ಜೀವಾತ್ಮನ ಅಂತಃಕರಣದಲ್ಲಿರುವ ವಾಸನಾ ಸಮೂಹವು ಸಮೂಲ ನಾಶ ಹೊಂದುವ ವರೆಗೆ ಪ್ರಕೃತಿಯ ವಿಭಿನ್ನ ಗುಣಗಳಿಂದ ಉಂಟಾದ ಈ ಜಗತ್ತು ಸತ್ಯವೆಂದೇ ತೋರುವುದು. ತಾನೇ ಸೃಷ್ಟಿಸಿದ ಈ ಅನಂತ ಜಗತ್ತನ್ನು ಪ್ರಲಯ ಕಾಲದಲ್ಲಿ ಉಪಸಂಹರಿಸಿ ಆಗ ಎಲ್ಲ ಕಡೆಗೂ ವ್ಯಾಪಿಸಿದ ಜಲದಲ್ಲಿ ಪರಮಾತ್ಮನು ಯೋಗ ನಿದ್ರೆಯನ್ನು ಹೊಂದುವನು ಆದ್ದರಿಂದ ಇವನಿಗೆ ನಾರಾಯಣನೆಂದು ಹೆಸರು ಬಂದಿತು (ನಾರ=ಜಲ ಅಯನ=ವಾಸಸ್ಥಾನವಾಗಿ ಉಳ್ಳವ=ನಾರಾಯಣ) ॥೧೪-೧೬॥

ಮುಂದೆ ತನ್ನ ನಾಭಿಕಮಲದಿಂದ ರೂಪಾಂತರ ಹೊಂದಿ ಲೋಕ ಸೃಷ್ಟಿ ಮಾಡಲು ಚತುರ್ಮುಖವಾಗಿ ಉದ್ಭವಿಸಿ ಬ್ರಹ್ಮನೆನಿಸಿದನು. ॥೧೭॥

ಬ್ರಹ್ಮದೇವನು ತನ್ನ ಮನಸ್ಸಿನಿಂದ ಪ್ರವೃತ್ತಿ ಮಾರ್ಗದಲ್ಲಿಯೇ ನಿರತರಾದ ಮರೀಚಿ ಮೊದಲಾದ ಪುತ್ರರನ್ನೂ ಸಪತ್ನೀಕನಾದ ಮನುವನ್ನೂ ಸೃಷ್ಟಿಸಿದನು. ॥೧೮॥

ನಿವೃತ್ತಿ ಮಾರ್ಗರಕ್ಷಣೆಗಾಗಿ ಅದರಲ್ಲಿಯೇ ನಿರತರಾಗಿರುವ ಸನಕ-ಸನಂದನ-ಸನತ್ಸುಜಾತ ಸನತ್ಕುಮಾರರನ್ನು ಹಾಗೂ ನಾರದ ಮೊದಲಾದವರನ್ನು ಸೃಷ್ಟಿಸಿದನು ॥೧೯॥

ಬ್ರಹ್ಮನು ಮರೀಚಿ ಮೊದಲಾದ ತನ್ನ ಮಕ್ಕಳೊಡನೆ ಶಾಸ್ತ್ರಗಳಲ್ಲಿ ಹೇಳಿದಂತೆ ಅವರವರು ಮಾಡಬೇಕಾದ ಕರ್ಮಗಳಿಗನುರೂಪವಾಗಿ ಆ ದೇವತೆಗಳನ್ನು ಸೃಷ್ಟಿಸಿದನು.॥೨೦॥

ಮುಂದೆ ಅಸುರ, ರಾಕ್ಷಸ, ನಾಗ ಗಂಧರ್ವರನ್ನೂ, ಅಪ್ಸರಃಸ್ತ್ರೀಯರನ್ನೂ ಮಾನವಾದಿ ಜರಾಯುಜರನ್ನು, ಪಕ್ಷಿ ಸರ್ಪಾದಿ ಅಂಡಜರನ್ನು, ಕೃಮ್ಯಾದಿ ಸ್ವೇದಜರನ್ನು ಗಿಡಗಂಟೆ ಮೊದಲಾದ ಉದ್ಭಿಜರನ್ನು ಹುಟ್ಟಿಸಿದನು ॥೨೧॥

ಭೂಲೋಕ ಭುವರ್ಲೋಕ - ಸ್ವರ್ಲೋಕ -ಜನೋಲೋಕ - ತಪೋಲೋಕ ಮಹರ್ಲೋಕ ಸತ್ಯಲೋಕಗಳನ್ನೂ ಅದರಂತೆಯೇ ಕೈಲಾಸ. ವೈಕುಂಠ ಲೋಕ, ಗೋಲೋಕಗಳನ್ನೂ, ಅತಲ ವಿತಲ ಮೊದಲಾದ ಅಧೋಲೋಕಗಳನ್ನೂ, ಸ್ವರ್ಗಲೋಕ ವನ್ನೂ ನಿರ್ಮಿಸಿದನು. ಭೂ ಆದಿಸಪ್ತಲೋಕಗಳಲ್ಲಿ ಭೂ, ಪಾತಾಳ, ಸ್ವರ್ಗ, ಈ ಮೂರು ಲೋಕಗಳು ದೈನಂದಿನ ಪ್ರಲಯದಲ್ಲಿ ವಿನಾಶಹೊಂದುತ್ತವೆ ಆದರೆ ಮಹರಾದಿ ನಾಲ್ಕು ಲೋಕಗಳು ಪ್ರಾಕೃತಿಕ ಪ್ರಲಯ ವನ್ನು ಹೊರತುಪಡಿಸಿ ದೈನಂದಿನ ಪ್ರಲಯದಲ್ಲಿ ನಾಶಹೊಂದುವುದಿಲ್ಲ. ॥೨೨-೨೪॥

ಚತುರ್ಯುಗಸಹಸ್ರಾಂತೇ ಲಯೋ ದೈನಂದಿನಃ ಸ್ಮೃತಃ ।
ವಿರಿಂಚೇಃ ಶತವರ್ಷಾಂತೇ ಲಯಃ ಪ್ರಾಕೃತ ಉಚ್ಯತೇ ॥೨೫॥

ಸುಷುಪ್ತ್ಯವಸ್ಥಾ ಜೀವಾನಾಂ ನಿತ್ಯಪ್ರಲಯ ಈರಿತಃ ।
ಸತಾ ಭವಂತಿ ಸಂಪನ್ನಾಸ್ತದಾ ಜೀವಾಃ ಪರಾತ್ಮನಾ ॥೨೬॥

ಬ್ರಹ್ಮಜ್ಞಾನೇನ ಜೀವಾನಾಂ ಲಯ ಆತ್ಯಂತಿಕ ಸ್ಮೃತಃ ।
ಅನೇಕಜನ್ಮಸಂಸಿದ್ಧಾಸ್ತೇ ಲಯಂ ಪ್ರಾಪ್ನುವಂತಿ ಹಿ ॥೨೭॥

ಇಂದ್ರಾಶ್ಚ ಮನವಶ್ಚೈವ ಚತುರ್ದಶ ಚತುರ್ದಶ ।
ಪ್ರತಿಮನ್ವಂತರಂ ವಿಷ್ಣೋರವತಾರಾ ಭವಂತಿ ಹಿ ॥೨೮॥

ಅಧರ್ಮಸ್ಯ ವಿನಾಶಾಯ ಧರ್ಮಸಂಸ್ಥಾಪನಾಯ ಚ ।
ತತ್ರ ತತ್ರ ಚರಿತ್ರಾಣಿ ವಿಷ್ಣೋರಮಿತತೇಜಸಃ ॥೨೯॥

ಕೀರ್ತಿತಾನಿ ಪುರಾಣೇಷು ಪುರಾಣಜ್ಞಾಃ ಪ್ರಚಕ್ಷತೇ ।
ಭೂಮೇ ರಜಾಂಸಿ ವಿಮಮೇ ವಿಷ್ಣುವೀರ್ಯಾಣಿ ಚೈವ ತು ॥೩೦॥

ಹರೇಃ ಸರ್ವಾವತಾರಾಸ್ತೇ ಪುಣ್ಯಶ್ರವಣಕೀರ್ತನಾಃ ।
ಶ್ರಾವ್ಯಾಃ ಕೀರ್ತ್ಯಾಶ್ಚ ಸತತಂ ಶ್ರದ್ಧಧಾನೈರ್ಬುಭೂಷುಭಿಃ ॥೩೧॥

ನಾನಾತೀರ್ಥಾನ್ಯರಣ್ಯಾನಿ ಕ್ಷೇತ್ರಾಣಿ ವಿವಿಧಾನಿ ಚ ।
ಸರಾಂಸಿ ಸರಿತಃ ಶೈಲಾನವತಾರಾನನೇಕಶಃ ॥೩೨॥

ಮತ್ಸ್ಯಂ ಕೂರ್ಮಂ ವರಾಹಂ ಚ ನಾರಸಿಂಹಂ ಚ ವಾಮನಮ್ ।
ರಾಮಂ ರಾಮಂ ಚ ಕೃಷ್ಣಂ ಚ ಬುದ್ಧಂ ಕಲ್ಕಿನಮೇವ ಚ ॥೩೩॥

ಯಜ್ಞಾವತಾರಕಪಿಲಂ ಗಜೇಂದ್ರಾರ್ಥಂ ಹರಿಂ ತಥಾ ।
ನರನಾರಾಯಣೌ ಹಂಸಂ ಹಯಗ್ರೀವಂ ಚ ದತ್ತಕಮ್ ॥೩೪॥

ಕೃಷ್ಣಾಖ್ಯಂ ಚ ಚಕಾರೇಶೋ ಲೋಕೋದ್ಧಾರಾಯ ಮಾಧವಃ ।
ಅನ್ಯೇ ತ್ವಂಶಾವತಾರಾ ಹಿ ಬಹವಃ ಪರಿಕೀರ್ತಿತಾಃ ॥೩೫॥

ನಾವ ಏತಾಃಪರಿಕ್ಲಿಪ್ತಾಃ ಅಗಾಧೇಽಸ್ಮಿನ್ ಭವಾರ್ಣವೇ ।
ಉತ್ತಾರಣಾಯ ಲೋಕಾನಾಮಾತರೋ ನಾಸ್ತಿ ಯತ್ರ ಹಿ ॥೩೬॥

ಬದರ್ಯಾಶ್ರಮತಃ ಸೋಽಯಂ ಭಗವಾನ್ ಭೂತಭಾವನಃ ।
ಏತ್ಯ ಕ್ರತುಪುರಂ ಪುಣ್ಯಂ ವೀರನಾರಾಯಣೋಽಭವತ್ ॥೩೭॥

ವಿನಿಹತ್ಯಾಽಸುರಾನ್ ದುಷ್ಟಾನ್ ಕ್ಷೇತ್ರಸ್ಯಾಸ್ಯ ವಿರೋಧಿನಃ ।
ಭಕ್ತಾನುಕಂಪೀ ನ್ಯವಸತ್ಪುಣ್ಯೇ ಕ್ರತುಪುರೇ ಹರಿಃ ॥೩೮॥

ಒಂದು ಸಾವಿರ ಚತುರ್ಯುಗಗಳೆಂದರೆ ಬ್ರಹ್ಮನಿಗೊಂದು ಹಗಲು ಅದರ ಕೊನೆಯಲ್ಲಿ ಆಗುವ ಪ್ರಲಯವೇ ದೈನಂದಿನ ಪ್ರಲಯ ಮತ್ತು ಒಂದು ನೂರು ವರ್ಷಗಳಿಗೆ ಜರುಗುವ ಪ್ರಲಯಕ್ಕೆ ಪ್ರಾಕೃತಿಕ ಪ್ರಲಯ, ಅಥವಾ ಮಹಾಪ್ರಳಯವೆಂದು ಹೆಸರು ಹೀಗೆ ನೂರು ವರ್ಷ ತುಂಬಿದ ಕೂಡಲೇ, ಪೂರ್ವ ಸಾಧನಗಳಿಂದ ನಿಶ್ಚಿತವಾದ ಮುಕ್ತಿಯು ಬ್ರಹ್ಮದೇವರಿಗೆ ದೊರೆಯುವದು ಇಂತಹ ಕಾಲಮಿತಿಗೆ ಒಳಪಟ್ಟ ಮುಕ್ತಿಯು ಸಾಮಾನ್ಯ ಜೀವರಿಗೆ ದೊರೆಯುವದಿಲ್ಲ ಅವರಿಗೆ ನಿಜವಾದ ಮಹಾಪ್ರಲಯವಾಗಿ ಮುಕ್ತಿ ದೊರೆಯುವದು ಬ್ರಹ್ಮಜ್ಞಾನದ ನಂತರವೇ ದೈನಂದಿನ ಪ್ರಲಯ ಸಮಯದಲ್ಲಿ ಈ ಜೀವರು ಗಾಢನಿದ್ರೆಯಲ್ಲಿದ್ದಂತ ಸತ್‌ಸ್ವರೂಪನಾದ ಪರಮಾತ್ಮನೊಡನೆ ಏಕೀಭಾವ ವನ್ನು ಹೊಂದಿದರೂ ಮರುಸೃಷ್ಟಿಯ ಆರಂಭದಲ್ಲಿ ತಮ್ಮ ಕರ್ಮಕ್ಕನುಸಾರವಾಗಿ ಈ ಸಂಸಾರಕ್ಕೆ ಮರಳಬೇಕಾಗುವದು ।।೨೭।।

ಪ್ರತಿ ಮನ್ವಂತರಕ್ಕೂ ಹದಿನಾಲ್ಕು ಇಂದ್ರರು, ಹದಿನಾಲ್ಕು ಮನುಗಳು, ಬೇರೆ ಬೇರೆಯಾಗಿದ್ದರೂ ಸಹ ಇವರೆಲ್ಲ ಶ್ರೀಮಹಾವಿಷ್ಣುವಿನ ಅವತಾರಿಗಳೇ ಆಗಿರುತ್ತಾರೆ.।।೨೮।।

ಅಪರಿಮಿತ ತೇಜಸ್ವಿಯಾದ ಮಹಾವಿಷ್ಣುವು ಅಧರ್ಮದ ಬೆಳವಣಿಗೆಯನ್ನು ತಡೆದು ಧರ್ಮವನ್ನು ಉದ್ಧರಿಸಲು ತಾಳಿದ ಅವತಾರಗಳ ಆಖ್ಯಾಯಿಕೆಗಳು ಪುರಾಣಗಳಲ್ಲಿ ಅಲ್ಲಲ್ಲಿ ಹೇಳಲಾಗಿದೆ. ಅವನ್ನೆಲ್ಲ ಪೌರಾಣಿಕರು ವಿವರಿಸುತ್ತಿರುತ್ತಾರೆ ಈ ಮಹಾಭೂಮಿಯ ರಜಃಕಣಗಳನ್ನು ಎಣಿಸುವದು ಎಷ್ಟು ಅಸಾಧ್ಯವೋ ವಿಷ್ಣುವಿನ ಚರಿತ್ರಗಳನ್ನು ಎಣಿಸುವದು ಅಷ್ಟೇ ಅಸಾಧ್ಯ. ।।೨೯-೩೦।।

ಹರಿಯ ಎಲ್ಲ ಅವತಾರಚರಿತ್ರಗಳ ಶ್ರವಣವು ಕೀರ್ತನವು ಬಹಳ ಪುಣ್ಯಕರವಿದ್ದುದರಿಂದ ಉತ್ಕರ್ಷ ಹೊಂದಬಯಸುವ ಎಲ್ಲ ಜನರೂ ಇವುಗಳನ್ನು ಸಂದರ್ಭಾನುಸಾರವಾಗಿ ಅವಶ್ಯವಾಗಿ ಕೇಳಬೇಕು ಅಥವಾ ಹೇಳಬೇಕು. ।।೩೧।।

ವಿವಿಧತೀರ್ಥಗಳು, ಅರಣ್ಯಗಳು, ಕ್ಷೇತ್ರಗಳು, ನಾನಾಸರೋವರಗಳು, ನದಿಗಳು, ಪರ್ವತಗಳು, ಇವೆಲ್ಲವೂ ಸಹ ಭಗವಾನ್ ಶ್ರೀಮಹಾವಿಷ್ಣುವಿನ ಸ್ವರೂಪವೇ ಆಗಿವೆ.।।೩೨।।

''ಮತ್ಸ್ಯ -ಕೂರ್ಮ-ವರಾಹ- ನಾರಸಿಂಹ-ವಾಮನ-ಪರಶುರಾಮ-ಶ್ರೀರಾಮ -ಬಲರಾಮ ಶ್ರೀಕೃಷ್ಣ -ಬುದ್ಧ -ಕಲ್ಕಿ ಹಾಗೂ ಯಜ್ಞಾವತಾರನಾದ ಕಪಿಲ, ಅದೇ ರೀತಿ ಗಜೇಂದ್ರನ ರಕ್ಷಕನಾದ ಶ್ರೀ ಹರಿ, ನರನಾರಾಯಣರು, ಹಂಸ, ಹಯಗ್ರೀವರು, ಶ್ರೀ ಸದ್ಗುರು ದತ್ತಾತ್ರೇಯರು'' ಶ್ರೀಕೃಷ್ಣ, ಈ ಎಲ್ಲ ಅವತಾರಗಳನ್ನು ಲೋಕೋದ್ಧಾರಕ್ಕಾಗಿ ಮಹಾವಿಷ್ಣುವು ಧರಿಸಿದನು. ಮೇಲೆ ಹೇಳಿದ ಅವತಾರಗಳ ಹೊರತಾಗಿ ಇನ್ನೂ ಅನೇಕ ಅಂಶಾವತಾರಗಳು ಇವೆ. ಅಗಾಧವಾದ ಈ ಭವಸಾಗರದಲ್ಲಿ ಪತಿತರಾದ ಜೀವರನ್ನು ಮೇಲೆತ್ತಲು ಈ ಅವತಾರಗಳು ನೌಕೆಗಳಂತಿವೆ. ಆದರೆ ನದಿ ದಾಟಿದ ನಂತರ ಅಂಬಿಗನಿಗೆ ಹಣ ಕೊಡುವಂತೆ ಈ ಭವ ಸಾಗರ ದಾಟಿದೊಡನೆ ಅದಕ್ಕೆ ಪ್ರತಿಫಲವೀಯುವ ಪ್ರಸಂಗವೇ ಇಲ್ಲಿಲ್ಲ.।।೩೨ ೩೭।।

ಸಕಲ ಜೀವಿಗಳ ರಕ್ಷಕನಾದ ಭಗವಂತನು ಬದರಿಗಿರಿಧಾಮದಿಂದ ಪಾವನವಾದ ಕ್ರತುಪುರಕ್ಕೆ ಬಂದು ವೀರನಾರಾಯಣನಾದನು. ಭಕ್ತರಲ್ಲಿ ದಯೆ ತೋರುವ ಶ್ರೀಹರಿಯು ಈ ಕ್ಷೇತ್ರ ಧ್ವೇಷಕರಾದ ದುಷ್ಟದಾನವರನ್ನು ಸಂಹರಿಸಿ ಪಾವನವಾದ ಈ ಕ್ರತುಪುರದಲ್ಲಿ ನೆಲೆಸಿದನು. ।। ೩೭ ೩೮ ।।

ತದಾ ಬ್ರಹ್ಮಾದಯೋ ದೇವಾಃ ಸನಕಾದ್ಯಾ ಮಹರ್ಷಯಃ ।
ಪ್ರವಂದಿರೇ ಭಕ್ತಿಯುಕ್ತಾ ವೀರನಾರಾಯಣಂ ಹರಿಮ್ ॥೩೯॥

ತುಷ್ಟಾವ ಪದ್ಮಭೂಸ್ತತ್ರ ನಿಲಿಂಪನಿಕರಾಗ್ರಣೀಃ ।
ಪ್ರೇಮಗದ್ಗದಯಾ ವಾಚಾ ದೇವಂ ವಾಚಾಮಗೋಚರಮ್ ॥೪೦॥

ಬ್ರಹ್ಮೋವಾಚ –

ಮಹಾಮಾಯಿನೇಽನಂತಕಲ್ಯಾಣಧಾಮ್ನೇ
ನಿರಸ್ತಾಘಸಂಘಾಯ ಸರ್ವೋತ್ತಮಾಯ ।
ಸ್ವಭಕ್ತಾವನೋಪಾತ್ತದೀಕ್ಷಾಯ ಶಶ್ವತ್
ನಮಸ್ಕುರ್ಮಹೇ ವೀರನಾರಾಯಣಾಯ ॥೪೧॥

ನಿಹತ್ಯಾಸುರಂ ಶಂಖಮಬ್ಧೇಃ ಸಕಾಶಾತ್
ಶ್ರುತೀನಾಂ ಸಮುದ್ಧಾರಮಾತನ್ವತೇ ತೇ ।
ಮಹಾಮೀನರೂಪಾಯ ಲೋಕೈಕಕರ್ತ್ರೇ
ನಮಸ್ಕುರ್ಮಹೇ ವೀರನಾರಾಯಣಾಯ ॥೪೨॥

ಸುರಾಣಾಂ ಸುಧಾಲಬ್ಧಯೇ ಕ್ಷೀರಸಿಂಧುಂ
ಬಲಾನ್ಮಥ್ನತಾಂ ಮಂದರೇ ಮಜ್ಜಮಾನೇ ।
ತಮುದ್ಬಿಭ್ರತೇ ಕೂರ್ಮರೂಪಂ ಗೃಹೀತ್ವಾ
ನಮಸ್ಕುರ್ಮಹೇ ವೀರನಾರಾಯಣಾಯ ॥೪೩॥

ಹಿರಣ್ಯಾಕ್ಷದೈತ್ಯಂ ಮಹಾಂಭೋಧಿಗರ್ಭೇ
ಗೃಹೀತ್ವಾ ಮಹೀಂ ವರ್ತಮಾನಂ ಬಲಿಷ್ಠಮ್ ।
ನಿಹತ್ಯಾವನೇಃ ಕ್ರೋಡರೂಪೇಣ ಪಾತ್ರೇ
ನಮಸ್ಕುರ್ಮಹೇ ವೀರನಾರಾಯಣಾಯ ॥೪೪॥

ಸುತದ್ವೇಷಿಣಂ ದೈತ್ಯರಾಜಂ ನಖಾಗ್ರ್ಯೈ
ರ್ವಿದಾರ್ಯೋರ್ಜ ಸ್ವಭಕ್ತಸ್ಯ ಸಂರಕ್ಷಕಾಯ ।
ನೃಸಿಂಹಾಯ ಸಂಸ್ಮರ್ತೃದುಃಖಚ್ಛಿದೇ ತೇ
ನಮಸ್ಕುರ್ಮಹೇ ವೀರನಾರಾಯಣಾಯ ॥೪೫॥

ಬಲೇರ್ಗರ್ವಿಣಃ ಖರ್ವರೂಪೇಣ ಗರ್ವಂ
ಸುಪರ್ವಾಪಮಂತುರ್ನಿರಸ್ಯ ತ್ರಿಲೋಕೀಮ್ ।
ಸುರೇಂದ್ರಸ್ಯ ದಾತ್ರೇ ಜಗತ್ಕ್ಷೇಮಕರ್ತ್ರೇ
ನಮಸ್ಕುರ್ಮಹೇ ವೀರನಾರಾಯಣಾಯ ॥೪೬॥

ಆ ಸಮಯದಲ್ಲಿ ಬ್ರಹ್ಮಾದಿ ದೇವತೆಗಳೂ, ಸನಕಾದಿ ಮಹರ್ಷಿಗಳೂ, ಪ್ರಭುವಾದ ಶ್ರೀವೀರನಾರಾಯಣನನ್ನು ಭಕ್ತಿಯಿಂದ ನಮಿಸಿದರು ॥೩೯॥

ಅಮರರಿಗೊಡೆಯನಾದ ಬ್ರಹ್ಮದೇವನು ಪ್ರೇಮದಿಂದ ತಡೆ–ತಡದು ಬರುತ್ತಿದ್ದ ನುಡಿಗಳಿಂದ ಮಾತಿಗೂ ನಿಲುಕದ ಬಗವಂತನನ್ನು ಸ್ತುತಿಸಿದನು ॥೪೦॥

ಬ್ರಹ್ಮನು ಹೇಳಿದನು –

ಮಹಾಮಾಯಾವಿಯಾದ, ಅನಂತಕಲ್ಯಾಣ ನಿಲಯನಾದ, ಸಕಲ ಪಾಪ ವಿನಾಶಕನಾದ, ಸರ್ವೋತ್ತಮನಾದ, ತನ್ನ ಭಕ್ತರನ್ನುದ್ಧರಿಸಲು ದೀಕ್ಷಾಬದ್ಧನಾದ ಭಗವಾನ್ ಶ್ರೀವೀರನಾರಾಯಣನನ್ನು ಪುನಃ ಪುನಃ ನಮಿಸುತ್ತೇವೆ. ॥೪೧॥

ಶಂಖನೆಂಬ ದಾನವನನ್ನು ಸಂಹರಿಸಿ ಸಾಗರದ ಗರ್ಭದಿಂದ ವೇದಗಳನ್ನು ಉದ್ಧರಿಸಿದ, ಮಹಾಮತ್ಸ್ಯರೂಪಿಯಾದ ಜಗಜ್ಜನಕನಾದ ಭಗವಾನ್ ಶ್ರೀವೀರನಾರಾಯಣ ನನ್ನು ಪುನಃ ಪುನಃ ನಮಿಸುತ್ತೇವೆ. ॥೪೨॥

ದೇವತೆಗಳು ಅಮೃತವನ್ನು ಪಡೆಯಲು ಮಂದರ ಪರ್ವತವನ್ನೇ ಕಡಗೋಲು ಮಾಡಿಕೊಂಡು ಕ್ಷೀರಸಾಗರವನ್ನು ಕಡೆಯುವಾಗ ಮುಳಗಲಾರಂಭಿಸಿದ ಆ ಮಂದರಗಿರಿಯನ್ನು ಮಹಾಕೂರ್ಮರೂಪಿಯಾಗಿ ಎತ್ತಿ ಹಿಡಿದ ವೀರನಾರಾಯಣನನ್ನು ನಮಿಸುತ್ತೇವೆ. ॥೪೩॥

ಭೂಮಿಯನ್ನು ಚಾಪೆಯಂತೆ ಸುರುಳಿ ಸುತ್ತಿ ಸಮುದ್ರ ಗರ್ಭಕ್ಕೆ ಒಯ್ದಿದ್ದ ಮಹಾಬಲಿಷ್ಠನಾದ ಹಿರಣ್ಯಾಕ್ಷ ದೈತ್ಯನನ್ನು ವರಾಹರೂಪಧಾರಿಯಾಗಿ ವಧಿಸಿ ಭೂಮಿ ಯನ್ನುದ್ಧರಿಸಿದ ವೀರನಾರಾಯಣನನ್ನು ವಂದಿಸುತ್ತೇವೆ. ॥೪೪॥

ತನ್ನ ಭಕ್ತ ಪ್ರಹ್ಲಾದನನ್ನು ಸಂರಕ್ಷಿಸಲು ನೃಸಿಂಹರೂಪ ಧರಿಸಿ ತನ್ನ ಪುತ್ರನ ದ್ವೇಷಿಯಾದ ದೈತ್ಯರಾಜ ಹಿರಣ್ಯಕಶಿಪುವಿನ ಎದೆಯನ್ನು ಹರಿತ ಉಗುರುಗಳಿಂದ ಸೀಳಿದ, ಚಿಂತಕರ ಸಂಕಷ್ಟಗಳನ್ನು ಪರಿಹರಿಸುವ ಶ್ರೀವೀರನಾರಾಯಣನನ್ನು ವಂದಿಸುತ್ತೇವೆ. ॥೪೫॥

ವಾಮನ ರೂಪಧಾರಿಯಾಗಿ ತನ್ನ ಪುಟ್ಟ ದೇಹದಿಂದ ದೇವತೆಗಳನ್ನು ಅವಮಾನಿಸುತ್ತಿದ್ದ ಬಲಿಯ ಗರ್ವವನ್ನು ಹರಣಮಾಡಿ ತ್ರಿಲೋಕವನ್ನು ದೇವೇಂದ್ರನಿಗಿತ್ತ ಲೋಕೋಪಕಾರಿಯಾದ ವೀರನಾರಾಯಣನನ್ನು ನಮಿಸುತ್ತೇವೆ. ॥೪೬॥

ಭೃಗೋರನ್ವವಾಯೇಽವತೀರ್ಯೋದ್ಧಟಾನಾಂ
ನೃಪಾಣಾಂ ನಿಹಂತ್ರೇ ಕುಠಾರೇಣ ರೋಷಾತ್ ।
ಮೃಧೇ ರೈಣುಕೇಯಾಯ ಭೂಮೇಃ ಪ್ರದಾತ್ರೇ
ನಮಸ್ಕುರ್ಮಹೇ ವೀರನಾರಾಯಣಾಯ ॥೪೭॥

ಮಹಾಸೇತುಮಬ್ಧೌ ವಿಧಾಯಾಶು ತೀರ್ತ್ವಾ
ಪ್ಲವಂಗೈಸ್ತಮಬ್ಧಿಂ ಪತಿಂ ಕೌಣಪಾನಾಮ್ ।
ನಿಹತ್ಯಾಧಿಮುನ್ಮೂಲಯಿತ್ರೇ ಸುರಾಣಾಂ
ನಮಸ್ಕುರ್ಮಹೇ ವೀರನಾರಾಯಣಾಯ ॥೪೮॥

ಯದೋರನ್ವಯೇ ಸೀರಿಣಾ ಸಾಕಮೇತ್ಯ
ಕ್ಷಿತೌ ಭಾರಭೂತಾಸುರಾಣಾಂ ನಿಹಂತ್ರೇ ।
ಜಗತ್ಪಾಪತಾಪಾಪಹೃತ್ಕೃಷ್ಣಧಾಮ್ನೇ
ನಮಸ್ಕುರ್ಮಹೇ ವೀರನಾರಾಯಣಾಯ ॥೪೯॥

ದಯಾಂ ತನ್ವತೇ ಯಜ್ಞಮಾರ್ಗಂ ನಿಷಿಧ್ಯ
ಪ್ರಿಯಪ್ರಾಣಿನೇ ಬುದ್ಧರೂಪಾಯ ತುಭ್ಯಮ್ ।
ತತೋ ಮ್ಲೇಂಛಸಂಹಾರಿಣೇ ಕಲ್ಕಿನೇ ಚ
ನಮಸ್ಕುರ್ಮಹೇ ವೀರನಾರಾಯಣಾಯ ॥೫೦॥

ಅನಂತಾವತಾರಾಯ ತತ್ತಚ್ಚರಿತ್ರೈ
ರನಂತಾಯ ಶಾಂತಾಯ ಶಶ್ವತ್ತಮಾಯ ।
ಅವಿದ್ಯಾವಿಹೀನಾಯ ವೇದ್ಯಾಯ ವೇದ್ಯ
ರ್ನಮಸ್ಕುರ್ಮಹೇ ವೀರನಾರಾಯಣಾಯ ॥೫೧॥

ನಮಃ ಸಚ್ಚಿದಾನಂದರೂಪಾಯ ತುಭ್ಯಂ
ನಮಃ ಸ್ವಾನುಭೂತ್ಯೈಕಮಾನಾಯ ತುಭ್ಯಮ್ ।
ನಮಃ ಕಲ್ಪಿತಾನಲ್ಪವಿಶ್ವಾಶ್ರಯಾಯ
ನಮಸ್ಕುರ್ಮಹೇ ವೀರನಾರಾಯಣಾಯ ॥೫೨॥

ಇತಿಸ್ತುತ್ವಾ ಚತುರ್ವಕ್ತ್ರಃ ಪರಮಾತ್ಮಾನಮೀಶ್ವರಮ್
ಪ್ರಣನಾಮ ಸಸಾಷ್ಟಾಂಗಂ ದಂಡವದ್ಧರಣೀತಲೇ ॥೫೩॥

ಭೃಗುಕುಲದಲ್ಲಿ ಜನಿಸಿ ಕ್ರುದ್ಧನಾಗಿ ತನ್ನ ಕುಠಾರದಿಂದ ಉದ್ಧಟರಾದ ಕ್ಷತ್ರಿಯ ರಾಜರನ್ನು ಯುದ್ಧದಲ್ಲಿ ಸಂಹರಿಸಿ ಅವರ ಭೂಮಿಯನ್ನು ದಾನ ಮಾಡಿದ ರೇಣುಕಾತನಯ ಪರಶುರಾಮ ರೂಪಿಯಾದ ವೀರನಾರಾಯಣನನ್ನು ವಂದಿಸುತ್ತೇವ. ||೪೭||

ಸಾಗರದಲ್ಲಿ ಶೀಘ್ರವಾಗಿ ಮಹಾಸೇತುವನ್ನು ನಿರ್ಮಿಸಿ ಕಪಿಗಳೊಂದಿಗೆ ಸಾಗರವನ್ನು ದಾಟಿ ರಾಕ್ಷಸ ರಾಜನಾದ ರಾವಣನನ್ನು ವಧಿಸಿ ದೇವತೆಗಳ ಸಂಕಷ್ಟವನ್ನು ಪರಿಹರಿಸಿದ ಶ್ರೀರಾಮರೂಪಿ ವೀರನಾರಾಯಣನನ್ನು ನಮಿಸುತ್ತೇವ ||೪೮||

ಯದುಕುಲದಲ್ಲಿ ಹಲಧರನಾದ ಬಲರಾಮನೊಂದಿಗೆ ಜನಿಸಿ ಶ್ರೀಕೃಷ್ಣನೆಂದು ಪ್ರಸಿದ್ಧನಾಗಿ ಭೂಭಾರಕರಾದ ಅಸುರರನ್ನು ಸಂಹರಿಸಿದ, ನೀಲವರ್ಣದ, ಜಗತ್ತಿನ ಪಾಪ, ತಾಪಗಳನ್ನು ಹೋಗಲಾಡಿಸಿದ ವೀರನಾರಾಯಣನನ್ನು ವಂದಿಸುತ್ತೇವ ||೪೯||

ಬುದ್ಧರೂಪಧಾರಿಯಾಗಿ ಅನಧಿಕಾರಿಗಳಿಗೆ ದೊರೆಯಬಹುದಾದ ಸಿದ್ಧಿಯನ್ನು ತಡೆಗಟ್ಟಲು ವೈದಿಕಮಾರ್ಗವನ್ನು ಅವಹೇಳನೆ ಮಾಡಿದ, ಪ್ರಾಣಿ ಗಳಲ್ಲಿ ದಯೆತೋರಿದ ವೀರನಾರಾಯಣನೇ ನಿನಗೆ ವಂದನೆಗಳು. ಕಲ್ಕಿ ರೂಪತಾಳಿ ಮ್ಲೇಂಛರನ್ನು ಸಂಹರಿಸಿದ ನಿನ್ನನ್ನು ಪುನಃ ಪುನಃ ವಂದಿಸುತ್ತೇವೆ. ||೫೦||

ಅನಂತಾವತಾರ ಧರಿಸಿ ತನ್ನ ವಿವಿಧ ಚರಿತ್ರಗಳಿಂದ ನಾನಾ ರೂಪಿಯಾದ ಪರಮಶಾಂತನಾದ ಶಾಶ್ವತನಾದ ಅವಿದ್ಯಾರಹಿತನಾದ ವೇದಗಮ್ಯನಾದ ಭಗವಾನ್ ಶ್ರೀವೀರನಾರಾಯಣನನ್ನು. ನಮಿಸುತ್ತೇವೆ. || ೫೧||

ಸಚ್ಚಿದಾನಂದ ಸ್ವರೂಪಿಯೂ ಸ್ವಾನುಭವವೇದ್ಯನೂ ಆದ ನಿನಗೆ ನಮಸ್ಕಾರ ವಿಶಾಲವಾದ ಈ ಜಗತ್ತನ್ನು ಕಲ್ಪಿಸಿದ, ಅದಕ್ಕೆ ಆಧಾರವಾಗಿರುವ ಪ್ರಭು ವೀರನಾರಾಯಣನೇ! ನಿನಗೆ ಅನಂತ ವಂದನೆಗಳು. ||೫೨||

ಭಗವಾನ್ ವೀರನಾರಾಯಣನನ್ನು ಈ ರೀತಿ ಸ್ತುತಿಸಿದ ಬ್ರಹ್ಮನು ಭೂಮಿಯಲ್ಲಿ ದಂಡವತ್ ಸಾಷ್ಟಾಂಗ ಪ್ರಣಾಮಗಳನ್ನಸಗಿದನು. ||೫೩||

ಶ್ರೀಭಗವಾನುವಾಚ –

ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಕಮಲಾಸನ ಪದ್ಮಭೂಃ ।
ಸ್ತುತ್ಯಾನಯಾ ಪ್ರಸನ್ನೋಽಸ್ಮಿ ವರಂ ವರಯ ವಾಂಛಿತಮ್ ॥೫೪॥

ಬ್ರಹ್ಮೋವಾಚ –

ಸ್ತೋತ್ರಮೇತನ್ಮಯಾ ಪ್ರೋಕ್ತಂ ಯೇ ಪಠಿಷ್ಯಂತಿ ಮಾನವಾಃ ।
ತೇಷಾಂ ಪ್ರಸನ್ನೋ ವರದೋ ಭವಾನ್ ಭವಿತುಮರ್ಹತಿ ॥೫೫॥

ಶ್ರೀಭಗವಾನುವಾಚ –

ತ್ವಯಾ ಕೃತಮಿದಂ ಸ್ತೋತ್ರಂ ಯೇ ಪಠಿಷ್ಯಂತಿ ಮಾನವಾಃ ।
ತೇಭ್ಯೋಽಹಂ ಸಂಪ್ರಯಚ್ಛಾಮಿ ಭಕ್ತೇಭ್ಯೋ ವಾಂಛಿತಂ ಫಲಮ್ ॥೫೬॥

ವಿದ್ಯಾರ್ಥೀ ಪ್ರಾಪ್ನುಯಾದ್ವಿದ್ಯಾಂ ಧನಾರ್ಥೀ ಧನಮಾಪ್ನುಯಾತ್ ।
ಕನ್ಯಾರ್ಥೀ ಪ್ರಾಪ್ನುಯಾತ್ಕನ್ಯಾಂ ಕುಲಶೀಲಗುಣಾನ್ವಿತಾಮ್ ॥೫೭॥

ರೋಗಾನ್ಮುಚ್ಯೇತ ರೋಗೀ ಚ ಬದ್ಧೋ ಮುಚ್ಯೇತ ಬಂಧನಾತ್ ।
ಋಣಾನ್ಮುಚ್ಯೇದೃಣಗ್ರಸ್ತಃ ಸಮರೇ ಜಯಮಾಪ್ನುಯಾತ್ ॥೫೮॥

ಇದಂ ಪುಂಸವನಂ ಸ್ತೋತ್ರಮಿದಂ ಸ್ವಸ್ತ್ಯಯನಂ ಪರಮ್ ।
ಧನ್ಯಂ ಯಶಸ್ಯಮಾಯುಷ್ಯಂ ತುಷ್ಟಿಪುಷ್ಟಿಪ್ರದಂ ಶಿವಮ್ ॥೫೯॥

ಬಹುನಾತ್ರ ಕಿಮುಕ್ತೇನ ಯೋಽಧೀತೇ ಸ್ತೋತ್ರಮುತ್ತಮಮ್ ।
ಬ್ರಾಹ್ಮಮೇತತ್ಸದಾ ತಸ್ಯ ಸನ್ನಿಧೌ ನಿವಸಾಮ್ಯಹಮ್ ॥೬೦॥

ಇತಿ ಶ್ರುತ್ವಾ ಭಗವತೋ ವಾಕ್ಯಂ ವಾಣೀಪತಿಸ್ತದಾ ।
ಭಗವಂತಂ ಪ್ರಣಮ್ಯಾಗಾತ್ ಸಾನುಗೋ ರಂಗಮಂಟಪಮ್ ॥೬೧॥

ತತ್ರೋಪವಿಶ್ಯ ವಾಣೀಶೋ ವಿಷ್ಣುಧರ್ಮಾನ್ ಸನಾತನಾನ್ ।
ಊಚಿವಾನ್ ನಾರದಾದಿಭ್ಯಃ ಸಂಪ್ರದಾಯಪ್ರವೃತ್ತಯೇ ॥೬೨॥

**ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ**
**ಕ್ರತುಪುರಮಾಹಾತ್ಮ್ಯೇ**
**ಭಗವದ್ಗುಣವರ್ಣನಂ ನಾಮ ಷಷ್ಠೋಽಧ್ಯಾಯಃ**

**ಭಗವಂತನು ಹೇಳಿದನು –**

ಬ್ರಹ್ಮದೇವ! ಮೇಲೇಳು. ನಿನಗೆ ಮಂಗಳವಾಗಲಿ ಈ ನಿನ್ನ ಸ್ತುತಿಯಿಂದ ನಾನು ಪ್ರಸನ್ನನಾಗಿದ್ದೇನೆ ನಿನಗಿಷ್ಟವಾದ ವರವನ್ನು ಕೇಳು ॥೫೪॥

**ಬ್ರಹ್ಮನು ಹೇಳಿದನು –**

ಪ್ರಭೋ! ನಾನು ಮಾಡಿದ ಈ ಸ್ತೋತ್ರವನ್ನು ಅನುದಿನವೂ ಪಠಿಸುವ ಮನುಜರಿಗೆ ನೀನು ಪ್ರಸನ್ನನಾಗು ಅವರ ಇಷ್ಟಾರ್ಥಗಳನ್ನು ಈಡೇರಿಸು. ಇದಕ್ಕೆ ನೀನೇ ಯೋಗ್ಯನಿರುವಿ. ॥೫೫॥

**ಭಗವಂತನು ಹೇಳಿದನು –**

ಬ್ರಹ್ಮ! ನೀನು ಮಾಡಿದ ಈ ಸ್ತೋತ್ರವನ್ನು ಪಠಿಸುವ ಭಕ್ತರಿಗ ಅವರ ವಾಂಛಿತಫಲಗಳನ್ನು ನೀಡುವ ॥೫೬॥

ಈ ಸ್ತೋತ್ರವನ್ನು ಪಠಿಸುವ ವಿದ್ಯಾರ್ಥಿಗಳು ವಿದ್ಯೆಯನ್ನೂ, ಧನಾಪೇಕ್ಷಿಗಳು ಧನವನ್ನೂ, ಕನ್ಯಾಭಿಲಾಷಿಗಳು ಕುಲೀನರಾದ ಶೀಲವತಿಯರಾದ ಕನ್ಯೆಯರನ್ನೂ ಹೊಂದುವರು ॥೫೭॥

ರೋಗಿಯು ರೋಗವಿಮುಕ್ತನೂ, ಬಂಧಿತನು ಬಂಧವಿಮುಕ್ತನೂ, ಋಣಿಯು ಋಣವಿಮುಕ್ತನೂ, ಆಗುವನು. ಈಸ್ತವವನ್ನು ಪಠಿಸುವವನು ಸಮರದಲ್ಲಿ ಜಯಶಾಲಿ ಯಾಗುವನು. ॥೫೮॥

ಪುರುಷ ಸಂತತಿಯನ್ನು ಕೊಡುವ ಈ ಸ್ತೋತ್ರವು ಪರಮ ಮಂಗಲಕರವಾಗಿದೆ ಧನ್ಯತೆ ಯನ್ನು ತಂದುಕೊಡುವುದು, ಆಯುಷ್ಯ – ಕೀರ್ತಿ – ಸಂತೋಷ – ಪುಷ್ಟಿಗಳನ್ನು ಉಂಟುಮಾಡುವುದು. ॥೫೯॥

ಬ್ರಹ್ಮ! ಹೆಚ್ಚೇನು ಹೇಳುವದು? ನೀನು ಮಾಡಿದ ಈ ಸ್ತೋತ್ರವನ್ನು ಪ್ರತಿದಿನ ಪಠಿಸುವ ಭಕ್ತರ ಸಮೀಪವೇ ನಾನು ವಾಸಿಸುವೆ. ॥೬೦॥

ಭಗವಂತನು ತಿಳಿಸಿದ ಈ ಮಾತನ್ನು ಕೇಳಿದ ಬ್ರಹ್ಮದೇವನು ವೀರನಾರಾಯಣನನ್ನು ವಂದಿಸಿ, ತನ್ನ ಅನುಯಾಯಿಗಳ ಜೊತೆಗೆ ಮಂದಿರದ ರಂಗಮಂಟಪಕ್ಕೆ ತರಳಿದನು. ॥೬೧॥

ಅಲ್ಲಿ ಆಸೀನನಾದ ಬ್ರಹ್ಮನು ಸಂಪ್ರದಾಯ ರಕ್ಷಣೆಯ ಉದ್ದೇಶದಿಂದ ನಾರದಾದಿಗಳಿಗೆ ಸನಾತನವಾದ ಭಾಗವತ ಧರ್ಮವನ್ನು ಹೇಳಿದನು. ॥ ೬೨ ॥

**ಶ್ರೀಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ**
**ಕ್ರತುಪುರಮಾಹಾತ್ಮ್ಯೆಯಲ್ಲಿ**
**ಭಗವದ್ಗುಣ ವರ್ಣನೆಯೆಂಬ ಆರನೆಯ ಅಧ್ಯಾಯವು ಮುಗಿಯಿತು.**

# ಅಥ ಸಪ್ತಮೋಽಧ್ಯಾಯಃ

ಋಷಯ ಊಚುಃ —

ಧರ್ಮಾನ್ ಭಾಗವತಾನ್ ಬ್ರಹ್ಮಾ ಯಾನ್ ಜಗಾದ ಸನಾತನಾನ್ ।
ನಾರದಾದಿಸುರರ್ಷಿಭ್ಯಸ್ತಾನ್ನಃ ಶಂಸ ಮಹಾಮತೇ ॥೧॥

ಸೂತ ಉವಾಚ —

ಶೃಣುಧ್ವಂ ಮುನಯಃ ಸರ್ವೇ ಧರ್ಮಾನ್ ಭಾಗವತಾನ್ ಶುಭಾನ್ ।
ಯಾನ್ ಜಗಾದ ಸ್ವಪುತ್ರೇಭ್ಯೋ ಬ್ರಹ್ಮಾ ತಾನ್ ಕಥಯಾಮಿ ವಃ॥೨॥

ಬ್ರಹ್ಮೋವಾಚ —

ಸ್ವಗೃಹ್ಯೋಕ್ತಪ್ರಕಾರೇಣ ದ್ವಿಜತ್ವಂ ಪ್ರಾಪ್ಯ ನಾರದ! ।
ಊರ್ಧ್ವಪುಂಡ್ರಂ ಮೃದಾ ಧೃತ್ವಾ ವೇದಂ ಗುರುಕುಲೇ ಪಠೇತ್ ॥೩॥

ನೈಷ್ಠಿಕಶ್ಚೇದ್ಗುರುಕುಲೇ ವಸೇತ್ತತ್ರೈವ ಚಾಽಽಮೃತೇಃ ।
ದ್ವಾದಶಾಬ್ದಂ ವಸೇತ್ತತ್ರ ಹ್ಯುಪಕುರ್ವಾಣಕೋ ವ್ರತೀ ॥೪॥

ಸಾಂಗಂ ವೇದಮಧೀತ್ಯಾಥ ಶಾಸ್ತ್ರಾಣಿ ಚ ಯಥಾಮತಿ ।
ಉದ್ವಹೇತ್ಕುಲಜಾಂ ಕನ್ಯಾಂ ಸವರ್ಣಾಂ ಗುಣಶಾಲಿನೀಮ್ ॥೫॥

ತತೋ ಭಾಗವತಾನ್ ಧರ್ಮಾನ್ ಶಿಕ್ಷೇತಾಚಾರ್ಯಸನ್ನಿಧೌ ।
ಗುರೋಃ ಶುಶ್ರೂಷಣಂ ಕುರ್ವನ್ ಭಾವಯನ್ ಗುರುಮೀಶ್ವರಮ್॥೬॥

ವಿಷ್ಣುಮಂತ್ರಂ ಗೃಹೀತ್ವಾಥ ಷಡಂಗನ್ಯಾಸಪೂರ್ವಕಮ್ ।
ತಾಂತ್ರಿಕಂ ಕೃತ್ಸ್ನತೋ ಜ್ಞಾತ್ವಾ ಸದಾಚಾರಪರಾಯಣಃ ॥೭॥

ಸಂಪ್ರಾಪ್ಯಾಧ್ಯಾತ್ಮವಿಜ್ಞಾನಂ ವೇದಾಂತಶ್ರವಣಾದಿನಾ ।
ಆಚಾರ್ಯೇಣಾಭ್ಯನುಜ್ಞಾತೋ ಗೃಹಸ್ಥಾಶ್ರಮಮಾಚರೇತ್ ॥೮॥

ಶ್ರೌತಂ ಸ್ಮಾರ್ತಂ ಚ ಕುರ್ವೀತ ಕರ್ಮ ಶ್ರೀಹರಿತೋಷಣಮ್ ।
ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಹರಯೇ ಸಂನಿವೇದಯೇತ್॥೯॥

ಏಕಾದಶ್ಯಾಮುಪವಸೇತ್ಪಕ್ಷಯೋರುಭಯೋರಪಿ ।
ಶೂದ್ರಾದ್ಯೃತೇ ತಪ್ತಮುದ್ರಾಂ ನ ಜಾತು ಬಿಭೃಯಾದ್ ದ್ವಿಜಃ ॥೧೦॥

ವೃಂತಾಕಾದಿನಿಷಿದ್ಧಂ ಯತ್ತನ್ನಾಶ್ನೀಯಾತ್ಕದಾಚನ ।
ವಿಷ್ಣುಪೂಜಾಂ ವಿನಾ ನಾನ್ನಮಶ್ನೀಯಾತ್ಸಂಕಟೇಽಪಿ ಚ ॥೧೧॥

# ಏಳನೆಯ ಅಧ್ಯಾಯ

**ಋಷಿಗಳು ಹೇಳಿದರು –**

ಮೇಧಾವಿಯಾದ ಸೂತ! ಬ್ರಹ್ಮದೇವನು ನಾರದಾದಿ ದೇವರ್ಷಿಗಳಿಗ ಹೇಳಿದ ಸಸಾತನವಾದ ಭಾಗವತ ಧರ್ಮವನ್ನು ನಮಗೂ ತಿಳಿಸು ||೧||

**ಸೂತನು ಹೇಳಿದನು –**

ಮುನಿಗಳೇ! ಬ್ರಹ್ಮದೇವನು ತನ್ನ ಮಕ್ಕಳಿಗೆ ತಿಳಿಸಿದ ಪರಮ ಮಂಗಲವಾದ ಭಾಗವತ ಧರ್ಮಗಳನ್ನು ನಿಮಗೆ ಹೇಳುವೆ ಕೇಳಿರಿ ||೨||

**ಬ್ರಹ್ಮನು ಹೇಳಿದನು –**

ವತ್ಸನಾರದ! ಹಿಂದೆ ತಿಳಿಸಿದಂತೆ ತಮ್ಮ ಗೃಹ್ಯಸೂತ್ರಾನುಸಾರ ಉಪನಯನ ಸಂಸ್ಕಾರವನ್ನು ಹೊಂದಿ ಲಲಾಟದಲ್ಲಿ ಮೃತ್ತಿಕೆಯಿಂದ ತಿಲಕವನ್ನು ಧರಿಸಿ ಗುರುಕುಲದಲ್ಲಿ ವೇದಾಧ್ಯಯನ ಮಾಡಬೇಕು. ||೩||

ಆತ್ಮಜ್ಞಾನ ಪ್ರಾಪ್ತಿಗಾಗಿ ಬ್ರಹ್ಮಚರ್ಯ ವ್ರತ ಪಾಲಿಸುವವನು ಮರಣ ಪರ್ಯಂತ ಗುರುಕುಲದಲ್ಲಿಯೇ ಇರಬೇಕು. ಮುಂದೆ ಗೃಹಸ್ಥನಾಗಬಯಸುವನು ಹನ್ನೆರಡು ವರ್ಷ ಮಾತ್ರ ಗುರುಕುಲದಲ್ಲಿದ್ದು ವೇದಾಧ್ಯಯನ ಮಾಡಬೇಕು ||೪||

ಷಡಂಗ ಸಹಿತ ವೇದಾಧ್ಯಯನವನ್ನು ಮಾಡಿ, ಯಥಾಮತಿ ಶಾಸ್ತ್ರಗಳನ್ನು ಕಲಿತು, ತನ್ನ ಜಾತಿಯ ಸತ್ಕುಲ ಪ್ರಸೂತಳಾದ ಗುಣವತಿಯಾದ ಕನ್ಯೆಯನ್ನು ವಿವಾಹವಾಗಬೇಕು. ||೫||

ಗುರುಗಳನ್ನೇ ಪರಮಾತ್ಮನೆಂದು ತಿಳಿದು ಸದಾಚಾರ ನಿಷ್ಠನಾಗಿ ಅವರನ್ನು ಸೇವಿಸುತ್ತ ಅವರಿಂದ ಭಾಗವತ ಧರ್ಮಗಳನ್ನೂ, ತಂತ್ರಶಾಸ್ತ್ರೋಕ್ತವಾದ ವಿಷ್ಣು ಮಂತ್ರವನ್ನು ಷಡಂಗನ್ಯಾಸದೊಂದಿಗೆ ಸಮಗ್ರವಾಗಿ ತಿಳಿದುಕೊಳ್ಳಬೇಕು ವೇದಾಂತ ತತ್ತ್ವವನ್ನು ಅಭ್ಯಸಿಸುವ ಮೂಲಕ ಆತ್ಮಜ್ಞಾನವನ್ನು ಹೊಂದಿ ಗುರುಗಳ ಅಪ್ಪಣೆ ಪಡೆದು ಗೃಹಸ್ಥಾಶ್ರಮ ವನ್ನು ನಡೆಸಬೇಕು ಶ್ರೀಹರಿಗೆ ಸಂತೋಷಕರವಾದ ಶ್ರೌತಕರ್ಮ–ಸ್ಮಾರ್ತಕರ್ಮಗಳನ್ನು ಆಚರಿಸಬೇಕು. ತನಗೆ ಪ್ರಿಯವಾದ ಪರಿವಾರವನ್ನೂ ತನ್ನ ಪ್ರಾಣಗಳನ್ನೂ ಪರಮಾತ್ಮನಿಗೆ ಸಮರ್ಪಿಸಬೇಕು. || ೬–೯ ||

ಶುಕ್ಲಕೃಷ್ಣ ಪಕ್ಷಗಳಲ್ಲಿ ಬರುವ ಎರಡೂ ಏಕಾದಶೀಗಳನ್ನು ಉಪವಾಸದಿಂದ ಆಚರಿಸಬೇಕು. ದ್ವಿಜೇತರರಿಗಾಗಿ ವಿಧಿಸಿರುವ ತಪ್ತಮುದ್ರೆಯನ್ನು ದ್ವಿಜನು ಯಾವಾಗಲೂ ಧರಿಸಬಾರದು. ||೧೦||

ಬದನೆಕಾಯಿ ಮೊದಲಾದವು ನಿಷಿದ್ಧವಾದ್ದರಿಂದ ಅವನ್ನು ಭಕ್ಷಿಸಬಾರದು. ತನಗೆ ಸಂಕಟವೊದಗಿದಾಗಲೂ ಸಹ ವಿಷ್ಣುಪೂಜೆಯನ್ನು ಮಾಡದೇ ಅನ್ನಾದಿಗಳನ್ನು ಸೇವಿಸಬಾರದು. ||೧೧||

ಸರ್ವಂ ವಿಷ್ಣುಮಯಂ ಪಶ್ಯೇದಾಶ್ವಚಂಡಾಲಗೋಖರಮ್ ।
ಭೂತದ್ರೋಹೇಣ ನಿರಯಂ ಯಾತಿ ಭಾಗವತೋಽಪಿ ಹಿ ॥೧೨॥

ತುಲಸೀಮಂಜರೀಭಿರ್ಯೋ ವಿಷ್ಣುಂ ಸಮಭಿಪೂಜಯೇತ್ ।
ತಾಂ ತಸ್ಯ ಭಗವಾನ್ ಪೂಜಾಂ ಗೃಹ್ಣಾತಿ ಪ್ರೀತಮಾನಸಃ ॥೧೩॥

ಮಹತೀಮಪ್ಯಪಚಿತಿಂ ವಿನಾ ಚ ತುಲಸೀದಲೈಃ ।
ಮನ್ಯತೇಽ ಲವಣಂ ಪಾಕಮಿವ ತಾರ್ಕ್ಷ್ಯನಿಕೇತನಃ ॥೧೪॥

ಸ್ವವರ್ಣಾಶ್ರಮಕರ್ಮಾಣಿ ಶ್ರೌತಸ್ಮಾರ್ತಾದಿಕಾನಿ ಯಃ ।
ನಿಷ್ಕಾಮಃ ಪ್ರೀತಯೇ ವಿಷ್ಣೋಃ ಕುರ್ಯಾದ್ಭಾಗವತೋ ಹಿ ಸಃ ॥೧೫॥

ಕಾಯೇನ ಮನಸಾ ಬುದ್ಧ್ಯಾ ಬಾಹ್ಯೈಶ್ಚ ಕರಣೈರಪಿ ।
ಯದ್ಯತ್ಕರೋತಿ ತತ್ಕರ್ಮ ಪರಸ್ಮೈ ವಿನಿವೇದಯೇತ್ ॥೧೬॥

ಸ್ವಕರ್ತೃತ್ವಂ ಪರಿತ್ಯಜ್ಯ ಫಲಸಂಕಲ್ಪವರ್ಜಿತಃ ।
ಕರ್ಮ ಕುರ್ಯಾದ್ಧರಿಪ್ರೀತ್ಯೈ ಸ ವೈ ಭಾಗವತಃ ಸ್ಮೃತಃ ॥೧೭॥

ಸಂಭವೇ ಸತಿ ವಿಷ್ಣೋರ್ಯಃ ಪ್ರಾಸಾದಾದಿಕಮುತ್ತಮಃ ।
ಕುರ್ಯಾದ್ವಾ ಕಾರಯೇದ್ವಾಽಪಿ ಪರಾನ್ ಪ್ರೇರ್ಯ ಪ್ರಯತ್ನತಃ॥೧೮॥

ನಿತ್ಯಪೂಜಾದಿಸಿದ್ಧ್ಯರ್ಥಮುತ್ಸವಾರ್ಥಂ ಚ ಪರ್ವಣಾಮ್ ।
ವೃತ್ತ್ಯಾದಿಕಂ ಶಾಶ್ವತಿಕಂ ಯಃ ಕರೋತಿ ಸ ವೈಷ್ಣವಃ ॥೧೯॥

ದೇವಬ್ರಾಹ್ಮಣವೃತ್ತೀನಾಮವರೋಧಂ ಕರೋತಿ ಯಃ ।
ಸ ವೈಷ್ಣವೋಽಪಿ ಪಾಪಿಷ್ಠೋ ರೌರವಂ ನರಕಂ ವ್ರಜೇತ್ ॥೨೦॥

ಶಿವಸ್ಯ ಹೃದಯಂ ವಿಷ್ಣುರ್ವಿಷ್ಣೋಶ್ಚ ಹೃದಯಂ ಶಿವಃ ।
ಅನಯೋರಂತರಂ ನಾಸ್ತಿ ಶಬ್ದತಶ್ಚಾರ್ಥತೋಽಪಿ ವಾ ॥೨೧॥

ಸತ್ಯೇವಂ ಯಃ ಶಿವದ್ವೇಷಂ ವೈಷ್ಣವಃ ಕುರುತೇ ಸದಾ ।
ಶೈವೋಽಪಿ ವಿಷ್ಣುವಿದ್ವೇಷಂ ನಿಷ್ಕೃತಿರ್ನ ತಯೋಃ ಕ್ವಚಿತ್ ॥೨೨॥

ಅಹಂ ದಕ್ಷೋ ಭೃಗುಶ್ಚಾಪಿ ಶಿವದ್ವೇಷಾದವಾಪ್ನುಮಃ ।
ಕ್ಲೇಶಂ ಮಹಾಂತಮನ್ಯೇಷಾಂ ದ್ರೋಹಿಣಾಂ ತತ್ರ ಕಾ ಕಥಾ ॥೨೩॥

ದೈತ್ಯೋ ಹಿರಣ್ಯಕಶಿಪುರ್ಬಾಣಸ್ತದ್ವಂಶಜೋಽಸುರಃ ।
ರಾಕ್ಷಸಾ ರಾವಣಾದ್ಯಾಶ್ಚ ವಿಷ್ಣುದ್ವೇಷಾತ್ ಕ್ಷಯಂ ಗತಾಃ ॥೨೪॥

ಚಂಡಾಲ – ಗೋವು – ಗರ್ದಭ – ನಾಯಿ ಮೊದಲಾದವೆಲ್ಲವೂ ವಿಷ್ಣುಮಯವೆಂದು ಅರಿಯಬೇಕು ಭೂತದ್ರೋಹವೆಸಗಿದವನು ಭಾಗವತನಾಗಿದ್ದರೂ ಸಹ ಆತನು ನರಕವನ್ನು ಹೊಂದುವನು ॥೧೨॥

ತುಳಸೀತರ್ನಗಳಿಂದ ಭಗವಾನ್ ಶ್ರೀಹರಿಯನ್ನು ಪೂಜಿಸಿದರೆ ಆ ಪೂಜೆಯನ್ನು ಸಂತುಷ್ಟನಾದ ಶ್ರೀಹರಿಯು ಅಂಗೀಕರಿಸುವನು. ॥೧೩॥

ತುಳಸೀದಳವಿಲ್ಲದೇ ಮಹಾಪೂಜೆಯನ್ನೇ ಆಚರಿಸಿದರೂ ಸಹ ಶ್ರೀಹರಿಯು ಅದನ್ನು ಉಪ್ಪಿಲ್ಲದ ಅಡಿಗೆಯಂತೆ ಮೆಚ್ಚನು. ॥೧೪॥

ತನ್ನ ವರ್ಣಾಶ್ರಮಕ್ಕೆ ಉಚಿತವಾದ ಶ್ರೌತಸ್ಮಾರ್ತಕರ್ಮಗಳನ್ನು ಫಲಾಪೇಕ್ಷೆಯಿಲ್ಲದೇ ಕೇವಲ ಶ್ರೀಹರಿ ಪ್ರೀತಿಗಾಗಿ ಮಾಡುವವನೇ ನಿಜವಾದ ಭಾಗವತನು. ॥೧೫॥

ದೇಹದಿಂದ – ಮನಸ್ಸಿನಿಂದ – ಬುದ್ಧಿಯಿಂದ – ಬಹಿರಿಂದ್ರಿಯಗಳಿಂದ ಮಾಡಿದ ಸಕಲ ಕರ್ಮಗಳನ್ನೂ ಶ್ರೀಹರಿಗೆ ನಿವೇದಿಸಬೇಕು ॥೧೬॥

ನಾನು ಮಾಡುವವನೆಂಬ ಅಭಿಮಾನವನ್ನು ತ್ಯಜಿಸಿ, ಫಲವಿಷಯಕವಾದ ಸಂಕಲ್ಪವನ್ನಾಚರಿಸದೇ ಶ್ರೀಹರಿ ಪ್ರೀತಿಗಾಗಿ ಕರ್ಮವನ್ನು ಮಾಡುವವನೇ ಭಾಗವತನು.॥೧೭॥

ತನಗೆ ಶಕ್ಯವಿದ್ದರೆ ಶ್ರೀಹರಿಗಾಗಿ ಬೃಹತ್ತಾದ ಪ್ರಾಸಾದಗಳನ್ನು ನಿರ್ಮಿಸಬೇಕು. ತನಗೆ ಅಸಾಧ್ಯವಾದಲ್ಲಿ ಬೇರೆಯವರನ್ನು ಪ್ರೇರೇಪಿಸಿ ಅವರಿಂದಲಾದರೂ ಮಾಡಿಸಬೇಕು. ॥೧೮॥

ನಿತ್ಯಪೂಜೆಗಾಗಿ ಹಾಗೂ ಪರ್ವಕಾಲಗಳ ವಿಶೇಷ ಮಹೋತ್ಸವಗಳಿಗಾಗಿ ಚಿರಸ್ಥಾಯಿಯಾದ ವ್ಯವಸ್ಥೆಗಳನ್ನು ಮಾಡುವವನೇ ವೈಷ್ಣವನೆನಿಸುತ್ತಾನೆ. ॥೧೯॥

ದೇವ–ದ್ವಿಜರ ವೃತ್ತಿಗಳನ್ನು ತಡೆಯುವವನು ವೈಷ್ಣವನಾಗಿದ್ದರೂ ಸಹ ಮಹಾಪಾಪಿಯಾಗಿ ರೌರವ ನರಕವನ್ನು ಹೊಂದುವನು ॥೨೦॥

ಪರಶಿವನ ಹೃದಯವೇ ಶ್ರೀಹರಿ. ಅದೇ ರೀತಿ ಶ್ರೀಹರಿಯ ಹೃದಯವೇ ಪರಶಿವ. ಇವರಿಬ್ಬರಲ್ಲಿ ಶಬ್ದದಿಂದಲೂ, ಅರ್ಥದಿಂದಲೂ ಯಾವ ಭೇದವೂ ಇರುವುದಿಲ್ಲ. ॥೨೧॥

ಆದ್ದರಿಂದ ವೈಷ್ಣವನು ಶಿವದ್ವೇಷವನ್ನೂ, ಶೈವನು ವಿಷ್ಣುದ್ವೇಷವನ್ನೂ ಮಾಡಿದರೆ ಅವರಿಬ್ಬರ ಪಾಪಕ್ಕೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಶಂಕರನನ್ನು ದ್ವೇಷಿಸಿದ ಕಾರಣ ನಾನು (ಬ್ರಹ್ಮ) ದಕ್ಷ – ಭೃಗುಮುನಿ – ಅತ್ಯಂತ ಕಷ್ಟವನ್ನು ಹೊಂದಿದ್ದೇವೆಂದ ಮೇಲೆ ಬೇರೆ ದ್ರೋಹಿಗಳ ಪಾಡೇನು? ॥ ೨೨–೨೩ ॥

ದೈತ್ಯರಾಜನಾದ ಹಿರಣ್ಯಕಶಿಪು – ಬಾಣಾಸುರ – ಆತನ ವಂಶದವರು ಹಾಗೂ ರಾಕ್ಷಸರಾದ ರಾವಣ ಮೊದಲಾದವರು ಮಹಾವಿಷ್ಣುವನ್ನು ದ್ವೇಷಿಸಿ ವಿನಾಶವನ್ನು ಹೊಂದಿದರು. ॥೨೪॥

ತಸ್ಮಾನ್ನಾನ್ಯತರದ್ವೇಷಂ ಕುರ್ವನ್ನನ್ಯತರಪ್ರಿಯಃ ।
ಶೈವೋ ವಾ ವೈಷ್ಣವೋ ವಾಪಿ ಶಾಶ್ವತೀಂ ಗತಿಮಾಪ್ನುಯಾತ್ ॥೨೫॥

ಶ್ರುತಯಃ ಸ್ಮೃತಯಶ್ಚಾಪಿ ಪುರಾಣಾನ್ಯಾಗಮಾ ಅಪಿ ।
ಶಿವಂ ವಿಷ್ಣುಂ ಚ ಸರ್ವೇಶಂ ಪ್ರವದಂತಿ ಹ್ಯಭೇದತಃ ॥೨೬॥

ತೇಷಾಂ ತಾತ್ಪರ್ಯಮಜ್ಞಾತ್ವಾ ಮೂಢಾಃ ಪಂಡಿತಮಾನಿನಃ ।
ಯಥೇಷ್ಟಂ ಕಲಹಾಯಂತೇ ವಾವದೂಕಾ ದುರೂಹತಃ ॥೨೭॥

ತೇಷಾಂ ಪಾಷಂಡಿನಾಂ ಜಾತು ಸಂಸರ್ಗಂ ನಾಚರೇದ್ಬುಧಃ ।
ಸ ಏವ ವೈಷ್ಣವೋ ಜ್ಞೇಯಃ ಪಾಷಂಡೀ ನೈವ ವೈಷ್ಣವಃ ॥೨೮॥

ಶಾಂಭವಾ ವೈಷ್ಣವಾಃ ಸೌರಾಃ ಶಾಕ್ತಾ ಅಪಿ ಚ ಗಾಣಪಾಃ ।
ಜೀವಬ್ರಹ್ಮೈಕ್ಯನಿಷ್ಠಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥೨೯॥

ವರ್ಷೇ ವರ್ಷೇ ಪ್ರಕುರ್ವೀತ ಯೋ ದೇವಸ್ಯ ರಥೋತ್ಸವಮ್ ।
ಯಥಾಗಮಂ ಯಥಾಶಕ್ತಿ ಸ ಭಕ್ತಃ ಶ್ರೀಹರೇಃ ಪ್ರಿಯಃ ॥೩೦॥

ವಿಷ್ಣುನೈವೇದ್ಯಭೋಜೀ ಚ ವಿಷ್ಣುನಾಮ ಸದಾ ಪಠನ್ ।
ಧ್ಯಾಯನ್ ತಮೇವ ಯೋ ನಿತ್ಯಂ ವಿಹರೇತ್ಸ ಹಿ ವೈಷ್ಣವಃ ॥೩೧॥

ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
ವಿಷ್ಣುಧ್ಯಾನರತೋ ನಿತ್ಯಂ ವೈಷ್ಣವಾಖ್ಯಂ ಲಭೇತ ಸಃ ॥೩೨॥

ದುರಾಚಾರಂ ದುರಾಲಾಪಂ ದುರನ್ನಂ ದುಷ್ಪ್ರತಿಗ್ರಹಮ್ ।
ದುಃಸಂಗಂ ಚ ನಕುರ್ಯಾದ್ಯಃ ಸ ವೈ ಭಾಗವತಾಗ್ರಣೀಃ ॥೩೩॥

ಚಾತುರ್ಮಾಸ್ಯವ್ರತಪರೋ ನಿರ್ಜಲೈಕಾದಶೀವ್ರತಃ ।
ವಿಪ್ರಸಂತರ್ಪಣಪರೋ ದ್ವಾದಶ್ಯಾಂ ಸ ಹರೇಃ ಪ್ರಿಯಃ ॥೩೪॥

ಯಸ್ಯ ಭೂತದಯಾ ನಾಸ್ತಿ ನಾಸ್ತಿ ಯಸ್ಯ ಪವಿತ್ರತಾ ।
ಸತ್ಯಂ ನಾಸ್ತಿ ಕ್ಷಮಾ ನಾಸ್ತಿ ವೇಷಧಾರೀ ಸ ವೈಷ್ಣವಃ ॥೩೫॥

ಹರಯೇ ನಂದದೀಪಂ ಯಃ ಸರ್ವಕಾಲಂ ಪ್ರಯಚ್ಛತಿ ।
ನಂದಂತಿ ಪಿತರಸ್ತಸ್ಯ ಸಂತತಿಶ್ಚಾಪಿ ನಂದತಿ ॥೩೬॥

ಕಾರ್ತಿಕೇ ಮಾಸಿ ಯೋ ವಿಷ್ಣೋಃ ಕುರ್ಯಾದ್ದೀಪೋತ್ಸವಂ ಸದಾ ।
ತಸ್ಯ ಪುಣ್ಯಫಲಂ ವಕ್ತುಂ ನೈವ ಶಕ್ನೋಮಿ ನಾರದ! ॥೩೭॥

ಆದ್ದರಿಂದ ಅವರಿಬ್ಬರಲ್ಲಿ ಒಬ್ಬರನ್ನು ಸೇವಿಸಿ ಇನ್ನೊಬ್ಬರನ್ನು ದ್ವೇಷಿಸದಿದ್ದರೆ ಆತ ವೈಷ್ಣವನಿರಲಿ–ಶೈವನಿರಲಿ ಅವನು ಪರಮ ಪದವನ್ನೇ ಹೊಂದುವನು. ||೨೫||

ಶ್ರುತಿಗಳು, ಸ್ಮೃತಿಗಳು, ಪುರಾಣಗಳು ಹಾಗೂ ಆಗಮಗಳೂ ಕೂಡ ಶಿವಶಂಕರರು ಸರ್ವಶ್ರೇಷ್ಠರೆಂದೂ, ಅವರಿಬ್ಬರಲ್ಲಿ ಭೇದವಿಲ್ಲವೆಂದೂ ಹೇಳುತ್ತವೆ.||೨೬||

ತಮ್ಮನ್ನು ಪಂಡಿತರಂದು ತಿಳಿದುಕೊಳ್ಳುವ ಕೆಲ ವಾಚಾಳಿಗಳು ದುಸ್ತರ್ಕದಿಂದ ಅವುಗಳ ತಾತ್ಪರ್ಯವರಿಯದೇ ತಮಗ ಹಿಡಿಸಿದಂತೆ ಅರ್ಥೈಸಿ ಕಲಹವೆಬ್ಬಿಸುತ್ತ ಇರುತ್ತಾರೆ ||೨೭||

ಈ ಪಾಷಂಡಿಗಳೊಡನೆ ತಿಳಿದವನು ಸರ್ವಥಾ ಸಂಬಂಧವಿರಿಸಿಕೊಳ್ಳಕೂಡದು. ಆತನೇ ನಿಜವಾದ ವೈಷ್ಣವನೆನಿಸುವನೇ ಹೊರತು ಪಾಷಂಡಿಗಳ ಸಂಸರ್ಗ ಮಾಡುವವನು ವೈಷ್ಣವನೆಂದು ಎಂದಿಗೂ ಅನಿಸಿಕೊಳ್ಳುವದಿಲ್ಲ. ಶೈವರು–ವೈಷ್ಣವರು–ಸೌರರು–ಶಾಕ್ತರು ಮತ್ತು ಗಾಣಪತ್ಯರು ಇವರಾರೂ ಜೀವಬ್ರಹ್ಮೈಕ್ಯವನ್ನು ತಿಳಿಸುವ ಅದ್ವೈತದಲ್ಲಿ ನಿಷ್ಠನಾದವನ ಹದಿನಾರನೆಯ ಒಂದಂಶವನ್ನೂ ಹೊಂದುವದಿಲ್ಲ. || ೨೮–೨೯ ||

ಪ್ರತಿವರ್ಷವೂ ಯಥಾ ಶಕ್ತಿ ಆಗಮವು ತಿಳಿಸಿದಂತೆ ಶ್ರೀಹರಿಯ ರಥೋತ್ಸವವನ್ನು ನಡೆಸುವವನು ಶ್ರೀಹರಿಗೆ ಪ್ರಿಯನಾದ ಭಕ್ತನೆನಿಸುತ್ತಾನೆ. ||೩೦||

ಶ್ರೀಹರಿಗೆ ಸಮರ್ಪಿಸಿದ ನೈವೇದ್ಯವನ್ನೇ ಪ್ರಸಾದವೆಂದು ಸೇವಿಸಿ, ಆತನ ನಾಮವನ್ನೇ ಪಠಿಸುತ್ತ ಆತನನ್ನೇ ಸತತ ಧ್ಯಾನಿಸುತ್ತ ಜೀವಿಸುವವನೇ ವೈಷ್ಣವ ||೩೧||

ಸಿಕ್ಕಷ್ಟರಿಂದಲೇ ಪರಮಸಂತುಷ್ಟನಾಗಿ, ದ್ವಂದ್ವ ಮೋಹ ವಿಮುಕ್ತನಾಗಿ, ಮಾತ್ಸರ್ಯವನ್ನು ತ್ಯಜಿಸಿ ಸತತ ಶ್ರೀವಿಷ್ಣುವಿನ ಧ್ಯಾನದಲ್ಲಿಯೇ ಆಸಕ್ತನಾದವನು 'ವೈಷ್ಣವ'ನೆಂಬ ಹೆಸರನ್ನು ಪಡೆಯುತ್ತಾನೆ. 'ದುರಾಚಾರ–ದುರ್ಭಾಷಣ–ದುರನ್ನಭಕ್ಷಣ – ದುರ್ದಾನ ಸ್ವೀಕಾರ – ದುಷ್ಟರ ಸಹವಾಸ', ಇವನ್ನು ಮಾಡದಿರುವವನೇ ಭಾಗವತೋತ್ತಮನು. || ೩೨–೩೩ ||

ಚಾತುರ್ಮಾಸ್ಯವ್ರತವನ್ನಾಚರಿಸಿ ನಿರ್ಜಲೈಕಾದಶೀವ್ರತವನ್ನು ಕೈಗೊಂಡು ದ್ವಾದಶಿಯಂದು ವಿಪ್ರಸಂತರ್ಪಣೆ ನಡೆಸುವವನು ಶ್ರೀಹರಿಗೆ ಪರಮಪ್ರಿಯನು. ||೩೪||

ಭೂತದಯೆ – ಪಾವಿತ್ರ್ಯ – ಸತ್ಯನುಡಿ – ಕ್ಷಮೆ – ಇವುಗಳಿಲ್ಲದವ ವೇಷಧಾರಿಯಾದ ವೈಷ್ಣವನೆನಿಸುತ್ತಾನೆ. ||೩೫||

ಸದಾಕಾಲ ಶ್ರೀಹರಿಗೆ ನಂದಾದೀಪವನ್ನು ನೀಡುವವನ ಪಿತೃಗಳು, ಅವನ ಸಂತತಿಗಳೂ ಸರ್ವದಾ ಸಂತುಷ್ಟರಾಗಿರುವರು. ||೩೬||

ವತ್ಸ ನಾರದ! ಕಾರ್ತಿಕ ಮಾಸದಲ್ಲಿ ಪ್ರತಿದಿನ ಶ್ರೀಮಹಾವಿಷ್ಣುವಿನ ದೀಪೋತ್ಸವವನ್ನು ನಡೆಸುವವನ ಪುಣ್ಯಫಲವನ್ನು ಹೇಳಲು ನಾನು ಸಮರ್ಥನಲ್ಲ. ||೩೭||

ಸಂಸಾರೇಽಸ್ಮಿನ್ನಸಾರೇ ಚ ಸಾರಮೇತಚ್ಚತುಷ್ಟಯಮ್ ।
ಅನ್ನದಾನಂ ದೀಪದಾನಂ ಸತ್ಸಂಗೋ ವಿಷ್ಣುಕೀರ್ತನಮ್ ॥೩೮॥

ಸಂಸಾರೇಽಸ್ಮಿನ್ನಸಾರೇ ಚ ಸಾರಮೇತಚ್ಚತುಷ್ಟಯಮ್ ।
ಕಾಶ್ಯಾಂ ವಾಸಃ ಸತಾಂ ಸಂಗೋ ಗಂಗಾಂಭಃ ಶಂಭುಪೂಜನಮ್॥೩೯॥

ಸಂಸಾರೇಽಸ್ಮಿನ್ನಸಾರೇ ಚ ಸಾರಮೇತಚ್ಚತುಷ್ಟಯಮ್ ।
ವಿರಕ್ತಿರ್ಹರಿಭಕ್ತಿಶ್ಚ ನಿರಹಂಕೃತಿರಾರ್ಜವಮ್ ॥೪೦॥

ಸರ್ವೋಪಾಯೈಃ ಸರ್ವಕಾಲಂ ಕಾಮಕ್ರೋಧಾದಿವರ್ಜನಾತ್ ।
ಯೋ ಭಜೇತ ಹರಿಂ ಭಕ್ತ್ಯಾ ಸ ಯುಕ್ತಃ ಸ ಚ ಪಂಡಿತಃ ॥೪೧॥

ಸಾ ವಿದ್ಯಾ ಪೂಜ್ಯತೇ ಸದ್ಭಿರ್ಯಯಾ ಸಂಸಾರಬಂಧನಾತ್ ।
ವಿಮುಚ್ಯೇತ ಸುಧೀರ್ಲೋಕೇ ವಿದ್ಯಾನ್ಯಾ ಶಿಲ್ಪನೈಪುಣಮ್ ॥೪೨॥

ಯಸ್ಯ ನಾಸ್ತಿ ಹರೌ ಭಕ್ತಿರ್ನೌಕಾ ಸಂಸಾರನೀರಧೇಃ ।
ಶ್ವಸನ್ ಮೃತಃ ಸ ವಿಜ್ಞೇಯಃ ಶಿಶ್ನೋದರಪರಾಯಣಃ ॥೪೩॥

ಪಶವಃ ಕಿಂ ನ ಜೀವಂತಿ ಜೀವಂತಿ ತರವೋ ನ ಕಿಮ್ ।
ಹರಿಭಕ್ತಿವಿಹೀನಸ್ಯ ಜೀವನಂ ತಾದೃಗೇವ ತತ್ ॥೪೪॥

ಸ್ರಾವಃ ಪಾತೋಽಥ ವಾ ತಸ್ಯಾಃ ಕಸ್ಮಾಜ್ಜಾತೋ ನ ನಾರದ! ॥
ದುರ್ಭಗಾಯಾಃ ಸುತೋ ಯಸ್ಯಾ ಜಾತಃ ಶ್ರೀಶಪರಾಙ್ಮುಖಃ ॥೪೫॥

ಸ್ವವರ್ಣಾಶ್ರಮಧರ್ಮೇಣ ಹೇತುಹೀನೇನ ಸಾಧುನಾ ।
ಹರ್ಯರ್ಪಿತೇನ ಶುದ್ಧೇನ ಚಿತ್ತಶುದ್ಧಿರ್ಹಿ ಜಾಯತೇ ॥೪೬॥

ಚಿತ್ತಶುದ್ಧ್ಯಾ ವಿವಿದಿಷಾ ಜಾಯತೇ ಶ್ರವಣಂ ತಯಾ ।
ಮನನಂ ತೇನ ಜಾಯೇತ ಧ್ಯಾನಂ ತೇನ ಸ್ಥಿರೀಭವೇತ್ ॥೪೭॥

ಸಾಕ್ಷಾತ್ಕೃತಿರ್ನಿದಿಧ್ಯಾಸಾತ್ತತಃ ಕೈವಲ್ಯಮಾಪ್ಯತೇ ।
ಜ್ಞಾನಾದೇವ ತು ಕೈವಲ್ಯಮಿತ್ಯೇವ ಶ್ರುತಿಡಿಂಡಿಮಃ ॥೪೮॥

ನಿರ್ಗುಣಬ್ರಹ್ಮಣಃ ಸಾಕ್ಷಾತ್ಕೃತೌ ಕರ್ಮ ನ ಕಾರಣಮ್ ।
ಕಾರಣಂ ತತ್ರ ವಿಷ್ಣೋರ್ವಾ ಭಕ್ತಿಃ ಶಂಭೋರಹೈತುಕೀ ॥೪೯॥

ಇದಂ ಕ್ರತುಪುರಂ ಕ್ಷೇತ್ರಂ ಕ್ಷೇತ್ರಾಣಾಮುತ್ತಮಂ ಸ್ಮೃತಮ್ ।
ಅತ್ರ ಸಿದ್ಧ್ಯಂತಿ ಕರ್ಮಾಣಿ ತಪಾಂಸಿ ಚ ತಪೋಧನ! ॥೫೦॥

ಬರಡಾದ ಈ ಸಂಸಾರದಲ್ಲಿ ''ಅನ್ನದಾನ–ದೀಪದಾನ–ಸತ್ಸಂಗ–ಹರಿಕೀರ್ತನ'' ಈ ನಾಲ್ಕು ಸಾರವತ್ತಾಗಿವೆ. ||೩೮||

ಮಗು ನಾರದ!, ಸಾರರಹಿತವಾದ ಈ ಸಂಸಾರದಲ್ಲಿ ಸಾರಭೂತವಾದವು ಇನ್ನೂ ನಾಲ್ಕು ಇವೆ ಅವು ''ಕಾಶೀವಾಸ – ಸತ್ಸಂಗ – ಗಂಗಾಜಲಪಾನ ಸ್ನಾನ – ಶ್ರೀಶಂಕರ ಪೂಜ '' ||೩೯||

ವಿರಕ್ತಿ–ಶ್ರೀಹರಿಭಕ್ತಿ–ನಿರಭಿಮಾನ–ಸರಳತ – ಈ ನಾಲ್ಕೂ ಸಹ ಸಂಸಾರದಲ್ಲಿ ಸಾರಯುತವಾಗಿವೆ. ||೪೦||

ಎಲ್ಲ ತರಹದ ಉಪಾಯಗಳಿಂದ ಯಾವಾಗಲೂ ಕಾಮಮೋಹಕ್ರೋಧಾದಿ ಗಳನ್ನು ತ್ಯಜಿಸಿ ಅನನ್ಯ ಭಕ್ತಿಯಿಂದ ಶ್ರೀಹರಿಯನ್ನು ಸೇವಿಸುವವನೇ ಯೋಗಿ. ಪಂಡಿತನೂ ಅವನೇ. ||೪೧||

ಲೋಕದಲ್ಲಿ ಸಂಸಾರ ಬಂಧನದಿಂದ ಪಂಡಿತರನ್ನು ಪಾರುಗೊಳಿಸುವ ವಿದ್ಯೆಯನ್ನೇ ನಿಜವಾದ ವಿದ್ಯೆಯೆಂದು ವಿವೇಕಿಗಳು ಗೌರವಿಸುವರು ಉಳಿದ ವಿದ್ಯೆಗಳು ಕೇವಲ ಕಲಾನೈಪುಣ್ಯ ಪ್ರದರ್ಶನಕ್ಕಾಗಿ ಇರುತ್ತವೆ ||೪೨||

ಸಂಸಾರ ಸಾಗರದಿಂದ ಸಂರಕ್ಷಿಸಲು ಹಡಗಿನಂತಿರುವ ಶ್ರೀಹರಿಭಕ್ತಿ ಇಲ್ಲದವನು ತನ್ನ ವ್ಯವಹಾರ ಹಾಗೂ ಉದರ ಪೋಷಣೆಗಳಲ್ಲಿಯೇ ಆಸಕ್ತನಾಗಿರುತ್ತಾನೆ ಆತನನ್ನು ಜೀವಂತವಿದ್ದೂ ಸತ್ತವನೆಂದೇ ತಿಳಿಯಬೇಕು ||೪೩||

ಪಶುಗಳೂ, ವೃಕ್ಷಗಳೂ, ಜೀವಂತವಾಗಿರುವುದಿಲ್ಲವೇ ? ಶ್ರೀಹರಿಭಕ್ತಿಯಿಲ್ಲದ ಮೂರ್ಖನ ಜೀವನವೂ ಸಹ ಪಶುವೃಕ್ಷಗಳಂತೆಯೇ ಇರುತ್ತದೆ. ||೪೪||

ಶ್ರೀ ಹರಿಭಕ್ತಿಯಿಲ್ಲದ ಪಾಪಿಯು ಹುಟ್ಟುವದಕ್ಕಿಂತ ಆತನ ತಾಯಿಗೆ ಗರ್ಭಸ್ರಾವ ಅಥವಾ ಪಾತವಾಗಿದ್ದರೇ, ಒಳ್ಳೆಯದಿತ್ತು. ||೪೫||

ವಿಹಿತವಾದ ಶುದ್ಧ ವರ್ಣಾಶ್ರಮ ಧರ್ಮವನ್ನು ಫಲಾಪೇಕ್ಷೆ ಇಲ್ಲದೇ ಆಚರಿಸಿ ಶ್ರೀಹರಿಗೆ ಅರ್ಪಿಸಿದರೆ ಅದರಿಂದ ಚಿತ್ತಶುದ್ಧಿಯುಂಟಾಗುತ್ತದೆ. ಚಿತ್ತಶುದ್ಧಿಯಿಂದ ವಿವಿದಿಷಾ ಉಂಟಾಗುವುದು. ಈ ವಿವಿದಿಷಾದಿಂದ ಶ್ರವಣವೂ, ಅದರಿಂದ ಮನನವೂ, ಸಂಭವಿಸುವುದು, ಮನನದಿಂದ ಧ್ಯಾನವು ಸ್ಥಿರವಾಗುತ್ತದೆ ||೪೬-೪೭||

ನಿಧಿಧ್ಯಾಸದಿಂದ ಆತ್ಮಸಾಕ್ಷಾತ್ಕಾರವಾಗಿ ಅದರಿಂದ ಮುಕ್ತಿ ಸಿಗುತ್ತದೆ. ಆದ್ದರಿಂದ ಜ್ಞಾನದಿಂದಲೇ ಮುಕ್ತಿಯೆಂದು ವೇದವೂ ಘೋಷಿಸುತ್ತಿದೆ. ||೪೮||

ನಿರ್ಗುಣ ಬ್ರಹ್ಮಸಾಕ್ಷಾತ್ಕಾರಕ್ಕೆ ಕರ್ಮವು ಕಾರಣವಲ್ಲ. ಶ್ರೀಹರಿಯಲ್ಲಿ ಅಥವಾ ಪರಶಿವನಲ್ಲಿ ಇರಿಸಿದ ನಿರ್ವ್ಯಾಜ ಭಕ್ತಿಯೇ ಕಾರಣ. ||೪೯||

ಮುನಿಪುಂಗವ! ನಾರದ! ಈ ಕ್ರತುಪುರ ಕ್ಷೇತ್ರವು ಎಲ್ಲ ಕ್ಷೇತ್ರಗಳಿಗಿಂತ ಶ್ರೇಷ್ಠ ವಾದದ್ದು. ಇಲ್ಲಿ ಮಾಡಿದ ಕರ್ಮಗಳು ಹಾಗೂ ತಪಸ್ಸುಗಳು ಸಿದ್ಧಿಸುವವು ||೫೦||

ಕ್ರತುನಾ ಮಮ ಪುತ್ರೇಣ ಕೃತಮತ್ರ ತಪೋ ಮಹತ್ ।
ತೇನ ಕ್ರತುಪುರಂ ಕ್ಷೇತ್ರಂ ತನ್ನಾಮ್ನಾ ಪ್ರಥಿತಂ ಭುವಿ ॥೫೧॥

ಗಂಗಾಯಾಂ ಹಿ ಯಥಾ ಪಲ್ಗುರ್ಗುಪ್ತಾ ವಹತಿ ನಿಮ್ನಗಾ ।
ತಥೈವಾಸ್ಮಿನ್ನಪಿ ಕ್ಷೇತ್ರೇ ನಿಮ್ನಗಾ ಗುಪ್ತಗಾಮಿನೀ ॥೫೨॥

ಯತ್ರ ನಾರಾಯಣೋ ವೀರೋ ಯತ್ರಾಸ್ತಿ ತ್ರ್ಯಂಬಕೇಶ್ವರಃ ।
ನರಸಿಂಹಶ್ಚ ಯತ್ರಾಸ್ತಿ ತಸ್ಮಾತ್ ಕ್ಷೇತ್ರಮಿದಂ ಮಹತ್ ॥೫೩॥

ವಿರಿಂಚಿವಚನಂ ಶ್ರುತ್ವಾ ನಾರದಾದ್ಯಾಸ್ತಪೋಧನಾಃ ।
ವಿಸ್ಮಿತಾ ಅಭವನ್ ಸರ್ವೇ ತದಾ ತಂ ಕ್ರತುಮಸ್ತುವನ್ ॥೫೪॥

ವಿಷ್ಣುಧರ್ಮಾನುಪಾದಿಶ್ಯ ಭಗವಾನ್ ಪದ್ಮಭೂರಿತಿ ।
ಬ್ರಹ್ಮಲೋಕಂ ಯಯೌ ಬ್ರಹ್ಮಾ ನತ್ವಾ ನಾರಾಯಣಂ ಪುನಃ ॥೫೫॥

**ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ**
**ಕ್ರತುಪುರಮಾಹಾತ್ಮ್ಯೇ**
**ಭಾಗವತಧರ್ಮಕಥನಂ ನಾಮ ಸಪ್ತಮೋಽಧ್ಯಾಯಃ**

ನನ್ನ ಸುತನಾದ ಕ್ರತುವು ಈ ಪುಣ್ಯಕ್ಷೇತ್ರದಲ್ಲಿ ಮಹಾತಪಸ್ಸನ್ನಾಚರಿಸಿದ ಕಾರಣ ಈ ಕ್ಷೇತ್ರವು ಕ್ರತುಪುರವೆಂದು ಭೂಮಿಯಲ್ಲಿ ಪ್ರಸಿದ್ಧವಾಯಿತು ॥೫೦॥

ಗಂಗಾನದಿಯಲ್ಲಿ ಫಲ್ಗುನದಿಯು ಗುಪ್ತವಾಗಿ ಹರಿಯುವಂತ ಈ ಕ್ಷೇತ್ರ ದಲ್ಲಿಯೂ ಸಹ ಗುಪ್ತಗಾಮಿನಿಯು ಪ್ರವಹಿಸುವುದು ॥೫೨॥

ಶ್ರೀವೀರನಾರಾಯಣನೂ, ಶ್ರೀತ್ರ್ಯಂಬಕೇಶ್ವರನೂ, ಶ್ರೀನೃಸಿಂಹನೂ ನಲಸಿರು- ವದರಿಂದ ಈ ಕ್ಷೇತ್ರವು ಅತ್ಯಂತ ಮಹತ್ವದ್ದಾಗಿದ ॥೫೩॥

ಈ ರೀತಿ ಬ್ರಹ್ಮದೇವನು ಹೇಳಿದ್ದನ್ನು ಕೇಳಿ ನಾರದಾದಿಮಹರ್ಷಿಗಳೆಲ್ಲ ಬಹಳ ವಿಸ್ಮಿತರಾಗಿ ಕ್ರತುಮುನಿಯನ್ನು ಪ್ರಶಂಸಿಸಿದರು ॥೫೪॥

ಬ್ರಹ್ಮದೇವನು ಭಾಗವತ ಧರ್ಮಗಳನ್ನು ಉಪದೇಶಿಸಿ ಪುನಃ ಪುನಃ ನಾರಾಯಣ ನನ್ನು ನಮಿಸಿ ಸತ್ಯಲೋಕಕ್ಕೆ ತೆರಳಿದನು ॥೫೫॥

ಶ್ರೀ ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿಯ
ಕ್ರತುಪುರ ಮಾಹಾತ್ಮ್ಯೆಯಲ್ಲಿ
ಭಾಗವತಧರ್ಮ ಕಥನವೆಂಬ ಏಳನೆಯ ಅಧ್ಯಾಯವು ಮುಗಿಯಿತು.

# ಅಥಾಷ್ಟಮೋಽಧ್ಯಾಯಃ

ಸೂತ ಉವಾಚ –

ಗತೇ ವಿರಿಂಚೌ ತತ್ರೈವ ನಾರದಾದ್ಯಾ ಮಹರ್ಷಯಃ ।
ಉಪವಿಷ್ಟಾಃ ಪ್ರಕುರ್ವಾಣಾಃ ಕಥಾಂ ಭಗವದಾಶ್ರಯಾಃ ॥೧॥

ತಥಾ ತೇಷೂಪವಿಷ್ಟೇಷು ನಾರದಾದಿಷು ಸಾಧುಷು ।
ವಿಸ್ಮಿತಾವಾಗತೌ ತತ್ರ ಬ್ರಾಹ್ಮಣೌ ಭ್ರಾತರಾವುಭೌ ॥೨॥

ಶಿವಶರ್ಮಾಗ್ರಜಸ್ತತ್ರ ವಿಷ್ಣುಶರ್ಮಾನುಜಸ್ತಥಾ ।
ತೌ ನತ್ವಾ ತಾನೃಷೀನ್ ಸರ್ವಾನುಪವಿಷ್ಟೌ ತದಾಜ್ಞಯಾ ॥೩॥

ತೌ ವಿವಕ್ಷೂ ಸಮಾಲೋಕ್ಯ ದೇವರ್ಷಿರ್ನಾರದಸ್ತದಾ ।
ತಾವಾಹ ಕಿಂ ವಿವಕ್ಷೂ ಸ್ಥ ಆಚಕ್ಷಾಥಾಮಶಂಕಿತೌ ॥೪॥

ಶಿವಶರ್ಮೋವಾಚ –

ಸಮಾನೋದರ್ಯಕಾವಾವಾಮತ್ರಿಗೋತ್ರಸಮುದ್ಭವೌ ।
ಭ್ರಾತರೌ ದೀರ್ಘತಪಸಃ ಪುತ್ರೌ ಶಿಷ್ಯೌ ಚ ತಸ್ಯ ಹಿ ॥೫॥

ಚತುರ್ದಶಸು ವಿದ್ಯಾಸು ಜನಕೇನೈವ ಶಿಕ್ಷಿತೌ ।
ಪಂಚತ್ವಮಾಪ್ತಯೋಃ ಪಿತ್ರೋರ್ವಿಭಕ್ತೌ ಸ್ವಾವುಭಾವಿಹ ॥೬॥

ತಥಾಪಿ ನಾವಯೋರ್ನಷ್ಟಂ ಸೌಭ್ರಾತ್ರಂ ಸಾಧುವೃತ್ತಯೋಃ ।
ಆಹಿತಾಗ್ನೀ ಉಭಾವಾವಾಂ ಶಿಷ್ಯಾನಧ್ಯಾಪಯಾವಹೇ ॥೭॥

ಶೈವೋಽಹಂ ವೈಷ್ಣವೋಽಯಂ ಹಿ ತತ್ರ ನಾವಾಗ್ರಹೋ ಮಹಾನ್ ।
ಶಿವಸರ್ವೋತ್ತಮ ತ್ವಂ ಸ ಖಂಡಯತ್ಯನುಜೋ ಮಮ ॥೮॥

ಶ್ರುತಿಸ್ಮೃತಿಬ್ರಹ್ಮಸೂತ್ರಮುಖ್ಯೈರ್ಮಾನೈರನೇಕಶಃ ।
ಮಯಾಽಪಿ ಖಂಡ್ಯತೇ ವಿಷ್ಣೋಃ ಸಾರ್ವೋತ್ತಮ್ಯಂ ತಥೈವ ಹಿ ॥೯॥

ವಿವಮಾಗ್ರಹಿಣೋರ್ನೌ ಹಿ ಮಹಾಕಾಲೋಽತ್ಯಗಾನ್ಮುನೇ!
ಸಿದ್ಧಾಂತಂ ನಾಪ್ನುವಃ ಕೋಽತ್ರ ದೇವಃ ಸರ್ವೋತ್ತಮಸ್ತ್ವಿತಿ ॥೧೦॥

ಭವಂತಂ ಪಾರದೃಶ್ವಾನಂ ಮನ್ಯೇ ಸಾರಸ್ವತಾಂಬುಧೇಃ ।
ಆವಯೋಃ ಸಂಶಯಂ ಛಿತ್ವಾ ನೌ ಸಮಾಧಾತುಮರ್ಹಸಿ ॥೧೧॥

# ಎಂಟನೆಯ ಅಧ್ಯಾಯ

**ಸೂತರು ಹೇಳಿದರು –**

ಬ್ರಹ್ಮದೇವನು ಸತ್ಯಲೋಕಕ್ಕೆ ತೆರಳಿದ ನಂತರ ಭಗವದ್ಭಕ್ತರಾದ ನಾರದರೇ ಮೊದಲಾದ ಮಹರ್ಷಿಗಳು ಶ್ರೀಹರಿಕಥೆಯನ್ನು ಮುಂದುವರಿಸಿಕೊಂಡು ಅಲ್ಲಿಯೇ ಕುಳಿತರು ॥೧॥

ಹೀಗೆ ನಾರದಾದಿ ಮಹರ್ಷಿಗಳು ಕುಳಿತಿದ್ದಾಗ ಆಶ್ಚರ್ಯಚಕಿತರಾಗಿದ್ದ ಅಣ್ಣತಮ್ಮಂದಿರಾದ ವಿಪ್ರರೀರ್ವರು ಅಲ್ಲಿಗಾಗಮಿಸಿದರು ॥೨॥

ಅವರಿಬ್ಬರಲ್ಲಿ ಶಿವಶರ್ಮನೆಂಬುವನು ಅಣ್ಣ, ವಿಷ್ಣುಶರ್ಮನೆಂಬುವನು ತಮ್ಮ. ಅವರಿಬ್ಬರೂ ಮುನಿಗಳನ್ನು ನಮಿಸಿ ಅವರ ಅನುಮತಿ ಪಡೆದು ಕುಳಿತರು ॥೩॥

"ಅವರಿಬ್ಬರೂ ಏನೋ ಕೇಳಬೇಕೆಂದಿರುವುದನ್ನು ಅರಿತ ನಾರದ ಮುನಿಗಳು ನಿಮಗೆ ಏನು ಹೇಳುವುದಿದೆಯೋ ಅದನ್ನು ನಿರ್ಭಯವಾಗಿ ಹೇಳಿರಿ" ಎಂದು ಹೇಳಿದರು. ॥೪॥

**ಶಿವಶರ್ಮನು ಹೇಳಿದನು –**

ನಾವೀರ್ವರೂ ದೀರ್ಘತಪನೆಂಬ ಮುನಿಯ ಕುಮಾರರು ಅತ್ರಿಗೋತ್ರದಲ್ಲಿ ಜನಿಸಿದ ಅಣ್ಣತಮ್ಮಂದಿರಾದ ನಾವಿಬ್ಬರು ತಂದೆಯ ಶಿಷ್ಯರಾಗಿ ಅವರಿಂದಲೇ ಹದಿನಾಲ್ಕು ವಿದ್ಯೆಗಳನ್ನು ಕಲಿತೆವು. ತಂದೆಯು ಮರಣ ಹೊಂದಿದ ಮೇಲೆ ನಾವಿಬ್ಬರೂ ಆಸ್ತಿಯನ್ನು ವಿಭಾಗ ಮಾಡಿಕೊಂಡಿದ್ದೇವೆ ॥೫–೬॥

ಆದರೂ ಸದಾಚಾರಿಗಳಾದ ನಮ್ಮೀರ್ವರ ಭ್ರಾತೃತ್ವವು ಹಾಳಾಗದೆ ಸೌಮನಸ್ಯದಿಂದ ಇದ್ದೇವೆ. ಅಗ್ನಿಹೋತ್ರಿಗಳಾದ ನಾವಿಬ್ಬರೂ ಶಿಷ್ಯರಿಗೆ ಪಾಠವನ್ನು ಹೇಳುತ್ತಿದ್ದೇವೆ. ॥೭॥

ನಾನು ಶೈವನಾದರೆ ನನ್ನ ತಮ್ಮ ವಿಷ್ಣುಶರ್ಮನು ವೈಷ್ಣವನು ನಮ್ಮಿಬ್ಬರಲ್ಲಿ ಬಹುದೊಡ್ಡ ಆಗ್ರಹವೊಂದಿದೆ. ನನ್ನ ತಮ್ಮ ಶಿವಸರ್ವೋತ್ತಮತ್ವವನ್ನು ಖಂಡಿಸುವನು. ನಾನೂ ಸಹ ಶ್ರುತಿ – ಸ್ಮೃತಿ – ಬ್ರಹ್ಮಸೂತ್ರ ಮೊದಲಾದ ಪ್ರಮಾಣಗಳಿಂದ ವಿಷ್ಣುಸರ್ವೋತ್ತಮತ್ವವನ್ನು ಖಂಡಿಸುತ್ತೇನೆ. ॥೮–೯॥

ಹೀಗೆ ನಾವಿಬ್ಬರೂ ಈ ಆಗ್ರಹದಲ್ಲಿಯೇ ಬಹಳ ಸಮಯ ಹಾಳು ಮಾಡಿದ್ದೇವೆ. ಆದರೂ ಸಹ ಯಾವ ದೇವನು ಸರ್ವೋತ್ತಮನೆಂದು ನಿರ್ಧರಿಸಲು ನಮ್ಮಿಂದಾಗಲಿಲ್ಲ. ತಾವು ಸಕಲಶಾಸ್ತ್ರ ಪಾರಂಗತರಾಗಿರುವಿರಿ. ಕಾರಣ ನಮ್ಮೀರ್ವರ ಸಂಶಯವನ್ನು ಪರಿಹರಿಸಿ ಯೋಗ್ಯ ಸಮಾಧಾನ ತಿಳಿಸಲು ತಾವೇ ಸಮರ್ಥರಿರುವಿರಿ. ॥೧೦–೧೧॥

ಏವಂ ತದ್ವಾಕ್ಯಮಾಕರ್ಣ್ಯ ನಾರದೋ ದೇವದರ್ಶನಃ ।
ವಕ್ತುಂ ತಾವುಪಚಕ್ರಾಮ ಮುನೀನಾಂ ತತ್ರ ಶೃಣ್ವತಾಮ್ ॥೧೨॥

ನಾರದ ಉವಾಚ —

ಯುವಾಮಾಗ್ರಹಮುತ್ಸೃಜ್ಯ ಜಿಜ್ಞಾಸೂ ಭವತೋ ಯದಿ ।
ತರ್ಹಿ ವಾಮುಪದೇಕ್ಷ್ಯಾಮಿ ತತ್ತ್ವಂ ಯತ್ಪಾರಮಾರ್ಥಿಕಮ್ ॥೧೩॥

ವಿನೇತುಂ ಶಕ್ಯತೇ ನೈವ ವಿದ್ವಾನಪಿ ದುರಾಗ್ರಹೀ ।
ಮುಮುಕ್ಷುರೇವ ವೇದಾಂತಶಾಸ್ತ್ರೇಽಧಿಕ್ರಿಯತೇ ಯತಃ ॥೧೪॥

ಭ್ರಾತರಾವೂಚತುಃ —

ಆವಾಂ ದುರಾಗ್ರಹಂ ತ್ಯಕ್ತ್ವಾ ಭವಂತಂ ಶರಣಂ ಗತೌ ।
ಶಾಧಿ ನೌ ಭಗವನ್ ಶಿಷ್ಯೌ ತ್ವಂ ಹಿ ನೌ ಪರಮೋ ಗುರುಃ ॥೧೫॥

ಏವಂ ತಯೋಃ ಪ್ರಾರ್ಥಯತೋಃ ಪಶ್ಚಾತ್ತಾಪೇನ ಯುಕ್ತಯೋಃ ।
ಚಕಾರಾನುಗ್ರಹಂ ಪ್ರೀತಃ ಪರಮರ್ಷಿಃ ಸ ನಾರದಃ ॥೧೬॥

ನಾರದ ಉವಾಚ —

ಯದೇಕಂ ನಿಷ್ಕಲಂ ನಿತ್ಯಂ ನಿರವದ್ಯಂ ನಿರಂಜನಮ್ ।
ಸರ್ವಧರ್ಮವಿಹೀನಂ ಚ ಸಚ್ಚಿದಾನಂದವಿಗ್ರಹಮ್ ॥೧೭॥

ತದೇವ ಮಾಯೋಪಹಿತಂ ಸಗುಣಂ ಬ್ರಹ್ಮ ಗೀಯತೇ ।
ಅವಿದ್ಯೋಪಾಧಿಕಾಸ್ತಸ್ಯ ಜೀವಾ ಆಭಾಸಕಾಃ ಶ್ರುತಾಃ ॥೧೮॥

ಅಗ್ನೇರ್ಯಥಾ ವಿಸ್ಫುಲಿಂಗಾಸ್ತಥಾ ಜೀವಾಃ ಪರಾತ್ಮನಃ ।
ಸೃಷ್ಟಿಕಾಲೇ ವ್ಯುಚ್ಚರಂತಿ ಯಥಾಕರ್ಮ ಯಥಾಶ್ರುತಮ್ ॥೧೯॥

ಮಾಯಾಗುಣೋಪಾಧಿಭೇದಾದೇಕೋಽಪಿ ಪರಮೇಶ್ವರಃ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಜಾಯತೇ ಕರ್ಮಸಿದ್ಧಯೇ ॥೨೦॥

ಸೃಷ್ಟಿಂ ರಜೋಗುಣೇ ಬ್ರಹ್ಮಾ ವಿಧತ್ತೇಽನೇಕರೂಪಿಣೀಮ್ ।
ವಿಷ್ಣುಃ ಸತ್ತ್ವಗುಣೋಪಾಧಿಃ ಪಾತಿ ನಾನಾವತಾರಭೃತ್ ॥೨೧॥

ರುದ್ರಸ್ತಮೋಗುಣೇ ಸರ್ವಂ ಜಗದ್ಗ್ರಸತಿ ಸಂಕ್ಷಯೇ ।
ಸೃಷ್ಟ್ಯಾದಿಕಾರ್ಯಮಖಿಲಮನಾದಿ ಶ್ರುತಯೋ ಜಗುಃ ॥೨೨॥

ಈ ಮಾತನ್ನು ಕೇಳಿ ಆತ್ಮಜ್ಞಾನಿಗಳಾದ ನಾರದ ಮಹರ್ಷಿಗಳು ಅವರಿಬ್ಬರಿಗೂ ಸಮಾಧಾನ ಹೇಳಲಾರಂಭಿಸಿದರು ಅಲ್ಲಿದ್ದ ಮುನಿಗಳೂ ಸಹ ಕುತೂಹಲದಿಂದ ಕೇಳುತ್ತಿದ್ದರು ||೧೨||

ನಾರದರು ಹೇಳಿದರು –

ನೀವಿಬ್ಬರೂ ಆಗ್ರಹವನ್ನು ಬಿಟ್ಟು ಜಿಜ್ಞಾಸುಗಳಾದರ ಪಾರಮಾರ್ಥಿಕವಾದ ತತ್ತ್ವವೇನೆಂದು ನಾನು ಉಪದೇಶಿಸುವೆ. ||೧೩||

ಪಂಡಿತನಾಗಿದ್ದರೂ ಸಹ ಆತ ದುರಾಗ್ರಹಿಯಾಗಿದ್ದರೆ ಅವನಿಗ ಸಮಾಧಾನ ಹೇಳುವುದು ಅಶಕ್ಯವೇ ಸರಿ ಯಾಕೆಂದರೆ ಮುಮುಕ್ಷುವು ಮಾತ್ರ ವೇದಾಂತ ತತ್ತ್ವವನ್ನರಿಯಲು ಅಧಿಕಾರಿಯಾಗಿರುತ್ತಾನ. ||೧೪||

ಸೋದರರು ಹೇಳಿದರು –

ಭಗವನ್ನಾರದ ಮುನಿಗಳೇ! ನಾವಿಬ್ಬರೂ ದುರಾಗ್ರಹವನ್ನು ಬಿಟ್ಟು ನೀವೇ ನಮ್ಮ ಗುರುವರ್ಯರೆಂದು ಶರಣು ಬಂದಿದ್ದೇವ ನಿಮ್ಮ ಶಿಷ್ಯರಾಗಿದ್ದೇವ ನಮಗ ತತ್ತ್ವವನ್ನು ಉಪದೇಶಿಸಿರಿ ||೧೫||

ಈ ರೀತಿ ತಮ್ಮ ವರ್ತನಗ ಪಶ್ಚಾತ್ತಾಪ ಪಟ್ಟು ಪರಿತಪಿಸುತ್ತ ಪ್ರಾರ್ಥಿಸುತ್ತಿದ್ದ ಅವರಿಬ್ಬರನ್ನು ಪರಮಪ್ರೀತರಾದ ನಾರದ ಮಹರ್ಷಿಗಳು ಅನುಗ್ರಹಿಸಿದರು ||೧೬||

ನಾರದರು ಹೇಳಿದರು –

ನಿಷ್ಕಲವೂ ಶಾಶ್ವತವೂ ನಿರಂಜನವೂ ಆದ ಅದ್ವಿತೀಯ ವಸ್ತುವೊಂದಿದ. ಅದಕ್ಕ ಯಾವ ಧರ್ಮದ ಸಂಬಂಧವೂ ಇರುವುದಿಲ್ಲ. ಅನಿರ್ದ್ಯವಾದ ಅದು ಸಚ್ಚಿದಾನಂದ ಸ್ವರೂಪವಾಗಿದೆ. ಅದನ್ನೇ "ಬ್ರಹ್ಮ" ಎಂದು ಹೇಳಲಾಗಿದೆ ಅದೇ ಮಾಯೋಪಹಿತವಾದಾಗ ಸಗುಣವೆನಿಸುವದು. ಅದರ ಉಪಾಧಿಯು ಅವಿದ್ಯ. ಅದರಿಂದಲೇ ಈ ಜೀವರು ಉತ್ಪನ್ನರಾಗಿವರು. ||೧೭–೧೮||

ಅಗ್ನಿಯಿಂದ ಕಿಡಿಗಳೇಳುವಂತೆ ಪರಮಾತ್ಮನಿಂದ ಈ ಜೀವರಾಶಿಯು ಜನ್ಮವೆತ್ತಿದೆ. ಅವರವರ ಕರ್ಮಾನುಸಾರ ಸೃಷ್ಟಿಕಾಲದಲ್ಲಿ ಮೇಲೇಳುವರು. ||೧೯||

ಪರಮಾತ್ಮನೊಬ್ಬನೇ ಆಗಿದ್ದರೂ ಸಹ ಅವಿದ್ಯಾಪ್ರಭಾವದ ದೆಸೆಯಿಂದ ತಮ್ಮ ತಮ್ಮ ಕಾರ್ಯನಿರ್ವಹಿಸುವ 'ಬ್ರಹ್ಮಾ–ವಿಷ್ಣು ಹಾಗೂ ಮಹೇಶ್ವರ' ಎಂಬ ಹೆಸರುಗಳಿಂದ ಪ್ರಸಿದ್ಧನಾಗುವನು. ||೨೦||

ರಜೋಗುಣಯುತನಾಗಿ ಬ್ರಹ್ಮದೇವನು ಅನೇಕ ರೂಪವಾದ ಈ ಜಗತ್ತನ್ನು ಸೃಷ್ಟಿಸುತ್ತಾನೆ. ಸತ್ತ್ವಗುಣವನ್ನು ಹೊಂದಿದ ಮಹಾವಿಷ್ಣುವು ವಿವಿಧಾವತಾರಗಳನ್ನು ತಾಳಿ ಈ ಜಗತ್ತನ್ನು ಸಂರಕ್ಷಿಸಿದರೆ ಶಂಕರನು ತಮೋಗುಣವನ್ನಾಶ್ರಯಿಸಿ ಈ ಜಗತ್ತನ್ನು ಉಪಸಂಹರಿಸುವನು. ಸುಪ್ರಸಿದ್ಧವಾದ 'ಸೃಷ್ಟಿ–ಸ್ಥಿತಿ–ಲಯ' ಕಾರ್ಯಗಳು ಅನಾದಿ ಯಾಗಿಯೇ ಇವೆ ಎಂದು ವೇದಗಳು ತಿಳಿಸುತ್ತಿವ. ||೨೧–೨೨||

ಜಾತಂ ಚ ಜಾಯಮಾನಂ ಚ ಜನಿಷ್ಯದಪಿ ಯಜ್ಜಗತ್ ।
ಸರ್ವಂ ಮಾಯಿಕಮೇವೇತಿ ಜಾನೀತಂ ಬ್ರಾಹ್ಮಣೌ ಯುವಾಮ್ ॥೨೩॥

ಜಪಾಕುಸುಮಸಾನ್ನಿಧ್ಯಾತ್ ಸ್ಫಟಿಕೋ ದೃಶ್ಯತೇಽರುಣಃ ।
ಸ್ಫಟಿಕೇಽರುಣಿಮಾ ಸೋಽಯಮುಪಾಧಿಕೃತ ಏವ ಹಿ ॥೨೪॥

ಏವಂ ಬ್ರಹ್ಮಣ್ಯನಿರ್ದೇಶ್ಯೇ ಜೀವೇಶಾದ್ಯಖಿಲಂ ಜಗತ್ ।
ದೃಶ್ಯತೇ ಮಾಯಿಕಂ ತೇನ ಮುಹ್ಯಂತಿ ಜ್ಞಾನಿನೋಽಪಿ ಹಿ ॥೨೫॥

ಏಕೋ ದೇವಃ ಸರ್ವಭೂತೇಷು ಗೂಢಃ
ಸರ್ವವ್ಯಾಪೀ ಸರ್ವಭೂತಾಂತರಾತ್ಮಾ ।
ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ
ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥೨೬॥

ರೂಪಂ ರೂಪಂ ಪ್ರತಿರೂಪೋ ಬಭೂವ
ತದಸ್ಯ ರೂಪಂ ಪ್ರತಿಚಕ್ಷಣಾಯ ।
ಇಂದ್ರೋ ಮಾಯಾಭಿಃ ಪುರುರೂಪ ಈಯತ
ಇತ್ಯಾಮ್ನಾಯಾ ಆಮನಂತ್ಯೇಕಮೀಶಮ್ ॥೨೭॥

ತಮೇಕಮೀಶ್ವರಂ ಶೈವಾಃ ಶಿವ ಇತ್ಯಾಹುರಾಗ್ರಹಾತ್
ವೈಷ್ಣವಾ ವಿಷ್ಣುರಿತ್ಯಾಹುರಾಗ್ರಹಾನ್ನತು ತತ್ತ್ವತಃ ॥೨೮॥

ತಸ್ಯಾವತಾರಾ ದೇವಸ್ಯ ಬ್ರಹ್ಮವಿಷ್ಣುಮಹೇಶ್ವರಾಃ ।
ತುಲ್ಯಮೀಶತ್ವಮೇತೇಷು ನ್ಯೂನಾಧಿಕ್ಯಂ ನ ವಿದ್ಯತೇ ॥೨೯॥

ಅಯಂ ಪರಸ್ತ್ವಯಂ ನೇತಿ ಸಂರಂಭಾವಿಷ್ಟಚೇತಸಃ ।
ಯಾತುಧಾನಾ ಭವಂತ್ಯೇವ ಪಿಶಾಚಾ ವಾ ನ ಸಂಶಯಃ ॥೩೦॥

ಬ್ರಹ್ಮಾಣಂ ವಾ ಹರಿಂ ವಾಪಿ ಶಿವಂ ವಾ ಮೂಢಬುದ್ಧಯಃ ।
ಜೀವಮುಕ್ತಮಮಾಯುರ್ಯೇ ಚಂಡಾಲಾಸ್ತು ತ ಏವ ಹಿ ॥೩೧॥

ತಸ್ಮಾತ್ತ್ರಯಾಣಾಂ ದೇವಾನಾಮೇಕಂ ಸ್ವಾಭಿಮತಂ ಶ್ರಯೇತ್ ।
ನಾನ್ಯಾಭ್ಯಾಂ ಸರ್ವಥಾ ದ್ರುಹ್ಯಾತ್ ಶ್ರುತಿತಾತ್ಪರ್ಯವಿದ್ಬುಧಃ ॥೩೨॥

ನಿರ್ಹೇತುಭಿಃ ಸ್ವಾಚರಿತೈಃ ಸ್ವವರ್ಣಾಶ್ರಮಕರ್ಮಭಿಃ ।
ಶ್ರುತ್ಯುಕ್ತಾಭಿರುಪಾಸಾಭಿಸ್ತಾಂತ್ರಿಕೀಭಿಶ್ಚ ವಾಽರ್ಚಯೇತ್ ॥೩೩॥

ಬ್ರಾಹ್ಮಣ ಸೋದರರರೇ! ಹುಟ್ಟಿದ, ಹುಟ್ಟುತ್ತಿರುವ ಹಾಗೂ ಮುಂದೆ ಹುಟ್ಟಿ ಬಹುದಾದ ಜಗತ್ತೆಲ್ಲ ಮಾಯಾಮಯವೆಂದು ತಿಳಿಯಿರಿ ॥೨೩॥

ಸ್ಫಟಿಕದಡೆ ದಾಸವಾಳದ ಹೂವನ್ನು ಹಿಡಿದರೆ ಸ್ಫಟಿಕ ಶಿಲೆಯು ಕೆಂಬಣ್ಣವಾಗಿ ತೋರುವುದು ಆದರೆ ಆ ಕೆಂಪು ಬಣ್ಣವು ದಾಸವಾಳದ ಉಪಾಧಿಯಿಂದಾಗಿ ಮಾತ್ರ ತೋರುವುದು. ॥೨೪॥

ಇದೇ ರೀತಿ ಅನಿರ್ವಚನೀಯವಾದ ಬ್ರಹ್ಮವಸ್ತುವಿನಲ್ಲಿಯೂ ಸಹ ಮಾಯೆಯ ಉಪಾಧಿಯಿಂದ ಜೀವರು ಜಗತ್ತು ಈ ಎಲ್ಲವೂ ತೋರುವುದು ಈ ಜಗತ್ತಿನಲ್ಲಿ ಜ್ಞಾನಿಗಳೂ ಸಹ ಮೋಹಗೊಳ್ಳುವರು ॥೨೫॥

ಪರಮಾತ್ಮನು ಓರ್ವನೇ ಆಗಿದ್ದು ಆತ ಸರ್ವವ್ಯಾಪಿಯಾಗಿ ಸಕಲಜೀವಿಗಳ ಹೃದಯಸ್ಥನಾಗಿ ಅವುಗಳ ಕರ್ಮಗಳನ್ನು ಪರಿಶೀಲಿಸುವ ಸಾಕ್ಷಿಯೂ ಜ್ಞಾನಸ್ವರೂಪನೂ, ನಿಸ್ಸಂಗನೂ ನಿರ್ಗುಣನೂ ಆಗಿ ವಿರಾಜಿಸುವನು ॥೨೬॥

ಕನ್ನಡಿಯಲ್ಲಿ ಪ್ರತಿಬಿಂಬವು ಪ್ರತಿಫಲಿಸುವಂತೆ ಬಿಂಬರೂಪನಾದ ಪರಮಾತ್ಮನ ಚಿತ್ಕಳೆಯೇ ಜೀವರಲ್ಲಿ ಪ್ರತಿಫಲಿಸುತ್ತದೆಯೆಂದು 'ರೂಪಂ ರೂಪಂ' ಎಂಬ ವೇದಾಂತ ಪ್ರಸಿದ್ಧವಾದ ವೇದವಾಕ್ಯವು ಪರಮಾತ್ಮನನ್ನು ಸ್ತುತಿಸುತ್ತದೆ ॥೨೭॥

ಅದ್ವಿತೀಯನಾದ ಪರಮಾತ್ಮನನ್ನು ಶೈವರು ಶಿವನೆಂದೂ, ವೈಷ್ಣವರು ವಿಷ್ಣು ವೆಂದೂ ಹೇಳುತ್ತಾರೆ ಆದರೆ ಇವರಿಬ್ಬರೂ ಕೇವಲ ಆಗ್ರಹದಿಂದ ಹೇಳುತ್ತಾರೆಯೇ ಹೊರತು ತಾತ್ವಿಕವಾಗಿಯಲ್ಲ. ॥೨೮॥

ಆ ಅದ್ವಿತೀಯ ಪರಮಾತ್ಮನ ಅವತಾರವೇ 'ಬ್ರಹ್ಮ ವಿಷ್ಣು ಮಹೇಶ್ವರರು' ಈ ಮೂವರಲ್ಲೂ ಈಶ್ವರತ್ವವು ಸಮಾನವಾಗಿಯೇ ಇದೆ. ಸ್ವಲ್ಪವೂ ನ್ಯೂನಾಧಿಕವಿಲ್ಲ ॥೨೯॥

ಈತನೇ ಶ್ರೇಷ್ಠ. ಆತನಲ್ಲ ಎಂದು ಭಾವಿಸುವ ದುರ್ಮತಿಗಳು ರಾಕ್ಷಸರಾಗಿಯೋ ಅಥವಾ ಪಿಶಾಚರಾಗಿಯೋ ಜನಿಸುವರು. ಇದರಲ್ಲಿ ಸಂಶಯವೇ ಇಲ್ಲ. ॥೩೦॥

ಬ್ರಹ್ಮನನ್ನಾಗಲೀ, ವಿಷ್ಣುವನ್ನಾಗಲೀ, ಶಂಕರನನ್ನಾಗಲೀ ಜೀವೋತ್ತಮನೆಂದು ಹೇಳುವ ಮೂಢಮತಿಗಳೇ ಚಂಡಾಲರೆನಿಸುತ್ತಾರೆ. ॥೩೧॥

ಆದ್ದರಿಂದ ಈ ಮೂವರಲ್ಲಿ ಯಾವ ದೇವನನ್ನಾದರೂ ತನಗೆ ಸಮ್ಮತನಾದ ದೇವನೆಂದು ಪೂಜಿಸಬಹುದು. ಆದರೆ ವೇದತಾತ್ಪರ್ಯವನ್ನರಿತವನು ಉಳಿದಿಬ್ಬರನ್ನು ದ್ವೇಷಿಸಬಾರದು. ॥೩೨॥

ಫಲಾಪೇಕ್ಷೆಯಿಲ್ಲದೇ ತನ್ನ ವರ್ಣಾಶ್ರಮಯೋಗ್ಯವಾದ ಕರ್ಮಗಳನ್ನು ಆಚರಿಸುವುದರಿಂದ, ವೈದಿಕ ಅಥವಾ ತಾಂತ್ರಿಕ ಉಪಾಸನೆಗಳನ್ನು ಮಾಡುವುದರಿಂದ ಪರಮಾತ್ಮನನ್ನು ಅರ್ಚಿಸಬಹುದು. ॥೩೩॥

ತಸ್ಯ ಪ್ರಸಾದಾತ್ಸಂಸಿದ್ಧ್ಯೇತ್ಸಾಧನಂ ಶ್ರವಣಾದಿ ಯತ್ ।
ನಾನುಬಂಧಂ ಕ್ಷಯಂ ಯಾತಿ ಜೀವಾಜ್ಞಾನಂ ನ ಸಂಶಯಃ ॥೩೪॥

ವಿಭೇದಜನಕೇಽಜ್ಞಾನೇ ನಾಶಮಾತ್ಯಂತಿಕಂ ಗತೇ ।
ಜೀವಭಾವಂ ಪರಿತ್ಯಜ್ಯ ಬ್ರಹ್ಮ ಸಂಪದ್ಯತೇ ತದಾ ॥೩೫॥

ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।
ವಿಮುಚ್ಯ ನಿರ್ಮಲಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥೩೬॥

ಗುಣೋಪಸಂಹೃತಿನ್ಯಾಯಾತ್ ಶಿವಂ ವಾ ವಿಷ್ಣುಮೇವ ವಾ ।
ತಾವದ್ಭಜೇತ ಯಾವದ್ಧಿ ನಿರ್ವಿಕಲ್ಪಂ ಮನೋ ಭವೇತ್ ॥೩೭॥

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ ॥
ತದೈವ ಬ್ರಹ್ಮಸಂಪನ್ನೋ ಜಾಯತೇ ಮುಕ್ತಸಂಶಯಃ ॥೩೮॥

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥೩೯॥

ನಾರದಃ ಪುನರಪ್ಯೇತಾವಾಹ್ಯವಮುಪದಿಶ್ಯ ಹಿ ।
ಮಯಾ ಸಾಕಮುಪಾಯಾತಂ ದೇವಂ ವಾಂ ದರ್ಶಯಾಮ್ಯಹಮ್ ॥೪೦॥

ಏವಂ ತೌ ನಾರದೇನೋಕ್ತೌ ನರನಾರಾಯಣೌ ತದಾ ।
ಅಪಶ್ಯತಾಂ ನಾರದೇನ ಸಹಿತಾವಗ್ರಜಾನುಜೌ ॥೪೧॥

ಕರ್ಪೂರಧಾಮಧವಲಮುಮಾಜಾನಿಂ ಮಹೇಶ್ವರಮ್ ।
ನೀಲಗ್ರೀವಮುದಾರಾಂಗಂ ಚಂದ್ರಚೂಡಂ ತ್ರಿಲೋಚನಮ್ ॥೪೨॥

ರಿಂಗತ್ತರಂಗಗಂಗಾಂಬುರಾಜತ್ತುಂಗಕಪರ್ದಕಮ್ ।
ಗೌರೀವದನಪೂರ್ಣೇಂದುಮಿಲನ್ನೇತ್ರಚಕೋರಕಮ್ ॥೪೩॥

ಧೃತದರ್ವೀಕರಾಕಲ್ಪಂ ಗುರ್ವೀಭಿರ್ಭೂತಿಭಿರ್ಯುತಮ್ ।
ಖರ್ವೀಭೂತಾಬ್ಜಭೂವಿಷ್ಣುಮುರ್ವೀಭೃದ್ಧನುಷಂ ಹರಮ್ ॥೪೪॥

ಕೋಟಿಸೂರ್ಯಪ್ರತೀಕಾಶಂ ಚಂದ್ರಕೋಟಿಸುಶೀತಲಮ್ ।
ವಸಾನಮಜಿನಂ ಗಾಜಂ ವ್ಯಾಘ್ರಚರ್ಮೋತ್ತರೀಯಕಮ್ ॥೪೫॥

ನಿಖಿಲಾಮ್ನಾಯಸಂಗೀತಮಹಿಮಾನಂ ಮಹತ್ತರಮ್ ।
ಭೂತಿಭೂಷಿತಸರ್ವಾಂಗಂ ಮೃತ್ಯೋರ್ಮೃತ್ಯುಂ ಜಗತ್ಪತಿಮ್ ॥೪೬॥

ಪಾರ್ಷದೈರ್ಲೋಕಪಾಲೈಶ್ಚ ಪರೀತಂ ಪರಮರ್ಷಿಭಿಃ ।
ದಿವ್ಯಸಿಂಹಾಸನಾರೂಢಂ ಜಗಜ್ಜನ್ಮಾದಿಕಾರಣಮ್ ॥೪೭॥

ತೌ ದೃಷ್ಟ್ವೈವಂ ಮಹಾದೇವಂ ವಿಸ್ಮಯೋತ್ಫುಲ್ಲಲೋಚನೌ ।
ಹೃಷ್ಯತ್ತನೂರುಹೌ ಸನ್ನತ್ಯಂತೌ ಸ್ತೋತುಂ ನ ಶೇಕತುಃ ॥೪೮॥

ಆತನ ವರಮಾನುಗ್ರಹದಿಂದ 'ಶ್ರವಣ ಮನನ', ಮೊದಲಾದ ಸಾಧನಗಳು ಕೈಗೂಡುವವು ಜೀವನ ಅವಿದ್ಯೆಯು ಸಮೂಲ ನಾಶ ಹೊಂದುವದು ಇದರಲ್ಲಿ ಸಂಶಯವಿಲ್ಲ ।।೩೪।।

ವಿವಿಧವಾದ ಭೇದಗಳ ಕಲ್ಪನಗ ಕಾರಣವಾದ ಅಜ್ಞಾನವು ಪೂರ್ಣ ನಾಶಹೊಂದಿದ ಕೂಡಲೇ ಈ ಆತ್ಮನು ಜೀವಸ್ವರೂಪವನ್ನು ತ್ಯಜಿಸಿ ಪರಬ್ರಹ್ಮನೇ ಆಗುತ್ತಾನ ।।೩೫।।

ಅಹಂಕಾರ–ಬಲ–ದರ್ಪ–ಕಾಮ–ಕ್ರೋಧ–ಆದಾನ, ಇವನ್ನೆಲ್ಲ ತ್ಯಜಿಸಿ ನಿರ್ಮಲ ನಾದ, ಪ್ರಶಾಂತನಾದ ಜೀವನು ಬ್ರಹ್ಮಸಾಯುಜ್ಯ ಹೊಂದಲು ಯೋಗ್ಯನಾಗುವನು ।।೩೬।।

ನಿರ್ವಿಕಾರ ಚಿತ್ತಸ್ಥಿತಿಯುಂಟಾಗವವರಗೆ 'ಗುಣೋಪ ಸಂಹಾರ' ನ್ಯಾಯದಂತ ಶಿವನನ್ನಾಗಲೀ, ವಿಷ್ಣುವನ್ನಾಗಲೀ ಪೂಜಿಸಬಹುದು ।।೩೭।।

ಹೃದಯದೊಳಿರುವ ವಿಷಯವಾಸನಗಳೆಲ್ಲ ತೊಲಗಿ ಸಂಶಯರಹಿತನಾದೊಡನಯೇ ಬ್ರಹ್ಮಸ್ವರೂಪವನ್ನು ಹೊಂದುವನು. ।।೩೮।।

ಜ್ಞಾನಿಗೆ ಬ್ರಹ್ಮಸಾಕ್ಷಾತ್ಕಾರವಾದೊಡನಯೇ ಆತನ ಹೃದಯದ ವಾಸನಾ ಗ್ರಂಥಿಗಳೊಡೆದು, ಸಂಶಯಗಳೆಲ್ಲ ಅಳಿದು, ಕರ್ಮಗಳೆಲ್ಲ ನಾಶವಾಗುವವು ।।೩೯।।

ಹೀಗ ವಿವಿಧ ರೀತಿಯಿಂದ ಉಪದೇಶಿಸಿದ ನಾರದರು ಪುನಃ ಅವರಿಬ್ಬರಿಗ "ನೀವಿಬ್ಬರೂ ನನ್ನೊಂದಿಗ ಬರುವಿರಾದರ ಆ ದೇವನ ದರ್ಶನ ಮಾಡಿಸುವ" ಎಂದು ಹೇಳಿದರು. ।।೪೦।।

ನಾರದರ ಮಾತನ್ನಾಲಿಸಿದ ಆ ಅಣ್ಣತಮ್ಮಂದಿರು ನಾರದರೊಂದಿಗ ಭಗವಾನ್ ಶ್ರೀ ವೀರನಾರಾಯಣನನ್ನು ದರ್ಶಿಸಿದರು ।।೪೧।।

ಆಗ ಅವರಿಬ್ಬರಿಗಲ್ಲಿ ಕರ್ಪೂರಗಿರಿಯಂತ ಶುಭ್ರನಾದ, ಉಮಾಪತಿಯಾದ, ಚಂದ್ರಕಿರೀಟಿಯಾದ, ಉದಾರಿಯಾದ ಭಗವಾನ್ ಶ್ರೀ ನೀಲಕಂಠೇಶ್ವರನು ದರ್ಶನವಿತ್ತನು. ಆ ತ್ರ್ಯಂಬಕನು ತನ್ನ ಜಟಾಜೂಟದಲ್ಲಿ ಸುಳಿಗಳ ಅಲೆಗಳುಳ್ಳ ಗಂಗೆಯನ್ನು ಧರಿಸಿ ಸರ್ಪಗಳನ್ನು ಆಭರಣದಂತ ಧರಿಸಿದ್ದನು ಗೌರೀದೇವಿಯ ಮುಖವೆಂಬ ಚಂದ್ರನ ಸೌಂದರ್ಯವನ್ನು ಆಸ್ವಾದಿಸುತ್ತಿದ್ದ ಹರನ ಕಣ್ಣುಗಳು ಚಕೋರ ಪಕ್ಷಿಯಂತಿದ್ದವು. ಲಲಾಟದಲ್ಲಿ ಭಸ್ಮದಿಂದೊಪ್ಪುತ್ತಿದ್ದ ಶಿವನು ಕರದಲ್ಲಿ ಮೇರುರೂಪ ಧನುಸ್ಸನ್ನು ಧರಿಸಿದ್ದನು. ಶಿವನ ಈ ರೂಪದ ಮುಂದ ಬ್ರಹ್ಮ, ವಿಷ್ಣುಗಳೂ ಕೂಡ ಅಲ್ಪರಾಗಿ ಕಾಣುತ್ತಿದ್ದರು. ।।೪೨-೪೪।।

ಸಹಸ್ರಾರು ಸೂರ್ಯನ ಕಾಂತಿಯಿಂದ ಬೆಳಗುತ್ತಿದ್ದ ಪರಶಿವನು ಭಕ್ತರಿಗ ಸುಖಕರನಾಗಿದ್ದನು. ಗಜಚರ್ಮವನ್ನುಟ್ಟು, ವ್ಯಾಘ್ರಚರ್ಮವನ್ನು ಹೊದ್ದು ಸರ್ವಾಂಗದಲ್ಲಿಯೂ ಭಸ್ಮವನ್ನು ಧರಿಸಿದ್ದ ಜಗತ್ಪತಿ ಶ್ರೀಶಂಕರನನ್ನು ಮಹಾತಪಸ್ವಿಗಳೂ, ಪಾರ್ಷದರೂ, ಇಂದ್ರಾದಿ ಲೋಕಪಾಲರೂ ಸುತ್ತುವರಿದಿದ್ದರು. ಜಗತ್ತಿನ ಜನ್ಮಸ್ಥಿತಿ ಲಯಗಳಿಗ ಕಾರಣನಾದ ಪ್ರಭುವು ದಿವ್ಯಸಿಂಹಾಸನದಲ್ಲಿ ಮಂಡಿಸಿದ್ದನು. ಯಮನಿಗೂ ಸಹ ಯಮನಂತಿದ್ದ ಮಹಾದೇವನನ್ನು ಕಂಡು ಆ ಅಣ್ಣತಮ್ಮಂದಿರ ಕಣ್ಣುಗಳು ಆಶ್ಚರ್ಯದಿಂದ ಅರಳಿದವು. ರೋಮಾಂಚಗೊಂಡ ಅವರಿಗೆ ಶ್ರೀನೀಲಕಂಠೇಶ್ವರನನ್ನು ಸ್ತುತಿಸಲು ಬಾಯಿಯೇ ಬರಲಿಲ್ಲ. ।।೪೫-೪೮।।

ದೇವರ್ಷಿರ್ನಾರದೋ ಹರ್ಷಾದ್ಭಗವಂತಮುಮಾಪತಿಮ್ ।
ತುಷ್ಟಾವವಾಗ್ಭಿರಿಷ್ಟಾಭಿರಷ್ಟಮೂರ್ತಿಂ ಮಹೇಶ್ವರಮ್ ॥೪೯॥

ನಾರದ ಉವಾಚ —

ಜಯ ಜಯ ಪ್ರಭೋ ಸರ್ವಮಂಗಲಾಽ-
ಶ್ರಯ ನಿಜಾಶ್ರಿತಾಮಂಗಲಾಂತಕ ।
ತ್ರಿಪುರಸೂದನಾನೇಕಪಾಂಸುಲ
ಪ್ರಮುಖಸಂಸ್ತುತಿಪ್ರೀಣಿತಾಮರ ॥೫೦॥

ಪರಮ ತಾವಕಂ ಭರ್ಗಶಬ್ದಿತಂ
ಮಹ ಉಪಾಸತೇ ಯೇ ದ್ವಿಜಾಃ ಸದಾ ।
ತ ಇಹ ತನ್ಮಹಃಸಂಸ್ತುತಾಂಹಸಃ
ಪರಪದಂ ಪ್ರಭೋ ಯಾಂತಿ ಶಾಶ್ವತಮ್ ॥೫೧॥

ನಿಗಮವರ್ಣಿತಾನಂತವೈಭವೇ
ಸುಗಮಪೂಜನೇ ಸೂದಿತಸ್ಮರೇ ।
ರವಿನಿಶಾಕರಾಗ್ನಿತ್ರಲೋಚನೇ
ಪ್ರಣತವತ್ಸಲೇ ಪ್ರೀತಿರಸ್ತು ಮೇ ॥೫೨॥

ವಿಗತಮನ್ಯವೋ ವೀತಮತ್ಸರಾಃ
ಕೃತಮನೋಜಯಾಃ ಕಾಮವರ್ಜಿತಾಃ ।
ಕಲಿಮಲಾಪಹಂ ಕಾಮಪೂರಕಂ
ಸ್ವಹೃದಿ ಬಿಭ್ರತೇ ತ್ವಾಂ ಮಹಾಜನಾಃ ॥೫೩॥

ತ್ವದೃತ ಈಶತಃ ಸರ್ಗಪಾಲನಾ
ಪ್ಯಯವಿಧೌ ಪಟುಃ ಕೋಽಪಿ ನಾಪರಃ ।
ವಿಧಿಹರೀ ಉಭೌ ತ್ವಂ ಚ ನೋ ಪೃಥಕ್
ಗುಣಕೃತಾ ಭಿದಾ ನೈವ ವಾಸ್ತವೀ ॥೫೪॥

ವಿಧಿಲಲಾಟಜಸ್ತ್ವಂ ತದಾಸ್ಯಭಿ-
ದ್ಧರಿಪದೋದ್ಭವಂ ವಾರಿ ಮೂರ್ಧ್ನಿ ತೇ ।
ತ್ವಯಿ ದದೌ ಸ್ವದೃಕ್ಪದ್ಮಮಚ್ಯುತ
ಶ್ಚರಿತಮೈಶ್ವರಂ ಕೇ ವಿಜಾನತೇ ॥೫೫॥

ದೇವರ್ಷಿಗಳಾದ ನಾರದರು ಉಮಾಪತಿಯನ್ನು ಕಂಡು ಹರ್ಷ ಹೊಂದಿ ತಮಗಿಷ್ಟವಾದ ವಚನಗಳಿಂದ ಅಷ್ಟಮೂರ್ತಿಯಾದ ಮಹೇಶ್ವರನನ್ನು ಸ್ತುತಿಸಿದರು ॥೪೯॥

ನಾರದರು ಹೇಳಿದರು –

ಸರ್ವಮಂಗಲಗಳಿಗೆ ಆಶ್ರಯನಾದ ಪ್ರಭೋ ! ನೀನು ಶರಣಾಗತರ ಅಮಂಗಲವನ್ನು ಒಡನೆಯೇ ಪರಿಹರಿಸುವಿ ಗಜಾಸುರನೇ ಮೊದಲಾದ ಅಸುರರನ್ನು ಸಂಹರಿಸಿ ದೇವತೆಗಳಿಗೆ ಸಂತೋಷವನ್ನಿತ್ತ ತ್ರಿಪುರಾರಿಯೇ! ನಿನಗೆ ಮಂಗಲ ವಾಗಲಿ ॥೫೦॥

ಹೇ ದೇವಾಧಿದೇವನೇ!

'ಭರ್ಗ'ವೆಂಬ ನಿನ್ನ ಮಹಾತೇಜಸ್ಸನ್ನು ಸ್ಮರಿಸುವ ನಿನ್ನ ಭಕ್ತಜನರು ಆ ನಿನ್ನ ಮಹಾತೇಜಸ್ಸಿನ ಪ್ರಭಾವದಿಂದ ತಮ್ಮ ಪಾಪಮಲಗಳನ್ನು ನೀಗಿಕೊಂಡು ಶಾಶ್ವತವಾದ ಪದವನ್ನು ಹೊಂದುವರು. ॥೫೧॥

ವೇದಗಳು ವರ್ಣಿಸಿದ ಅನಂತ ವೈಭವವುಳ್ಳ, ಸುಲಭ ಪೂಜಗೊಲಿಯುವ, ಮನ್ಮಥನನ್ನು ಗೆದ್ದ ಶಂಕರ! ನಿನಗೆ ಸೂರ್ಯಚಂದ್ರಾಗ್ನಿಗಳೇ ನೇತ್ರರಾಗಿರುವರು ಪ್ರಣತವತ್ಸಲನಾದ ನಿನ್ನಲ್ಲಿ ನನಗೆ ಪ್ರೀತಿಯಿರಲಿ. ॥೫೨॥

ಕೋಪ ಮಾತ್ಸರ್ಯ ಕಾಮಾದಿಗಳನ್ನು ತ್ಯಜಿಸಿದ, ಮನಸ್ಸಿನ ಚಾಂಚಲ್ಯವನ್ನು ತಡೆದ ಮಹಾಜನರು, ಕಲಿಮಲವನ್ನು ಪರಿಹರಿಸುವ, ಇಷ್ಟಾರ್ಥಗಳನ್ನು ಈಡೇರಿಸುವ ಪ್ರಭುವಾದ ನಿನ್ನನ್ನು ತಮ್ಮ ಹೃದಯದಲ್ಲಿ ಧ್ಯಾನಿಸುತ್ತಾರೆ ॥೫೩॥

ಪ್ರಭೋ ಶಂಕರ! ನಿನ್ನಿಂದಲೇ ಜಗತ್ತಿನ ಸೃಷ್ಟಿ – ಸ್ಥಿತಿ ಸಂಹಾರಗಳಾಗುತ್ತವ ನೀನೇ ಅದಕ್ಕೆ ಸಮರ್ಥನಿರುವಿ. ನಿನ್ನ ಹೊರತು ಬೇರಾರೂ ಇಲ್ಲ. ಬ್ರಹ್ಮವಿಷ್ಣುಗಳಿಬ್ಬರೂ ನಿನ್ನಿಂದ ಬೇರೆಯಲ್ಲ. ನೀವು ಮೂವರಲ್ಲಿ ತೋರುವ ಭೇದವು ಕಲ್ಪಿತ ಗುಣ ಮೂಲಕವೇ ಹೊರತು ವಾಸ್ತವಿಕವಲ್ಲ. ॥೫೪॥

ಬ್ರಹ್ಮನ ಹಣೆಯಿಂದ ಜನಿಸಿದ ನೀನು ಆತನ ಶಿರವನ್ನೇ ಮುರಿದಿಕ್ಕಿದಿ ವಿಷ್ಣುವಿನ ಚರಣದಿಂದ ಜನಿಸಿದ ಗಂಗೆಯನ್ನೇ ನಿನ್ನ ಮಸ್ತಕದಲ್ಲಿ ಧರಿಸಿರುವಿ ಪೂಜೆಗೆ ಕಮಲವು ಕಡಿಮೆಯಾಗಲು ಶ್ರೀ ಹರಿಯು ತನ್ನ ಕಣ್ಣನ್ನೇ ಕಮಲವಾಗಿ ನಿನಗೆ ಅರ್ಪಿಸಿದನು. ಪರಮೇಶ್ವರನಾದ ನಿನ್ನ ಚರಿತೆಯನ್ನು ಯಾರು ತಾನೇ ತಿಳಿಯಬಲ್ಲರು? ॥೫೫॥

ತವ ರಥೋ ರಸಾ ಸಾರಥಿರ್ವಿಧಿ
ರ್ವಿಧಿಕರಾಃ ಸುರಾಃ ಸಾಯಕೋ ಹರಿಃ ।
ತ್ರಿಪುರಕಂ ತೃಣಂ ಸಂಹರಿಷ್ಯತೋ
ಜಯತಿ ಸರ್ವಥಾಽಽಡಂಬರೋ ಮಹಾನ್ ॥೫೬॥

ಕ್ಷಿತಿಮುಖಂ ಪ್ರಭೋ ಭೂತಪಂಚಕಂ
ರವಿಶಶಿಪ್ರಯಷ್ಟಾರ ಇತ್ಯಮೀಃ ।
ಪರಮಮೂರ್ತಯೋಽಷ್ಟೌ ಲಸಂತಿ ತೇ
ಪ್ರಕಟಮೀಶ್ವರಂ ತ್ವಾಂ ಸಮಾಶ್ರಯೇ ॥೫೭॥

ಇತಿ ದೇವರ್ಷಿಣಾ ತೇನ ಸಂಸ್ತುತಃ ಪರಮೇಶ್ವರಃ ।
ನಾರದಂ ಪ್ರಾಹ ದೇವರ್ಷೇ! ಕಚ್ಚಿದ್ದೃಷ್ಟಮಿದಂ ತ್ವಯಾ ॥೫೮॥

ಶ್ರೀ ಭಗವಾನುವಾಚ —

ಮತ್ತೋ ಭಿನ್ನೋ ಹರಿರ್ನಾಸ್ತಿ ನಾಸ್ತಿ ಭಿನ್ನೋ ಹರೇರಹಮ್ ।
ಆವಾಭ್ಯಾಂ ನ ಪೃಥಕ್ ಬ್ರಹ್ಮಾ ಮಾಯಯೇಯಂ ಭಿದಾ ಹಿ ನಃ ॥೫೯॥

ಮಾಯಯಾ ಮೋಹಿತೋ ಲೋಕಃ ಪೃಥಗ್ಭಾವಾನ್ ಪ್ರಭಾಷತೇ ।
ತತ್ತ್ವಮೇತನ್ನ ಜಾನಾತಿ ಪಶ್ಯನ್ನಪಿ ನ ಪಶ್ಯತಿ ॥೬೦॥

ತ್ವಾದೃಶಾಃ ಸದೃಶೋ ಲೋಕೇ ಪಶ್ಯಂತ್ಯಸ್ಮಾಸು ನೋ ಭಿದಾಮ್ ।
ವಸ್ತ್ವೇಕಮಿತಿ ಜಾನಂತಃ ಸಂತಃ ಸಂತಾಪವರ್ಜಿತಾಃ ॥೬೧॥

ಯಶ್ಚ ಮೂಢತಮೋ ಲೋಕೇ ಯಶ್ಚ ಬುದ್ಧೇಃ ಪರಂಗತಃ ।
ದ್ವಾವೇತೌ ಸುಖಮೇಧೇತೇ ಕ್ಲಿಶ್ಯಂತ ಇತರೇ ಜನಾಃ ॥೬೨॥

ಸಮಂ ಭಾಗವತಾಃ ಸಂತೋ ಜ್ಞೇಯಾಸ್ತ್ರಿಷ್ವರ್ಜಿಷು ಸ್ಥಿತ್ಯಃ ।
ಮುಖಪ್ರಸಾದಾನುಮತಿಪ್ರತಿವಾಕ್ಯರಕ್ಷತ್ರಿಷ್ವ್ಯಃ ॥೬೩॥

ಶಿವೇ ವಿಷ್ಣೌ ಸಮಾಃ ಸಂತೋ ಜ್ಞಾಯಂತೇ ಪ್ರೋಕ್ತಲಕ್ಷಣೈಃ ।
ವಿಪರೀತೈಸ್ತು ತೈರೇವ ಜ್ಞಾಯಂತೇ ತದ್ವಿರೋಧಿನಃ ॥೬೪॥

ತತ ಆಹೂಯ ತೌ ವಿಪ್ರೌ ಭಗವಾನಭ್ಯಚೋದಯತ್ ।
ಅದ್ಯಪ್ರಭೃತಿ ಸಂತ್ಯಜ್ಯ ಭೇದಂ ಹರಿಹರೌ ಪ್ರತಿ ॥೬೫॥

ಸಮಭಾಗೇನ ವರ್ತೇಥಾಂ ಭಜಮಾನೌ ಯಥಾರುಚಿ ।
ಮಾಂ ವಾ ಹರಿಂ ವಾ ನೇಕ್ಷೇಥಾ ಮಾವಯೋರಂತರಂ ಕ್ವಚಿತ್ ॥೬೬॥

ನೀನು ಯುದ್ಧಕ್ಕೆ ಹೊರಟಾಗ ಭೂಮಿಯೇ ರಥವಾಗಿದ್ದರೆ ಅದರ ಸಾರಥಿಯು ಬ್ರಹ್ಮದೇವನಾದನು ದೇವತೆಗಳು ಸೈನಿಕರಾದರು ಹರಿಯು ಬಾಣವಾದನು ಈ ಯುದ್ಧದಲ್ಲಿ ತೃಣಸಮರಾದ ತ್ರಿಪುರಾಸುರರನ್ನು ಸಂಹರಿಸಿದ ನಿನ್ನ ಮಹತ್ತರವಾದ ಆಡಂಬರವು (ಪ್ರಭಾವವು) ಸಕಲ ವಿಧವಾಗಿಯೂ ವಿರಾಜಿಸುತ್ತಿದೆ ||೫೬||

ಪೃಥಿವೀ – ಸಲಿಲ – ಅಗ್ನಿ –ವಾಯು – ಆಕಾಶ – ಸೂರ್ಯ – ಚಂದ್ರ – ಸೋಮಯಾಜೀ ಈ ಎಂಟು ವಸ್ತುಗಳೇ ನಿನ್ನ ಶರೀರವೆಂದು ಪ್ರಸಿದ್ಧವಾಗಿವೆ ಶಂಕರ! ಪ್ರತ್ಯಕ್ಷನಾದ ನಿನ್ನನ್ನು ನಾನು ಆಶ್ರಯಿಸುವೆ ||೫೭||

ಹೀಗೆ ದೇವರ್ಷಿಗಳಾದ ನಾರದರು ಪರಮೇಶ್ವರನನ್ನು ಸ್ತುತಿಸಿದರು ಪ್ರೀತನಾದ ಭಗವಾನ್ ಶಂಕರನು ನಾರದಮಹರ್ಷಿಗಳಿಗೆ ಹೇಳಿದನು ವತ್ಸನಾರದ! ಈ ನನ್ನ ಸ್ವರೂಪವನ್ನು ನೋಡಿದೆಯಷ್ಟೆ? ||೫೮||

**ಶಂಕರನು ಹೇಳಿದನು –**

ನನ್ನಿಂದ ವಿಷ್ಣುವು ಬೇರೆಯಲ್ಲ ಅದೇ ರೀತಿ ವಿಷ್ಣುವಿನಿಂದ ನಾನೂ ಬೇರೆಯಲ್ಲ ನಮ್ಮಿಬ್ಬರಿಂದಲೂ ಬ್ರಹ್ಮದೇವನು ಭಿನ್ನನಲ್ಲ ನಮ್ಮಲ್ಲಿ ಕಾಣುವ ಈ ಬೇದವು ಅವಿದ್ಯೆಯ ಪ್ರಭಾವದಿಂದ ತೋರುತ್ತಿದೆ ಮಾಯೆಯಿಂದ ಮೋಹಿತರಾದ ಜನರು ಸುಮ್ಮನೆ ಜಾಣತನದ ನುಡಿಗಳನ್ನಾಡುವರು ಆದರೆ ನಮ್ಮಲ್ಲಿಯ ಅದ್ವೈತ ತತ್ತ್ವವನ್ನು ತಿಳಿಯುವುದೇ ಇಲ್ಲ. ನೋಡಿದರೂ ನೋಡದವರಂತಿರುವರು ಈ ಲೋಕದಲ್ಲಿ ಅದ್ವಿತೀಯ ವಸ್ತುವೊಂದೇ ಸತ್ಯವೆಂದು ತಿಳಿದ, ಸಂತಾಪರಹಿತರಾದ ನಿನ್ನಂಥ ಸಮದರ್ಶಿಗಳು ನಮ್ಮಲ್ಲಿ ಯಾವ ಭೇದವನ್ನೂ ಕಾಣುವುದಿಲ್ಲ ಲೋಕದಲ್ಲಿ ಮೂರ್ಖತಮ - ಅತಿಬುದ್ಧಿವಂತ ಈ ಇಬ್ಬರು ಸುಖವನ್ನು ಹೊಂದುವರು ಉಳಿದವರು ಕ್ಲೇಶಗೊಳ್ಳುವರು. || ೫೯ -೬೨ ||

ಮೊರೆಯೊಮ್ಮೆದ ಸಲ್ಲಕ್ಷಣಗಳಿಂದ, ಅರಳಿದ ಮುಖ ಹಾಗೂ ಸಮ್ಮತಿಸೂಚಕ ವಾದ ಮತ್ತು ನಿಷ್ಕಪಟವಾದ ಅವರ ಮಾತುಗಳಿಂದ ಸಜ್ಜನರಾದ ಭಾಗವತೋತ್ತಮರನ್ನು ಗುರುತಿಸಬಹುದು. ||೬೩||

ಮೇಲೆ ತಿಳಿಸಿದ ಲಕ್ಷಣಗಳುಳ್ಳ, ಸಜ್ಜನರು ಶಿವವಿಷ್ಣುಗಳಲ್ಲಿ ಐಕ್ಯವನ್ನೇ ಕಾಣುತ್ತಾರೆ. ಇವೇ ವಿಪರೀತವಾಗಿದ್ದರೆ ಅವರು ಹರಿಹರದ್ವೇಷಿಗಳಾದ ಭಾಗವತ ವಿರೋಧಿಗಳೆಂದೇ ಸಿದ್ಧವಾಗುತ್ತದೆ. ||೬೪||

ನಂತರ ಭಗವಾನ್ ಶಂಕರನು ಆ ಬ್ರಾಹ್ಮಣ ಸೋದರರನ್ನು ಕರೆದು "ಇವತ್ತಿನಿಂದ ನೀವಿಬ್ಬರೂ ಹರಿಹರರಲ್ಲಿ ಭೇದವನ್ನು ತ್ಯಜಿಸಿ, ನಿಮಗೆ ಇಷ್ಟವಾದಂತೆ ಸೇವಿಸುತ್ತ ಇಬ್ಬರಲ್ಲೂ ಸಮಾನ ಭಕ್ತಿಯುಳ್ಳವರಾಗಿರಿ. ಸರ್ವದಾ ನನ್ನನ್ನಾಗಲೀ ಶ್ರೀಹರಿಯನ್ನಾಗಲೀ ಬೇರೆ ಬೇರೆಯೆಂದು ತಿಳಿಯದಿರಿ. ||೬೫-೬೬||

ಯುವಾಮಲ್ಪೇನ ಕಾಲೇನ ಶುದ್ಧಂ ಜ್ಞಾನಮವಾಪ್ಸ್ಯಥಃ ।
ಅಧಿಷ್ಠಾನಂ ವಿವರ್ತಸ್ಯ ದ್ರಕ್ಷ್ಯಥೋ ಬ್ರಹ್ಮ ನಿಷ್ಕಲಮ್ ॥೧೭॥

ಇತ್ಯುಕ್ತ್ವಾಽನುವದಂ ಶಂಭುರ್ವೀರನಾರಾಯಣೋಽಭವತ್ ।
ಶಂಭುಂ ತಮೇವ ತೌ ವಿಪ್ರೌ ನಾರಾಯಣಮಪಶ್ಯತಾಮ್ ॥೧೮॥

ತದಾ ನಾರಾಯಣೋ ದೇವ ಸ್ತಾವುವಾಚ ಹಸನ್ನಿವ ।
ಯುವಯೋಃ ಸಂಶಯಃ ಕಶ್ಚಿತ್ ಪ್ರಸಕ್ತಃ ಸ್ಪರ್ಧಮಾನಯೋಃ ॥೧೯॥

ಸಂತೋ ಮಯಿ ಶಿವೇ ಯೇ ಚ ಭಿದಾಮಲ್ಪೀಯಸೀಮಪಿ ।
ವಸ್ತ್ವೇಕತ್ವಾನ್ನಪಶ್ಯಂತಿ ಪಶ್ಯಂತಿ ಕ್ಷುದ್ರಬುದ್ಧಯಃ ॥೨೦॥

ಆಮ್ನಾಯಾ ಆಹುರುದರಮಂತರಂ ಕುರುತೇ ತದಾ ।
ಭಯಂ ಭವತಿ ತಸ್ಯೇತಿ ತಸ್ಮಾದ್ಭೇದಂ ವಿವರ್ಜಯೇತ್ ॥೨೧॥

ಯಾವಾನ್ ಯಾವಾನ್ ಭವೇದ್ಭೇದೇ ಪುರುಷಸ್ಯ ದುರಾಗ್ರಹಃ ।
ತಾವಾಂಸ್ತಾವಾನ್ ಭವೇದ್ಬಂಧಮೂಲೋ ಮೋಹಸ್ತತಸ್ತಮಃ ॥೨೨॥

ಆಸುರೀಂ ತಮಸಾ ಯೋನಿಮಾಪನ್ನೋ ಜನ್ಮಜನ್ಮನಿ ।
ಮಾಮಪ್ರಾಪ್ಯೈವ ಮೂಢಾತ್ಮಾ ತತೋ ಯಾಂತ್ಯಧಮಾಂ ಗತಿಮ್ ॥೨೩॥

ತಸ್ಮಾದ್ಯುವಾಮಭೇದೇನ ಮಾಮುಮಾರಮಣಂ ತಥಾ ।
ಪಶ್ಯತಂ ಭಜತಂ ಭಕ್ತ್ಯಾ ಹ್ಯಚಿರಾನ್ಮೋಕ್ಷಮಾಪ್ಸ್ಯಥಃ ॥೨೪॥

ಏವಂ ಶ್ರುತ್ವಾ ಭಗವತೋ ವಾಕ್ಯಂ ಪೀಯೂಷಸನ್ನಿಭಮ್ ।
ಭೂತ್ವಾ ತೌ ಮುದಿತೌ ವಿಪ್ರೌ ದೇವಂ ತುಷ್ಟುವತುಸ್ತದಾ ॥೨೫॥

ಬ್ರಾಹ್ಮಣಾವೂಚತುಃ —

ಪಂಚಾನನಾಯ ದಶಬಾಹವ ಈಶ್ವರಾಯ
ಚಂದ್ರೋಪಮೈಕವದನಾಯ ಚತುರ್ಭುಜಾಯ ।
ಶೂಲಾಯುಧಾಯ ಧೃತಶಂಖಸುದರ್ಶನಾಯ
ಸರ್ವೋತ್ತಮಾಯ ಹರಯೇಽಸ್ತು ನಮೋ ಹರಾಯ ॥೨೬॥

ಪೀತಾಂಬರಾಯ ಪರಮಾದ್ಭುತವೈಭವಾಯ
ದ್ವೀಪೀಭಚರ್ಮವಸನಾಯ ವರಪ್ರದಾಯ ।
ಪದ್ಮಾಲಯಾಪ್ರಣಯಿನೇ ಗಿರಿಜಾಧವಾಯ
ಸರ್ವೋತ್ತಮಾಯ ಹರಯೇಽಸ್ತುನಮೋ ಹರಾಯ ॥೨೭॥

ನೀವಿಬ್ಬರೂ ಅನತಿ ಕಾಲದಲ್ಲಿಯೇ ಪರಿಶುದ್ಧ ಜ್ಞಾನ ಹೊಂದಿ ವಿವರ್ತೋಪಾದಾನವಾದ ನಿರ್ಗುಣ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವಿರಿ ।।೬೭।।

ಈ ರೀತಿ ಹೇಳಿ ಆ ಕೂಡಲೇ ವೀರನಾರಾಯಣನಾದನು ಆ ಪರಶಿವನನ್ನೇ ಬ್ರಾಹ್ಮಣರೀರ್ವರೂ ವೀರನಾರಾಯಣನೆಂದು ನೋಡಿದರು ।।೬೮।।

ಆಗ ವೀರನಾರಾಯಣನು ನಕ್ಕು "ಪರಸ್ಪರ ಸ್ಪರ್ಧಿಸುತ್ತಿದ್ದ ನಿಮ್ಮಿಬ್ಬರ ಸಂಶಯವೀಗ ನಿವಾರಣೆಯಾಗಿದೆಯಷ್ಟೇ ? ನನ್ನಲ್ಲಿ ಹಾಗೂ ಪರಶಿವನಲ್ಲಿ ಪಂಡಿತೋತ್ತಮರು ಸ್ವಲ್ಪ ಸಹ ಭೇದವಣಿಸುವದಿಲ್ಲ, ಅವರು ಅದ್ವಿತೀಯ ವಸ್ತುವನ್ನು ಮಾತ್ರ ಕಾಣುತ್ತಾರೆ. ಆದರೆ ಕ್ಷುದ್ರಮತಿಗಳು ಭೇದವನ್ನೇ ಕಾಣುತ್ತಿರುತ್ತಾರೆ. ।।೬೯–೭೦।।

ಭೇದವನ್ನುಂಟು ಮಾಡುವವನಿಗೆ ಮಹಾಭಯವುಂಟಾಗುವದೆಂದು ವೇದಗಳು ಹೇಳುತ್ತಿವೆ ಆದ್ದರಿಂದ ಭೇದ ಬುದ್ಧಿಯನ್ನು ಮಾಡಲೇಬಾರದು. ।।೭೦।।

ಭೇದವಿರುವವರೆಗೆ ಪುರುಷನ ದುರಾಗ್ರಹವೂ ಇರುತ್ತದೆ. ಅದಿರುವವರೆಗೆ ಭೇದ ಮೂಲವಾದ ಮೋಹವೂ ನಂತರ ತಮಸ್ಸೂ ಇರುವುದು ।।೭೧।।

ಆ ತಮಸ್ಸಿನಿಂದ ಜನ್ಮಜನ್ಮದಲ್ಲಿಯೂ ಮೂಢಬುದ್ಧಿಯವನು ಆಸುರೀ ಭಾವವನ್ನೇ ಹೊಂದಿ ನನ್ನನ್ನು ಕಾಣಲಾರದೇ ಅಧಮಗತಿಯನ್ನೈದುವರು ಆದ್ದರಿಂದ ನೀವಿಬ್ಬರೂ ನನ್ನನು ಹಾಗೂ ಉಮಾಪತಿಯನ್ನು ಅಭೇದ ಬುದ್ಧಿಯಿಂದಲೇ ಭಜಿಸಿರಿ. ಅಂತೆಯೇ ಭಕ್ತಿಯಿಂದ ಪೂಜಿಸಿರಿ. ನಿಮಗೆ ಶೀಘ್ರವೇ ಮೋಕ್ಷವು ಲಭಿಸುವುದು. ।। ೭೩–೭೪ ।।

ಈ ರೀತಿ ಅಮೃತ ಸಮಾನವಾದ ಭಗವದ್ವಾಕ್ಯಗಳನ್ನು ಕೇಳಿ ಸಂತುಷ್ಟರಾದ ಆ ಬ್ರಾಹ್ಮಣರೀರ್ವರು ಪ್ರಭು ವೀರನಾರಾಯಣನನ್ನು ಸ್ತುತಿಸಿದರು. ।।೭೫।।

ಬ್ರಾಹ್ಮಣರೆಂದರು –

ಸದ್ಯೋಜಾತಾದಿ ಪಂಚಮುಖವುಳ್ಳ, ದಶಭುಜನಾದ, ತ್ರಿಶೂಲಧಾರಿಯಾದ, ಪಾಪಹರನಾದ ಭಗವಾನ್ ಶಂಕರನಿಗೂ ಹಾಗೂ ಚತುರ್ಭುಜಧಾರಿಯಾಗಿ ಶಂಖ ಚಕ್ರಾದಿಗಳನ್ನು ಹಿಡಿದಿರುವ, ಚಂದ್ರನಂತೆ ಸುಂದರವದನನಾದ, ಸರ್ವೋತ್ತಮನಾದ ಶ್ರೀಹರಿಗೂ ನಮಸ್ಕಾರವಿರಲಿ. ।।೭೬।।

ಪೀತಾಂಬರವನ್ನು ಧರಿಸಿದ, ಪರಮವೈಭವಶಾಲಿಯಾದ, ಲಕ್ಷ್ಮೀಪ್ರಿಯನಾದ ಶ್ರೀಹರಿಗೂ ಪಾರ್ವತೀ ಪತಿಯಾದ ಮತ್ತು ವ್ಯಾಘ್ರಗಜಚರ್ಮಗಳನ್ನು ಧರಿಸಿದ, ಭಕ್ತರಿಗೆ ವರವನ್ನೀಯುವ ಸರ್ವೋತ್ತಮನಾದ ಶ್ರೀಶಂಕರನಿಗೂ ನಮಸ್ಕಾರವಿರಲಿ. ।।೭೭।।

ಕರ್ಪೂರಕುಂಕುಮವಿಲೇಪನಚರ್ಚಿತಾಯ
ಕಂಠಪ್ರದೇಶವಿಲಸತ್ಕಭಕೌಸ್ತುಭಾಯ ।
ಸರ್ವಾಂಗಲಿಪ್ತಭಸಿತಾಯ ಲಸದ್ವಿಷಾಯ
ಸರ್ವೋತ್ತಮಾಯ ಹರಯೇಽಸ್ತುನಮೋ ಹರಾಾಯ ॥ ೨೮॥

ವೈಕುಂಠಸೇವನಪರಾಯ ಪರಾತ್ಪರಾಯ
ಶ್ರೀಕಂಠಪೂಜನತ ಆಪ್ತಸುದರ್ಶನಾಯ ।
ತಾರ್ಕ್ಷ್ಯಧ್ವಜಾಯ ವಿಭವೇ ವೃಷಭಧ್ವಜಾಯ
ಸರ್ವೋತ್ತಮಾಯ ಹರಯೇಽಸ್ತುನಮೋ ಹರಾಯ ॥೨೯॥

ದರ್ವೀಕರೋತ್ತಮಸುತಲ್ಪಶಯಾಯ ನಿತ್ಯಂ
ದೇವಾಯ ತಕ್ಷಕಸುವಾಸುಕಿಕುಂಡಲಾಯ ।
ಮಾಯಾವಿಲಾಸಧೃತವಿಷ್ಣುಶಿವಾಭಿಧಾಯ
ಸರ್ವೋತ್ತಮಾಯ ಹರಯೇಽಸ್ತು ನಮೋ ಹರಾಯ ॥೩೦॥

ಏವಂ ಸ್ತುತ್ವಾ ಹರಿಹರೌ ಭಗವಂತೌ ಭವಚ್ಛಿದೌ ।
ತ್ಯಕ್ತಭೇದಾಗ್ರಹೌ ವಿಪ್ರೌ ತೌ ಪ್ರಣೇಮತುರಂಜಸಾ ॥೩೧॥

ಭಗವಾನುವಾಚ —

ಉತ್ತಿಷ್ಠತಂ ವಿಪ್ರವರೌ ನಾರದಸ್ಯ ಪ್ರಸಾದತಃ ।
ಸಮ್ಯಕ್ ಜ್ಞಾನಂ ಸಮಭವದ್ಯುವಯೋರಾಗ್ರಹಾಂತಕೃತ್ ॥೩೨॥

ಆಚಾರ್ಯವಾನ್ ಹಿ ಪುರುಷೋ ವೇದೇತಿ ಶ್ರುತಿರಬ್ರವೀತ್ ।
ಯುವಾಮಾಚಾರ್ಯವಂತೌ ಸ್ಥಃ ಕೃತಕೃತ್ಯೌ ಭವಿಷ್ಯಥಃ ॥೩೩॥

ತದಾಜ್ಞಪ್ತೋ ಭಗವತಾ ನಾರದೋ ಮುನಿಸತ್ತಮಃ ।
ತಾಭ್ಯಾಂ ಸಹಾಂತೇವಾಸಿಭ್ಯಾಂ ಪ್ರಾಸಾದಾನ್ನಿರ್ಯಯೌ ಬಹಿಃ ॥೩೪॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ
ಕ್ರತುಪುರಮಾಹಾತ್ಮ್ಯೇ
ನಾರದೋಪದೇಶೋ ನಾಮಾಷ್ಟಮೋಽಧ್ಯಾಯಃ

ತನ್ನ ಅಂಗಾಂಗಗಳಲ್ಲಿ ಕರ್ಪೂರ – ಕೇಸರಗಳನ್ನು ಲೇಪಿಸಿದ, ಕಂಠದೊಳು ಹೊಳೆಯುವ ಕೌಸ್ತುಭಮಣಿಯನ್ನು ಧರಿಸಿದ ಶ್ರೀಹರಿಗೂ ಹಾಗೂ ಸರ್ವಾಂಗದಲ್ಲಿ ಭಸ್ಮವನ್ನೂ – ಕಂಠದಲ್ಲಿ ಮಹೋಗ್ರವಾದ ಹಾಲಾಹಲವನ್ನು ಧರಿಸಿದ ಸರ್ವೋತ್ತಮನಾದ ಶ್ರೀನೀಲಕಂಠೇಶ್ವರನಿಗೂ ನಮಸ್ಕಾರವಿರಲಿ. ||೭೮||

ವಿಷ್ಣುಪೂಜಕನಾದ, ಪರಮ ಶ್ರೇಷ್ಠನಾದ, ಸರ್ವವ್ಯಾಪಿಯಾದ ವೃಷಭಧ್ವಜನಾದ ಶ್ರೀಶಂಕರನಿಗೂ, ಶ್ರೀ ನೀಲಕಂಠಾರಾಧನಂಯಿಂದ ಸುದರ್ಶನ ಚಕ್ರವನ್ನು ಹೊಂದಿದ, ಗರುಡಧ್ವಜನಾದ ಶ್ರೀಹರಿಗೂ ನಮಸ್ಕಾರವಿರಲಿ ||೭೯||

ಶೇಷಶಾಯಿಯಾದ ವಿಷ್ಣುವಿಗೂ, ತಕ್ಷಕವಾಸುಕಿಗಳನ್ನೇ ಕುಂಡಲವಾಗಿ ಧರಿಸಿದ ಶಿವನಿಗೂ ನಮಸ್ಕಾರವಿರಲಿ ಮಾಯಾವಿಲಾಸದಿಂದ ಹರಿ – ಹರರೆಂಬ ಹೆಸರನ್ನು ಹೊಂದಿದ ಪರಮಾತ್ಮನಿಗೆ ಅನವರತ ನಮಸ್ಕಾರವಿರಲಿ ||೮೦||

ಈ ರೀತಿ ಭವಹರರಾದ ಭಗವಾನ್ ಹರಿ – ಹರರನ್ನು ಸ್ತುತಿಸಿ ಭೇದದುರಾಗ್ರಹವನ್ನು ತ್ಯಜಿಸಿದ ವಿಪ್ರರೀರ್ವರೂ ಕೂಡಲೇ ನಮಿಸಿದರು ||೮೧||

ಭಗವಂತನು ಹೇಳಿದನು –

ವಿಪ್ರೋತ್ತಮರೇ! ಮೇಲೇಳಿ. ನಾರದಮುನಿಯ ಪ್ರಸನ್ನತಂಯಿಂದ ನಿಮ್ಮಿಬ್ಬರಿಗೂ ದುರಾಗ್ರಹವನ್ನು ನಾಶಗೈದ ಸಮ್ಯಗ್ದರ್ಶನವಾಯಿತು ||೮೨||

ಶ್ರೇಷ್ಠ ಗುರುಗಳನ್ನು ಹೊಂದಿದವನೇ ಜ್ಞಾನವನ್ನು ಸಂಪಾದಿಸುತ್ತಾನೆ ಎಂದು ವೇದವೇ ಹೇಳುತ್ತದೆ. ನಿಮಗೆ ನಾರದರಂತಹ ಯೋಗ್ಯ ಗುರುಗಳು ದೊರೆತಿರುತ್ತಾರೆ. ನೀವು ಕೃತಾರ್ಥರಾಗುವಿರಿ. ||೮೩||

ನಂತರ ಭಗವಾನ್ ವೀರನಾರಾಯಣನ ಅಪ್ಪಣೆ ಪಡೆದು ನಾರದ ಮಹರ್ಷಿಗಳು ತಮ್ಮ ಶಿಷ್ಯರಾದ ಆ ಬ್ರಾಹ್ಮಣರೊಂದಿಗೆ ಮಂದಿರದಿಂದ ಹೊರಬಂದರು. ||೮೪||

**ಶ್ರೀ ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ**
**ಕ್ರತುಪುರಮಾಹಾತ್ಮ್ಯೆಯಲ್ಲಿ**
**ನಾರದೋಪದೇಶವೆಂಬ ಎಂಟನೆಯ ಅಧ್ಯಾಯವು ಮುಗಿಯಿತು.**

# ಅಥ ನವಮೋಽಧ್ಯಾಯಃ

ಸೂತ ಉವಾಚ –

ದೃಷ್ಟ್ವಾ ಜಿಗಮಿಷುಂ ವಿಪ್ರೌ ಸ್ವಗುರುಂ ನಾರದಂ ತದಾ ।
ಸಾಷ್ಟಾಂಗಂ ಪ್ರಣಿಪತ್ಯೋಭೌ ಪ್ರಾರ್ಥಯಾಮಾಸತುರ್ಮುನಿಮ್ ॥೧॥

ಮುನೇ! ಸಂಶಯರೋಗೇಣ ಸುಚಿರಂ ತಿಷ್ಠತಾ ಹೃದಿ ।
ಕ್ಲಿಷ್ಟೌ ಚಿಕಿತ್ಸಿತಾವಾವಾಂ ಭವದ್ವೈದ್ಯೇನ ಭೋ ತ್ವಯಾ ॥೨॥

ಜನ್ಮದಾತೃಬ್ರಹ್ಮದಾತ್ರೋರ್ವರೀಯಾನ್ ಬ್ರಹ್ಮದಃ ಪಿತಾ ।
ಪ್ರಾಣಾನ್ ವಿತ್ತಂ ಗೃಹಂ ದಾರಾನಾಚಾರ್ಯಃ ಸರ್ವಮರ್ಹತಿ ॥೩॥

ತ್ವಂ ನೌ ಮಾತಾ ಪಿತಾ ತ್ವಂ ನೌ ತ್ವಂ ಬಂಧುಸ್ತ್ವಂ ಸಖಾ ಗುರುಃ।
ಅವಿದ್ಯಾಯಾಃ ಪರಂ ಪಾರಂ ಯನ್ನೌ ದರ್ಶಿತವಾನಸಿ ॥೪॥

ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ಸ ಗುರುಃ ಸರ್ವಮರ್ಹತಿ ॥೫॥

ಗೃಹಂ ಪುನೀಮಹೇ ಸ್ವಾಮಿನ್ ಸ್ವಪಾದರಜಸಾ ಗುರೋ! ।
ವಿನಾಯ ಪ್ರಾರ್ಥನಾಂ ಕೃತ್ವಾ ನಾರದಂ ಸ್ವಗೃಹಂ ಪ್ರತಿ ॥೬॥

ಮಧುಪರ್ಕವಿಧಾನೇನ ಪೂಜಯಾಮಾಸ ನಾರದಮ್ ।
ಶಿವಶರ್ಮಾ ಮಹಾಬುದ್ಧಿರನುಜೇನ ಸಹಾದರಾತ್ ॥೭॥

ದೇವರ್ಷಿಂ ಭೋಜಯಾಮಾಸ ಪಾಯಸೇನ ಸಸರ್ಪಿಷಾ ।
ಶರ್ಕರಾಮಧುಮಿಶ್ರೇಣ ಭಕ್ತಿಸತ್ಕಾರಪೂರ್ವಕಮ್ ॥೮॥

ಭುಕ್ತವಂತಂ ನಿಜಾಚಾರ್ಯಮಾಚಾಂತಂ ಸುಖಮಾಸ್ಥಿತಮ್ ।
ಭೂಯೋಭೂಯಃ ಪ್ರಣಮ್ಯಾಗ್ರೇ ಸ್ಥಿತೌ ತಾವಗ್ರಜಾನುಜೌ ॥೯॥

ನಾರದಸ್ತೌ ಪುನಃ ಪ್ರಾಹ ಯನ್ಮಯೋಕ್ತಂ ಯುವಾಂ ಪ್ರತಿ ।
ಜ್ಞಾನಂ ಪರಮಕಂ ತೇನ ಕೃತಕೃತ್ಯೌ ಭವಿಷ್ಯಥಃ ॥೧೦॥

ದೇವರ್ಷಿರಿತಿ ತಾವುಕ್ತ್ವಾ ಯಥಾಗತಮಗಾನ್ಮುನಿಃ ।
ಅಭೂತಾಂ ಭ್ರಾತರೌ ಖಿನ್ನೌ ಗತೇ ತಸ್ಮಿನ್ ಮಹಾಮುನೌ ॥೧೧॥

# ಒಂಬತ್ತನೆಯ ಅಧ್ಯಾಯ

ಸೂತರ್ಷು ಹೇಳಿದರು –

ನಂತರ ತಮ್ಮ ಸ್ಥಾನಕ್ಕೆ ತೆರಳಲಿಚ್ಛಿಸಿದ ತಮ್ಮ ಗುರುಗಳಾದ ನಾರದ ಮಹರ್ಷಿಗಳನ್ನು ಕಂಡು ಆ ಬ್ರಾಹ್ಮಣರು ಸಾಷ್ಟಾಂಗ ನಮಿಸಿ ಪ್ರಾರ್ಥಿಸಿದರು.॥೧॥

ಗುರುವರ್ಯರೇ! ಬಹುಕಾಲದಿಂದ ಹೃದಯದಲ್ಲಿ ಸಂಶಯ ರೋಗದಿಂದ ಬಳಲುತ್ತಿದ್ದ ನಮಗೆ ಬವವೈದ್ಯರಾದ ನೀವು ಸರಿಯಾದ ಚಿಕಿತ್ಸೆಯನ್ನು ಮಾಡಿದಿರಿ. ॥೨॥

ಜನ್ಮಕೊಟ್ಟ ತಂದೆ, ಆತ್ಮಜ್ಞಾನವನ್ನು ಕೊಡುವವ ಇವರಿಬ್ಬರಲ್ಲಿ ಆತ್ಮಜ್ಞಾನವನ್ನು ನೀಡುವವನೇ ನಿಜವಾದ ತಂದೆ ಅಂಥ ಆಚಾರ್ಯನು ಪ್ರಾಣಗಳು – ಧನ – ಗೃಹ – ವತ್ತಿ ಇವರೆಲ್ಲದಿಂದಲೂ ಸೇವೆ ಸ್ವೀಕರಿಸಲು ಯೋಗ್ಯನಾಗುತ್ತಾನೆ. ಗುರುವರ್ಯ ನಾರದರೇ! ತಾವೇ ನಮಗೆ ತಂದೆ ತಾಯಿ, ಬಂಧು ಬಳಗ, ಗೆಳೆಯರು, ತಾವೇ ಗುರುಗಳು ತಾವೇ ನಮಗೆ ಅವಿದ್ಯೆಯ ದಡವನ್ನು ತೋರಿಸಿದಿರಿ ॥೩–೪॥

ಅಜ್ಞಾನವೆಂಬ ಕತ್ತಲೆಯಿಂದ ಕುರುಡನಾದವನ ಕಣ್ಣುಗಳನ್ನು ಜ್ಞಾನವೆಂಬ ಕಾಡಿಗೆಕಡ್ಡಿಯಿಂದ ತೆರೆಸುವವನೇ ನಿಜವಾದ ಗುರು. ಆತನು ಎಲ್ಲದಕ್ಕೂ ಅರ್ಹನಾಗುವನು ॥೫॥

''ಪ್ರಭೋ! ಸದ್ಗುರೋ! ತಮ್ಮ ಪಾದಧೂಳಿಯಿಂದ ನಮ್ಮ ಗೃಹವನ್ನು ಪುನೀತಗೊಳಿಸುವೆವು. ಆದ ಕಾರಣ ತಾವು ದಯಮಾಡಿಸಬೇಕು'' ಎಂದು ಪ್ರಾರ್ಥಿಸಿ, ನಾರದರನ್ನು ತಮ್ಮ ಗೃಹಕ್ಕೆ ಕರೆದೊಯ್ದರು. ॥೬॥

ಬುದ್ಧಿವಂತನಾದ ಶಿವಶರ್ಮನು ತನ್ನ ತಮ್ಮನಾದ ವಿಷ್ಣುಶರ್ಮನೊಡನೆ ಆದರದಿಂದ ತನ್ನ ಗೃಹಕ್ಕೆ ನಾರದರನ್ನು ಬರಮಾಡಿಕೊಂಡು ಮಧುಪರ್ಕಾದಿಗಳಿಂದ ವಿಧಿವತ್ತಾಗಿ ಪೂಜಿಸಿದನು. ॥೭॥

– ಹೀಗೆ ನಾರದ ಮುನಿಗಳನ್ನು ಭಕ್ತ್ಯಾದರಗಳಿಂದ ಸತ್ಕರಿಸಿ ''ಸಕ್ಕರ, ಜೇನುತುಪ್ಪ, ತುಪ್ಪ'' ಇವುಗಳನ್ನು ಹಾಕಿ ಸಂಸ್ಕರಿಸಿದ ಪಾಯಸಾದಿಗಳಿಂದ ನಾರದರಿಗೆ ಉಣಬಡಿಸಿದನು. ॥೮॥

ತೃಪ್ತಿಯಾಗುವಂತೆ ಉಂಡು ಆಚಮನ ಮಾಡಿ ಕುಳಿತಿದ್ದ ತಮ್ಮ ಆಚಾರ್ಯರಾದ ನಾರದರನ್ನು ಆ ಅಣ್ಣತಮ್ಮಂದಿರು ಪುನಃ ಪುನಃ ನಮಿಸಿ ಅವರೆದುರು ಕೈಮುಗಿದು ನಿಂತರು. ॥೯॥

ದೇವರ್ಷಿಗಳಾದ ನಾರದರು 'ನಾನು ನಿಮ್ಮಿಬ್ಬರಿಗೆ ಪರಮ ಶ್ರೇಷ್ಠವಾದ ಆತ್ಮಜ್ಞಾನವನ್ನು ತಿಳಿಸಿದೆ. ಆದರಿಂದ ನೀವಿಬ್ಬರೂ ಧನ್ಯರಾಗುವಿರಿ' ಎಂದು ಹೇಳಿ ಬಂದಂತೆಯೇ ತಮ್ಮ ಸ್ಥಾನಕ್ಕೆ ತೆರಳಿದರು. ಅವರು ಅತ್ತ ತೆರಳಲಾಗಿ ಶಿವಶರ್ಮ ವಿಷ್ಣುಶರ್ಮರೀರ್ವರೂ ಬಹಳ ಖಿನ್ನರಾದರು. ॥ ೧೦–೧೧ ॥

ಸಂಸಾರಭಾರಂ ನಿಕ್ಷಿಪ್ಯ ಸ್ವಸ್ವಪುತ್ರೇಷು ತೌ ತದಾ ।
ಬ್ರಹ್ಮಧ್ಯಾನಪರೌ ನಿತ್ಯಂ ವಿವಿಕ್ತಸ್ಥೌ ಬಭೂವತುಃ ॥೧೨॥

ವಿಲಾಪ್ಯ ಭೂಮಿಂ ಪಯಸಿ ತದಗ್ನೌ ತಂ ನಭಸ್ವತಿ ।
ತಮಾಕಾಶೇ ಸತನ್ಮಾತ್ರಾಣ್ಯೇತಾನಿ ಪ್ರವಿಲಾಪ್ಯ ತು ॥೧೩॥

ಅಹಂಕಾರೇ ತಮಾಕಾಶಂ ಸಶಬ್ದಂ ಪ್ರವಿಲಾಪ್ಯ ಚ ।
ಅಹಂಕಾರಂ ಮಹತ್ತತ್ತ್ವೇ ಮಹತ್ತತ್ತ್ವಂ ಸ್ವಕಾರಣೇ ॥೧೪॥

ವಿಲಾಪ್ಯ ಪ್ರಕೃತಿಂ ಪಂಚವಿಂಶಕೇ ಪುರುಷೇ ಪರೇ ।
ಮಹಾವಾಕ್ಯಮಖಂಡಾರ್ಥಂ ಭಾವಯಾನೌ ನಿರಂತರಮ್ ॥೧೫॥

ತ್ಯಕ್ತೇಷಣಾತ್ರಯೌ ಲೋಕೇ ಸಂತ್ಯಕ್ತಾಹಂಮತೀ ಉಭೌ ।
ಮಾನಾಪಮಾನಯೋಸ್ತುಲ್ಯೌ ತುಲ್ಯೌ ಮಿತ್ರಾರಿಪಕ್ಷಯೋಃ ॥೧೬॥

ತದ್ಬುದ್ಧೀ ಚ ತದಾತ್ಮಾನೌ ತನ್ನಿಷ್ಠೌ ತತ್ಪರಾಯಣೌ ।
ವಿಲೋಕಯಂತೌ ನಿಖಿಲಂ ಜಗನ್ಮೃಗಜಲೋಪಮಮ್ ॥೧೭॥

ಸಮಾಧಿಸ್ಥೌ ಘೂರ್ಣಿತಾಕ್ಷೌ ಸದಾ ಮದಗಜಾವಿವ ।
ಕಾಮಚಾರೌ ಕಾಮಭಕ್ಷೌ ಯತ್ರ ಕ್ವಚನ ಶಾಯಿನೌ ॥೧೮॥

ಕ್ವಚಿದ್ಬಾಲೌ ಕ್ವಚಿನ್ಮತ್ತೌ ಪಿಶಾಚೌ ಚ ಕ್ವಚಿತ್ ಕ್ವಚಿತ್ ।
ಲೋಕೈರಾಭಾಷ್ಯಮಾಣೌ ತಾವಭಾಷೇತಾಮಸಂಗತಮ್ ॥೧೯॥

ಮುಕ್ತೌ ವಿಧಿನಿಷೇಧಾಭ್ಯಾಂ ನಿಗಡಾಭ್ಯಾಂ ಕ್ರಿಯಾವತಾಮ್ ।
ಕೋಽತ್ರ ರೋದ್ಧುಂ ಸಮರ್ಥಃ ಸ್ಯಾತ್ತಾವಲೌಕಿಕವಾರಣೌ ॥೨೦॥

ಪಂಚಕೋಶಾಖ್ಯಯೈಃ ಪಾಶೈರ್ಬದ್ಧಮೇತಜ್ಜಗತ್ತ್ರಯಮ್ ।
ಕ್ಲೇಶಂ ಮಹಾಂತಂ ಲಭತೇ ವಿನೈಕಂ ಬ್ರಹ್ಮದರ್ಶಿನಮ್ ॥೨೧॥

ಸಂಚಿತೇಷು ವಿನಷ್ಟೇಷು ಕ್ರಿಯಮಾಣೈಃ ಸಹೈವ ಹಿ ।
ಪ್ರಾರಬ್ಧಂ ಲೋಕದೃಷ್ಟ್ಯೈವ ದೃಶ್ಯತೇ ಬ್ರಹ್ಮದರ್ಶಿನಾಮ್ ॥೨೨॥

ಆದೇಹಪಾತಾತ್ಪ್ರಾರಬ್ಧಂ ಭುಂಜಾನೌ ತೌ ಯದೃಚ್ಛಯಾ ।
ಲೋಕೇ ಚರಂತೌ ದೇವರ್ಷಿರ್ದದರ್ಶ ಪುನರಾಗತಃ ॥೨೩॥

ಬ್ರಹ್ಮಭಾವಂ ಗತೌ ತೌ ಹಿ ಗ್ರಸ್ತತ್ರಿಪುಟಿಕೌ ದ್ವಿಜೌ ।
ವಿಲೋಕ್ಯ ನಾರದಃ ಪ್ರೀತ ಆಲಿಲಿಂಗ ಪುನಃ ಪುನಃ ॥೨೪॥

ಮುಂದ ಅವರಿಬ್ಬರೂ ಸಂಸಾರ ಭಾರವನ್ನು ತಮ್ಮ ತಮ್ಮ ಮಕ್ಕಳಿಗೆ ವಹಿಸಿ ಅನವರತ ಪರಬ್ರಹ್ಮವನ್ನೇ ಚಿಂತಿಸಲು ಏಕಾಂತಸ್ಥಳವನ್ನು ಆಶ್ರಯಿಸಿದರು. ।।೧೨।।

ಭೂಮಿಯನ್ನು ಜಲದಲ್ಲಿ, ಜಲವನ್ನು ಅಗ್ನಿಯಲ್ಲಿ, ಅಗ್ನಿಯನ್ನು ವಾಯುವಿನಲ್ಲಿ, ವಾಯುವನ್ನು ಆಕಾಶದಲ್ಲಿ, ಈ ರೀತಿ ತನ್ಮಾತ್ರಗಳೊಂದಿಗೆ ಅವುಗಳನ್ನು ಉಪಸಂಹರಿಸಿ, ಅಹಂಕಾರದಲ್ಲಿ ಶಬ್ದಸಹಿತವಾದ ಆಕಾಶವನ್ನೂ, ಅಹಂಕಾರವನ್ನು ಮಹತ್ತತ್ತ್ವದಲ್ಲಿ, ಮಹತ್ತತ್ತ್ವವನ್ನು ಕಾರಣ ಶರೀರದಲ್ಲಿ (ಪ್ರಕೃತಿಯಲ್ಲಿ ಅಂದರೆ ಅವಿದ್ಯೆಯಲ್ಲಿ) ಉಪಸಂಹರಿಸಿ, ಪ್ರಕೃತಿಯನ್ನು ಇಪ್ಪತ್ತೈದನೇ ತತ್ತ್ವವಾದ ಪುರುಷನಲ್ಲಿ ಉಪಸಂಹರಿಸಿ, ಅವರಿಬ್ಬರೂ ಅನವರತ ಮಹಾವಾಕ್ಯವನ್ನೂ ಅದ್ವೈತತತ್ತ್ವವನ್ನೂ ಚಿಂತಿಸುತ್ತ, ಏಷಣಾತ್ರಯ ಗಳನ್ನು ತ್ಯಜಿಸಿ ಜಗತ್ತಿನಲ್ಲಿ ಅಭಿಮಾನವನ್ನು ಸಂಪೂರ್ಣವಾಗಿ ಬಿಟ್ಟರು ಮಾನ–ಅವಮಾನ ಹಾಗೂ ಮಿತ್ರ–ಶತ್ರು ಇವುಗಳಲ್ಲಿ ಸಮಭಾವವನ್ನು ಹೊಂದಿದರು ।೧೩–೧೭।

ಬ್ರಹ್ಮಬುದ್ಧಿಯವರಾಗಿ, ಬ್ರಹ್ಮನಿಷ್ಠರಾಗಿ, ಬ್ರಹ್ಮಸ್ವರೂಪವನ್ನೇ ಚಿಂತಿಸುತ್ತ ಅದರಲ್ಲಿಯೇ ಆಸಕ್ತರಾಗಿ ಈ ಜಗತ್ತು ಬಿಸಿಲ್ಗುದುರೆಯ ಹಾಗೆಂದು ಅರಿತರು ।।೧೭।।

ಜಿತೇಂದ್ರಿಯರಾಗಿ ಸಮಾಧಿಸ್ಥಿತಿಗೇರಿದ ಅವರಿಬ್ಬರೂ ಸರ್ವದಾ ಮದಗಜ ಗಳಂತ ಸ್ವೇಚ್ಛೆಯಿಂದ ಸಂಚರಿಸುತ್ತ, ಬೇಕೆನಿಸಿದಾಗ ತಿನ್ನುತ್ತ, ಎಲ್ಲಾದರೂ ಮಲಗುತ್ತಾ ಇರುತ್ತಿದರು. ।।೧೮।।

ಕೆಲವು ಸಲ ಬಾಲರಂತಿದ್ದರೆ, ಕೆಲವೊಮ್ಮೆ ಉನ್ಮತ್ತರಂತೆಯೂ, ಇನ್ನು ಕೆಲವು ಬಾರಿ ಪಿಶಾಚರಂತೆಯೂ ಇರುತ್ತಿದ್ದರು. ಕೆಲಬಾರಿ ಜನರು ಮಾತನಾಡಿಸಿದಾಗ ಅವರ ಜೊತೆಗೆ ಅಸಂಬದ್ಧವಾಗಿ ಮಾತನಾಡುತ್ತಿದ್ದರು. ।।೧೯।।

ಕರ್ಮ ಮಾಡುವವರಿಗೆ ಸ್ವೈರಾಚಾರಕ್ಕೆ ನಿಯಾಮಕವಾಗಿರುವ ವಿಧಿನಿಷೇಧ ಗಳಿಂದ ಮುಕ್ತರಾಗಿ ದಿವ್ಯ ಗಜಗಳಂತೆ ಅಡ್ಡಾಡುತ್ತಿದ್ದ ಅವರಿಬ್ಬರನ್ನು ತಡೆಯಲು ಯಾವನು ತಾನೇ ಸಮರ್ಥನಾಗುವನು? ।।೨೦।।

ಪಂಚಕೋಶವೆಂಬ ಪಾಶಗಳಿಂದ ಮೂರುಲೋಕಗಳೂ ಕಟ್ಟಲ್ಪಟ್ಟಿವೆ. ಇದರಿಂದ ಬ್ರಹ್ಮಜ್ಞಾನಿಯ ಹೊರತಾಗಿ ಇತರರೆಲ್ಲ ಬಹುಕ್ಲೇಶವನ್ನು ಹೊಂದುವರು. ।।೨೧।।

ಬ್ರಹ್ಮಜ್ಞಾನಿಯ ಸಂಚಿತ ಮತ್ತು ಆಗಾಮಿ ಕರ್ಮಗಳು ನಾಶಗೊಂಡ ಮೇಲೆ ಆತನಿಗೆ ಕರ್ಮ ಲೇಪವು ತಟ್ಟುವದಿಲ್ಲ. ಪ್ರಾರಬ್ಧ ಕರ್ಮವು ಅವಶ್ಯ ಅನುಭವಿಸಬೇಕಾದ್ದರಿಂದ ಸಾಮಾನ್ಯ ಜನರಿಗೆ ಅದು ಲೇಪವಿದ್ದಂತೆ ತೋರುತ್ತದೆ. ತಮ್ಮ ದೇಹವು ಬೀಳುವವರೆಗೂ ಎದುರು ನೋಡದೇ ಬಂದ ಪ್ರಾರಬ್ಧವನ್ನು ಅನುಭೋಗಿಸುತ್ತ ಲೋಕದಲ್ಲಿ ಸಂಚರಿಸುತ್ತಿದ್ದ ಅವರಿಬ್ಬರನ್ನು ಪುನಃ ಓಂತಿರುಗಿದ ದೇವರ್ಷಿ ನಾರದರು ಕಂಡರು. ।। ೨೨–೨೩ ।।

ಜ್ಞಾತಾ, ಜ್ಞೇಯ, ಜ್ಞಾನ (ತ್ರಿಪುಟೀ) ಭಾವವನ್ನು ತ್ಯಜಿಸಿ ಬ್ರಹ್ಮಭಾವವನ್ನು ಅನುಭವಿಸುತ್ತಿದ್ದ ಆ ಇಬ್ಬರು ವಿಪ್ರರನ್ನು ಕಂಡು ಸಂತುಷ್ಟರಾದ ನಾರದರು ಅವರನ್ನು ಆಲಂಗಿಸಿದರು. ।।೨೪।।

ತಯೋರ್ದರ್ಶನಸಂಜಾತಪರಮಾನಂದಮೇದುರಃ ।
ನನರ್ತ ನಾರದೋಽತ್ಯುಚ್ಚೈಃ ಶೋಭನಂ ಶೋಭನಂ ಬ್ರುವನ್ ॥೨೫॥

ಭವಾಕೂಪಾರಪಾರೀಣೌ ಬ್ರಹ್ಮಭೂಯಂ ಗತಾವಿಮೌ ।
ಯುವಯೋಃ ಕ್ವ ಗತೋ ಭೇದ ಇತಿ ಪೃಚ್ಛಾಮಿ ಕಾಪಥಮ್ ॥೨೬॥

ಇತ್ಯುಕ್ತ್ವಾ ಪುನರಾಲಿಂಗ್ಯ ತಾವುಭೌ ಬ್ರಾಹ್ಮಣೋತ್ತಮೌ ।
ತತೋ ವಿಷ್ಣುಂ ಶಿವಂ ದೃಷ್ಟ್ವಾ ಯಯಾವಾಕಾಶಗೋ ಮುನಿಃ ॥೨೭॥

ಕಾಲೇ ಪ್ರಾಪ್ತೇ ತಯೋರ್ದೇಹೌ ಪತಿತೌ ಸ್ಥೂಲಸಂಜ್ಞಿತೌ ।
ಲಿಂಗಭಂಗೋಽಪಿ ಸಂಜಾತಃ ಸ ತು ಶಾಸ್ತ್ರೈಕಗೋಚರಃ ॥೨೮॥

ನಾರದಾನುಗ್ರಹಾದೇವಂ ಭೇದಬುದ್ಧಿಂ ವಿಹಾಯ ತೌ ।
ಬ್ರಹ್ಮಭಾವಂ ಗತೌ ತಸ್ಮಾದ್ಭೇದಃ ಸಂಸಾರಕಾರಣಮ್ ॥೨೯॥

ಸಾಲೋಕ್ಯಮಪಿ ಸಾಮೀಪ್ಯಂ ಸಾರೂಪ್ಯಂ ಸಾರ್ಷ್ಟಿರೇವಚ ।
ಏತೇಷು ಮುಕ್ತಿಶಬ್ದೋಽಯಮುಪಚಾರಾತ್ಪ್ರಯುಜ್ಯತೇ ॥೩೦॥

ಅತ ಏವಹಿ ವೈಕುಂಠಾಜ್ಜಯೋ ವಿಜಯಕಸ್ತಥಾ।
ಆಸುರೀಂ ಯೋನಿಮಾಪನ್ನೌ ರಾಕ್ಷಸೀಂಚ ತತೋ ಗತೌ ॥೩೧॥

ಸಗುಣಬ್ರಹ್ಮನಿಷ್ಠಾನಾಂ ವಿರಕ್ತಾನಾಂ ಮಹಾತ್ಮನಾಮ್ ।
ಬ್ರಹ್ಮಲೋಕಂ ಗತಾನಾಂ ತು ಜ್ಞಾನಾತ್ಕೈವಲ್ಯಮೀರಿತಮ್ ॥೩೨॥

ವೀರನಾರಾಯಣಸ್ಯೇದಂ ಮಾಹಾತ್ಮ್ಯಂ ಕಥಿತಂ ಮಯಾ ।
ಭವತಾಂ ಪ್ರೀತಯೇ ವಿಪ್ರಾಃ ಕಿಂ ಭೂಯಃ ಶ್ರೋತುಮಿಚ್ಛಥ ॥೩೩॥

**ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ**
**ಕ್ರತುಪುರಮಾಹಾತ್ಮ್ಯೇ**
**ವಿಪ್ರಕೈವಲ್ಯಕಥನಂ ನಾಮ ನವಮೋಽಧ್ಯಾಯಃ**

ಅವರಿಬ್ಬರನ್ನೂ ಕಂಡು ಹಿಡಿಸಲಾರದಷ್ಟು ಮುದಗೊಂಡ ದೇವರ್ಷಿ ನಾರದರು 'ಈಗ ಸರಿಯಾಯಿತು! ಸುಂದರವಾಯಿತು!' ಎಂದು ಜೋರಾಗಿ ಹೇಳುತ್ತ ನರ್ತಿಸಹತ್ತಿದರು ||೨೫||

ಭವಸಾಗರವನ್ನು ದಾಟಿದ ಈ ಇಬ್ಬರು ವಿಪ್ರೋತ್ತಮರು ಇದೀಗ ಬ್ರಹ್ಮತ್ತ್ವವನ್ನು ಹೊಂದಿದ್ದಾರೆ "ನಿಮ್ಮಿಬ್ಬರಲ್ಲಿದ್ದ ಭೇದಬುದ್ಧಿ ಎಲ್ಲಿ ಹೋಯಿತೆಂದು ಯಾರನ್ನು ಕೇಳಲಿ?" ಎನ್ನುತ್ತ ನಾರದರು ಪುನಃ ಪುನಃ ಬ್ರಹ್ಮಜ್ಞಾನಿಗಳಾದ ಅವರಿಬ್ಬರನ್ನು ಆಲಂಗಿಸಿದರು. ನಂತರ ಶಂಕರನನ್ನೂ ಶ್ರೀಹರಿಯನ್ನೂ ಕಂಡು ಗಗನ ಮಾರ್ಗದಿಂದ ನಾರದ ಮಹರ್ಷಿಗಳು ಹಿಂತಿರುಗಿದರು. || ೨೬–೨೭ ||

ಕಾಲಕ್ರಮೇಣ ಅವರಿಬ್ಬರ ಸ್ಥೂಲದೇಹವು ನಾಶಹೊಂದಿದ ನಂತರ ಲಿಂಗ ದೇಹವೂ ಸಹ ವಿಲಯ ಹೊಂದಿತು ಆದರ ಈ ಲಿಂಗ (ಕಾರಣ) ದೇಹಪಾತವು ಶಾಸ್ತ್ರದೃಷ್ಟಿಗ ಮಾತ್ರ ಗೋಚರಿಸುವದು. ||೨೮||

ದೇವರ್ಷಿನಾರದರ ಪರಮಾನುಗ್ರಹದಿಂದ ಅವರಿಬ್ಬರೂ ಭೇದಬುದ್ಧಿಯನ್ನು ಬಿಟ್ಟು ಬ್ರಹ್ಮಸಾಯುಜ್ಯ ಹೊಂದಿದರು. ಆದ್ದರಿಂದ ಭೇದವು ಸರ್ವದಾ ಸಂಸಾರಕ್ಕೆ ಕಾರಣವಾಗಿರುವದು. ||೨೯||

"ಸಾಲೋಕ್ಯ – ಸಾಮೀಪ್ಯ – ಸಾರೂಪ್ಯ – ಸಾರ್ಷ್ಟಿ," ಇವುಗಳಿಗ "ಮುಕ್ತಿ" ಎಂದು ಕೇವಲ ಔಪಚಾರಿಕವಾಗಿ ಹೇಳುತ್ತಾರೆ ||೩೦||

ಆದ್ದರಿಂದಲೇ 'ಜಯ, ವಿಜಯರು' ವೈಕುಂಠದಿಂದ ಭುವಿಗೆ ಬಂದು ಅಸುರರೂ ನಂತರ ರಾಕ್ಷಸರೂ ಆದರು. ||೩೧||

ವಿರಕ್ತರಾದ ಮಹಾತ್ಮರು ಸಗುಣೋಪಾಸನೆಯಿಂದ ಬ್ರಹ್ಮಲೋಕವನ್ನು ಹೊಂದಿದರೂ ಅವರಿಗೆ ಜ್ಞಾನದಿಂದಲೇ ಮುಕ್ತಿ ಸಿಗುವದೆಂದು ವೇದದಲ್ಲಿ ಹೇಳಲಾಗಿದೆ. ||೩೨||

"ಮುನಿಗಳೇ! ಶ್ರೀ ವೀರನಾರಾಯಣನ ಈ ಮಾಹಾತ್ಮ್ಯೆಯನ್ನು ನಿಮ್ಮ ಸಂತೋಷಕ್ಕಾಗಿ ಹೇಳಿದೆನು. ದ್ವಿಜೋತ್ತಮರೇ! ತಾವು ಮತ್ತೂ ಈ ಮಾಹಾತ್ಮ್ಯೆಯನ್ನು ಕೇಳಲಿಚ್ಛಿಸುವಿರಾ?" ಎಂದು ಸೂತರು ಪ್ರಶ್ನಿಸಿದರು. ||೩೩||

**ಶ್ರೀ ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ**
**ಕ್ರತುಪುರಮಾಹಾತ್ಮ್ಯೆಯಲ್ಲಿ ವಿಪ್ರಕೈವಲ್ಯ ಕಥನವೆಂಬ**
**ಒಂಬತ್ತನೆಯ ಅಧ್ಯಾಯವು ಮುಗಿಯಿತು.**

# ಅಥ ದಶಮೋಽಧ್ಯಾಯಃ

ಋಷಯ ಊಚುಃ —

ವೀರನಾರಾಯಣಾತ್ಪೂರ್ವಂ ನೃಸಿಂಹಃ ಸೂತನಂದನ! ।
ತತ್ರೋವಾಸೇತಿ ಯತ್ಪ್ರೋಕ್ತಂ ಬ್ರೂಹಿ ತದ್ವಾಸಕಾರಣಮ್ ॥೧॥

ಸೂತ ಉವಾಚ —

ಸಾಧು ಪೃಷ್ಟಂ ಮಹಾಭಾಗಾ ಕಥಯಾಮಿ ಕಥಾಮಿಮಾಮ್ ।
ಶೃಣುಧ್ವಂ ತತ್ರ ಭಗವಾನ್ ನರಸಿಂಹೋ ಯಥಾಽಽಗತಃ ॥೨॥
ಆಸೀತ್ ಕ್ರತುಪುರೇ ಕಶ್ಚಿದ್ಬ್ರಾಹ್ಮಣಃ ಸಂಶಿತವ್ರತಃ ।
ಪುಂಡರೀಕಾಖ್ಯಯಃ ಸಾಧುರನೂಚಾನಶ್ಚ ಕೂಕುದಃ ॥೩॥
ನೃಸಿಂಹೋಪಾಸಕೋ ನಿತ್ಯಂ ಮಂತ್ರರಾಜಸ್ಯ ಜಾಪಕಃ ।
ಅಹೋಬಲನೃಸಿಂಹಸ್ಯ ಯಾತ್ರಿಕಃ ಪ್ರತಿವತ್ಸರಮ್ ॥೪॥
ಏವಂ ಬಹ್ವೀಃ ಸಮಾಃ ಕುರ್ವನ್ ಯಾತ್ರಾಂ ದೇವಸ್ಯ ಪಾಡವಃ ।
ಜರತ್ವಮಗಮತ್ಕಾಲೇ ಯಾತ್ರಾಂ ಕರ್ತುಂ ನ ಶಕ್ನುವನ್ ॥೫॥
ವೃದ್ಧಃ ಕ್ರತುಪುರೇ ತಿಷ್ಠನ್ನಜಸ್ರಂ ಬ್ರಾಹ್ಮಣೋತ್ತಮಃ ।
ಮಂತ್ರರಾಜಂ ಜಪನ್ ಭಕ್ತ್ಯಾ ನೃಸಿಂಹಾಷ್ಟೋತ್ತರಂ ತಥಾ ॥೬॥
ನಿನಾಯ ಕಾಲಂ ಮರಣಂ ಪ್ರತೀಕ್ಷನ್ ಶಿಥಿಲಾಂಗಕಃ ।
ಸ್ಮರನ್ನೃಸಿಂಹಂ ಸತತಂ ತಮೇವ ಹೃದಿ ಭಾವಯನ್ ॥೭॥

ಋಷಯ ಊಚುಃ —

ನಾಮ್ನಾಮಷ್ಟೋತ್ತರಂ ಶ್ರೋತುಮಿಚ್ಛಾಮೋ ನೃಹರೇರ್ವಯಮ್ ।
ಸ್ತೋತ್ರಂ ಚ ತತ್ಕೃತಂ ಸೂತ! ತನ್ನಃ ಶಂಸಿತುಮರ್ಹಸಿ ॥೮॥

ಸೂತ ಉವಾಚ —

ನಾಮ್ನಾಮಷ್ಟೋತ್ತರಂ ಪುಣ್ಯಂ ಕಥಯಿಷ್ಯಾಮಿ ವಃ ಶುಭಮ್ ।
ಶೃಣುಧ್ವಂ ನರಸಿಂಹಸ್ಯ ಸ್ತೋತ್ರಂ ಚ ಮುನಿಸತ್ತಮಾಃ ॥೯॥
ಋಷಿರ್ಬ್ರಹ್ಮಾತ್ರ ದೇವಸ್ತು ಸೋಽನುಷ್ಟುಪ್ ಛಂದ ಉಚ್ಯತೇ।
ಧರ್ಮಾರ್ಥಕಾಮಮೋಕ್ಷಾರ್ಥೇ ವಿನಿಯೋಗಃ ಪ್ರಕೀರ್ತಿತಃ ॥೧೦॥
ಕ್ಷ್ರಾಂ ಕ್ಷ್ರೀಂ ಕ್ಷ್ರೂಂ ಕ್ಷ್ರೈಂ ತಥಾ ಕ್ಷ್ರೌಂ ಕ್ಷ್ರಃ ಏಭಿಶ್ಚ ಪ್ರಣವಾದಿಕೈಃ ।
ಷಡ್ಭಿರ್ಬೀಜೈಃ ಷಡಂಗೇಷು ಕುರ್ಯಾನ್ನ್ಯಾಸಂ ಸಮಾಹಿತಃ ॥೧೧॥

# ಹತ್ತನೆಯ ಅಧ್ಯಾಯ

**ಋಷಿಗಳು ಹೇಳಿದರು :**

ಸೂತನೇ! ಶ್ರೀ ವೀರನಾರಾಯಣನಿಗಿಂತಲೂ ಮೊದಲೇ ಅಲ್ಲಿ ಶ್ರೀನೃಸಿಂಹ ಸ್ವಾಮಿಯು ವಾಸಿಸಿದನೆಂದು ಹಿಂದೆ ಹೇಳಿದಿ ನೃಸಿಂಹ ಸ್ವಾಮಿಯು ಅಲ್ಲಿ ವಾಸಿಸಲು ಕಾರಣವೇನು? ||೧||

ಮಹಾನುಭಾವರೇ! ಸರಿಯಾಗಿಯೇ ಪ್ರಶ್ನಿಸಿದಿರಿ ಅಲ್ಲಿಗೆ ಭಗವಾನ್ ನೃಸಿಂಹ ಸ್ವಾಮಿಯು ಹೇಗೆ ಬಂದನೆಂಬ ಕಥೆಯನ್ನು ಹೇಳುವೆ ಇದನ್ನು ಆಲಿಸಿರಿ ||೨||

ಹಿಂದೆ ಕ್ರತುಪುರದಲ್ಲಿ ನಿಯಮಶೀಲನಾದ ಬ್ರಾಹ್ಮಣನೊಬ್ಬನಿದ್ದನು. ಆತನ ಹೆಸರು ಪುಂಡರೀಕ. ಸಾಧುವಾದ ಆತನು ವೇದವೇದಾಂಗಗಳನ್ನು ಅಧ್ಯಯನ ಮಾಡಿದ್ದನು ಹಾಗೂ ಸಾಲಂಕೃತ ಕನ್ಯೆಯರನ್ನು ದಾನ ಮಾಡಿದವನಾಗಿದ್ದನು ನೃಸಿಂಹೋಪಾಸಕನಾದ ಆತನು ನಿತ್ಯವೂ ನೃಸಿಂಹ ಮಂತ್ರರಾಜವನ್ನು ಜಪಿಸುತ್ತಿದ್ದನು ಪ್ರತಿವರ್ಷವೂ ನೃಸಿಂಹಸ್ವಾಮಿಯನ್ನು ದರ್ಶಿಸಲು (ಅಹೋಬಲ) ಹೊಂಬಳಕ್ಷೇತ್ರಕ್ಕೆ ಯಾತ್ರಿಕನಾಗಿ ಹೋಗುತ್ತಿದ್ದನು ಆ ಬ್ರಾಹ್ಮಣನು ಇದೇ ರೀತಿಯಾಗಿ ಬಹಳ ವರ್ಷ ಹೊಂಬಳಕ್ಕೆ ಯಾತ್ರೆ ಮಾಡಿದನು ಮುಂದೆ ವಾರ್ಧಕ್ಯ ಬಂದು ಆತನಿಗೆ ಒಮ್ಮೆಯೂ ಸಹ ಯಾತ್ರೆ ಮಾಡದಂತಾಯಿತು. || ೩-೫ ||

ವೃದ್ಧನಾದ ಆ ಬ್ರಾಹ್ಮಣೋತ್ತಮನು ಕ್ರತುಪುರದಲ್ಲಿಯೇ ಇದ್ದುಕೊಂಡು ಸತತ ಭಕ್ತಿಯಿಂದ ಮಂತ್ರರಾಜವನ್ನು ಹಾಗೂ ನೃಸಿಂಹಾಷ್ಟೋತ್ತರವನ್ನು ಜಪಿಸುತ್ತಿದ್ದನು ||೬||

ನೃಸಿಂಹನನ್ನು ಸ್ತುತಿಸುತ್ತ ಆತನನ್ನೇ ಹೃದಯದಲ್ಲಿ ಧ್ಯಾನಿಸುತ್ತ ಶಿಥಿಲದೇಹದ ಆ ವೃದ್ಧನು ತನ್ನ ಮರಣವನ್ನು ಎದುರು ನೋಡುತ್ತ ಕಾಲಕಳೆಯುತ್ತಿದ್ದನು. ||೭||

**ಋಷಿಗಳು ಪ್ರಶ್ನಿಸಿದರು :**

ಸೂತ! ಆ ಬ್ರಾಹ್ಮಣನು ಮಾಡಿದ ನೃಸಿಂಹ ಸ್ವಾಮಿಯ, ದಿವ್ಯವಾದ ಅಷ್ಟೋತ್ತರ ಶತನಾಮವನ್ನು ಕೇಳಲಿಚ್ಛಿಸಿದ್ದೇವೆ. ನಮಗದನ್ನು ನೀನು ತಿಳಿಸು ||೮||

**ಸೂತನು ಹೇಳಿದನು :**

ಮುನಿವರ್ಯರೇ! ಪಾವನವಾದ ಮಂಗಲವಾದ ಶ್ರೀನೃಸಿಂಹಾಷ್ಟೋತ್ತರ ಶತನಾಮವನ್ನೂ ಹಾಗೂ ಶ್ರೀನೃಸಿಂಹಸ್ತೋತ್ರವನ್ನೂ ಹೇಳುವೆ. ಕೇಳಿರಿ. ||೯||

ಈ ಅಷ್ಟೋತ್ತರ ಶತನಾಮಕ್ಕೆ ಋಷಿಯು ಬ್ರಹ್ಮದೇವ. ದೇವತಾ ಶ್ರೀನೃಸಿಂಹ ಅನುಷ್ಟುಪ್ ಛಂದಸ್ಸು. ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥ ಪ್ರಾಪ್ತಿಗಾಗಿ ಜಪಿಸಬೇಕು. ಕ್ಷ್ರಾಂ ಕ್ಷ್ರೀಂ ಕ್ಷ್ರೂಂ ಕ್ಷ್ರೈಂ ಕ್ಷ್ರೌಂ ಕ್ಷ್ರಃ ಇವುಗಳಿಗೆ ಮೊದಲು ಪ್ರಣವವನ್ನು ಸೇರಿಸಿ ಕರಹೃದಯಾದಿಷಡಂಗ ನ್ಯಾಸಗಳನ್ನು ಮಾಡಬೇಕು. ||೧೦-೧೧||

'ಓಂ ಸಹಸ್ರಾರ ಹುಂಫಟ್' ಕುರ್ಯಾದ್ದಿಗ್ಬಂಧನಂ ಬುಧಃ ।
ತತೋ ಧ್ಯಾಯೇನ್ನರಹರಿಂ ಸ್ವಹೃತ್ಕಮಲಮಧ್ಯತಃ ॥೧೨॥

ಕರ್ಪೂರಧಾಮಧವಲಂ ಕಟಿಕಾಂಗದಾಹಿ-
ಚ್ಛತ್ರತ್ರಿನೇತ್ರಶಶಿಶೇಖರಮಂಡಿತಾಸ್ಯಮ್ ।
ವಾಮಾಂಗಸಂಸ್ಥಿತರಮಾನಯನಾಭಿರಾಮಂ
ಶಂಖಾಬ್ಜಚಕ್ರಗದಿನಂ ನೃಹರಿಂ ಸ್ಮರಾಮಿ ॥೧೩॥

ಇತಿ ಧ್ಯಾತ್ವಾ ನರಹರಿಂ ಮಾನಸ್ಯರುಪಚಾರಕೈಃ ।
ಸಂಪೂಜ್ಯ ಪ್ರಯತೋ ಭಕ್ತ್ಯಾ ಜಪೇದಷ್ಟೋತ್ತರಂ ದ್ವಿಜಃ ॥೧೪॥

ಶ್ರೀನೃಸಿಂಹಃ ಪುಷ್ಕರಾಕ್ಷಃ ಕರಾಲೋ ವಿಕೃತಾನನಃ ।
ಹಿರಣ್ಯಕಶಿಪೋರ್ವಕ್ಷೋವಿದಾರಣನಖಾಂಕುಶಃ ॥೧೫॥

ಪ್ರಹ್ಲಾದವರದಃ ಶ್ರೀಮಾನಪ್ರಮೇಯಪರಾಕ್ರಮಃ ।
ಅಸುರಾನೀಕಸಂಹರ್ತಾ ಭಜತ್ಕಲ್ಪಮಹೀರುಹಃ ॥೧೬॥

ಜ್ವಾಲಾಮುಖಸ್ತೀಕ್ಷ್ಣಸಟಸ್ತೀಕ್ಷ್ಣದಂಷ್ಟ್ರೋ ಭಯಂಕರಃ ।
ಶಂಕೂಪಮ ಸ್ತಬ್ಧಕರ್ಣಃ ಸಟೋದ್ಧೂತಬಲಾಹಕಃ ॥೧೭॥

ತ್ರಿಣೇತ್ರಃ ಕಪಿಲಃ ಪ್ರಾಂಶುಃ ಸೋಮಸೂರ್ಯಾಗ್ನಿಲೋಚನಃ ।
ಸ್ಥೂಲಗ್ರೀವಃ ಸ್ತಬ್ಧದೃಷ್ಟಿರ್ಜಾಂಬೂನದಸಮಪ್ರಭಃ ॥೧೮॥

ದೈತ್ಯಾಂತ್ರಾವಲಿವಿಭ್ರಾಜದ್ವಿಶಾಲಹೃದಯಸ್ಥಲಃ ।
ಉಪಸಂಹೃತಸಪ್ತಾರ್ಚಿಃ ಕವಲೀಕೃತಮಾರುತಃ ॥೧೯॥

ದಿಗ್ದಂತಾವಲದರ್ಪಘ್ನಃ ಕಾದ್ರವೇಯವಿಷಾಪಹೃತ್ ।
ಆಭಿಚಾರಿಕಸಂಹರ್ತಾ ಬ್ರಹ್ಮಣ್ಯೋ ಬ್ರಹ್ಮವಿತ್ಪ್ರಿಯಃ ॥೨೦॥

ಸಮುದ್ರಗರ್ಭನಿರ್ಮಗ್ನರಸೋದ್ಧಾರವಿಚಕ್ಷಣಃ ।
ಆತ್ಮಾಗ್ರತೇಜಃಪ್ರಸರಸಂತಾಪಿತಜಗತ್ತ್ರಯಃ ॥೨೧॥

ಹೃಷೀಕೇಶೋ ಜಗತ್ಪ್ರಾಣಃ ಸರ್ವಗಃ ಸರ್ವಕಾಮದಃ ।
ವ್ಯಾಪ್ತಿಪ್ರತ್ಯಯನಾರ್ಥಾಯ ಸ್ತಂಭಾವಿಷ್ಕೃತವಿಗ್ರಹಃ ॥೨೨॥

ಹಿರಣ್ಯಕಶಿಪೂದಗ್ರಪ್ರಭಾವಶಮನೋದ್ಭಟಃ ।
ದೈತ್ಯವಕ್ಷಃಕಟಾಹಾಸ್ರನಿಮಗ್ನನಖರವ್ರಜಃ ॥೨೩॥

ಭೀಮದಂಷ್ಟ್ರೋ ಭೀಮಮುಖೋ ಭೀಮದೃಗ್ಭೀಷಣಾಕೃತಿಃ ।
ಜಗಜ್ಜನ್ಮಸ್ಥೇಮಕರ್ತಾ ಸಂಹರ್ತಾ ಕಾಲರೂಪಧೃಕ್ ॥೨೪॥

"ಓಂ ಸಹಸ್ರಾರ ಹುಂ ಫಟ್" ಎಂಬ ಮಂತ್ರದಿಂದ ದಿಗ್ಬಂಧನ ಮಾಡಿ ತನ್ನ ಹೃದಯಕಮಲಮಧ್ಯದಲ್ಲಿ ಪ್ರಭು ಶ್ರೀನೃಸಿಂಹಸ್ವಾಮಿಯನ್ನು ಧ್ಯಾನಿಸಬೇಕು. ||೧೨||

ಕರ್ಪೂರಗಿರಿಯಂತೆ ಪರಿಶುಭ್ರನಾದ, ಕಡಗ ಕೇಯೂರಗಳನ್ನು ಧರಿಸಿದ, ತ್ರಿನೇತ್ರನಾದ, ಮಸ್ತಕದಲ್ಲಿ ಚಂದ್ರನನ್ನು ಧರಿಸಿದ, ತನ್ನ ಎಡಭಾಗದಲ್ಲಿ ನಿಂತಿದ್ದ ಶ್ರೀಮಹಾಲಕ್ಷ್ಮೀದೇವಿಯ ನಯನಗಳಿಗೆ ಸುಂದರನಾಗಿ ತೋರುವ ಶಂಖಚಕ್ರ ಕಮಲ ಗದಗಳನ್ನು ಹಿಡಿದಿರುವ ಶ್ರೀ ನೃಸಿಂಹ ಸ್ವಾಮಿಯನ್ನು ಸ್ಮರಿಸುತ್ತೇನ ||೧೩||

ಈ ರೀತಿ ನೃಹರಿಯನ್ನು ಧ್ಯಾನಿಸಿ, ಮಾನಸೋಪಚಾರಗಳಿಂದ ಪೂಜಿಸಿ, ನಂತರ ದ್ವಿಜನು ಭಕ್ತಿಯಿಂದ ನೃಸಿಂಹಸ್ವಾಮಿಯ ಅಷ್ಟೋತ್ತರ ಶತನಾಮವನ್ನು ಪಠಿಸಬೇಕು ||೧೪||

ಶ್ರೀನೃಸಿಂಹ, ಪುಷ್ಕರಾಕ್ಷ, ಕರಾಲ, ವಿಕೃತಾನನಃ, ಹಿರಣ್ಯಕಶಿಪೋರ್ವಕ್ಷೋ– ವಿದಾರಣನಖಾಂಕುಶ ||೧೫||

ಪ್ರಹ್ಲಾದವರದ, ಶ್ರೀಮಾನ್, ಅಪ್ರಮೇಯಪರಾಕ್ರಮ, ಅಸುರಾನೀಕ ಸಂಹರ್ತಾ, ಭಜತ್ಕಲ್ಪಮಹೀರುಹ. ||೧೬||

ಜ್ವಾಲಾಮುಖ, ತೀಕ್ಷ್ಣಸಟ, ತೀಕ್ಷ್ಣದಂಷ್ಟ್ರ, ಭಯಂಕರ, ಶಂಕೂಪಮಸ್ತಬ್ಧಕರ್ಣ, ಸಟೋದ್ಧೂತಬಲಾಹಕ. ||೧೭||

ತ್ರಿಣೇತ್ರ, ಕಪಿಲ, ಪ್ರಾಂಶು, ಸೋಮಸೂರ್ಯಾಗ್ನಿಲೋಚನ, ಸ್ಥೂಲಗ್ರೀವ, ಸ್ತಬ್ಧದೃಷ್ಟಿ, ಜಾಂಬೂನದಸಮಪ್ರಭ. ||೧೮||

ದೈತ್ಯಾಂತ್ರಾವಲಿವಿಭ್ರಾಜದ್‌ವಿಶಾಲಹೃದಯಸ್ಥಲ, ಉಪಸಂಹೃತಸಪ್ತಾರ್ಚಿ; ಕವಲೀಕೃತಮಾರುತ; ||೧೯||

ದಿಗ್ದಂತಾವಲದರ್ಪಘ್ನ; ಕಾದ್ರವೇಯವಿಷಾಪನುತ್, ಆಭಿಚಾರಿಕಸಂಹರ್ತಾ ಬ್ರಹ್ಮಣ್ಯ, ಬ್ರಹ್ಮವಿತ್ಪ್ರಿಯ. ||೨೦||

ಸಮುದ್ರಗರ್ಭನಿರ್ಮಗ್ನರಸೋದ್ಧಾರವಿಚಕ್ಷಣ, ಅತ್ಯುಗ್ರತೇಜಃ ಪ್ರಸರಸಂತಾಪಿತ ಜಗತ್ತ್ರಯ. ||೨೧||

ಹೃಷೀಕೇಶ, ಜಗತ್ತ್ರಾಣ, ಸರ್ವಗ, ಸರ್ವಕಾಮದ, ವ್ಯಾಪ್ತಿ ಪ್ರತ್ಯಯನಾರ್ಥಾಯ ಸ್ತಂಭಾವಿಷ್ಕೃತವಿಗ್ರಹ. ||೨೨||

ಹಿರಣ್ಯಕಶಿಪೂದಗ್ರ ಪ್ರಭಾವಶಮನೋದ್ಭಟ, ದೈತ್ಯವಕ್ಷಃ ಕಟಾಹಾಸ್ರನಿಮಗ್ನ ನಖರವ್ರಜ. ||೨೩||

ಭೀಮದಂಷ್ಟ್ರ, ಭೀಮಮುಖ, ಭೀಮದೃಕ್, ಭೀಷಣಾಕೃತಿ, ಜಗಜ್ಜನ್ಮಸ್ಥೇಮ– ಕರ್ತಾ, ಸಂಹರ್ತಾ ಕಾಲರೂಪಧೃಕ್. ||೨೪||

ವಿಷ್ಣುರ್ಜಿಷ್ಣುರ್ಜಗದ್ವ್ಯಾಪೀ ವಿಶ್ವರೂಪೋ ವಿರಾಟ್ ಪ್ರಭುಃ ।
ಯೋಗಿಹೃತ್ಪದ್ಮ ನಿಲಯೋ ಯೋಗೇಶೋ ಯೋಗಿನಾಂಗತಿಃ ॥೨೫॥
ಚಿದ್ರೂಪಃ ಪ್ರಕೃತೇಃ ಸಾಕ್ಷೀ ಗುಣಾತೀತೋ ನಿರಂಜನಃ ।
ಮಾಯಾವೀ ಮಾಯಿನಾಮಗ್ರ್ಯಃ ಕಲ್ಯಾಣಗುಣಶೇವಧಿಃ ॥೨೬॥
ಕಮನೀಯತರಃ ಕಾಮ್ಯಃ ಕಾಮತಾತಃ ಕೃಪಾರ್ಣವಃ ।
ಪುಣ್ಯಕೀರ್ತಿಃ ಪುಣ್ಯಲಭ್ಯಃ ಪುಣ್ಯಶ್ರವಣಕೀರ್ತನಃ ॥೨೭॥
ಮಂತ್ರರಾಜಮಹಾಯಂತ್ರಜಾಪಕಾರ್ಚಕವಲ್ಲಭಃ ।
ಮಂತ್ರಮೂರ್ತಿಃ ಪರೇಷಾಂ ಚ ಮಂತ್ರಯಂತ್ರವಿಭಂಜನಃ ॥೨೮॥
ಉಗ್ರೋ ವೀರೋ ಮಹಾವಿಷ್ಣುಃ ಪ್ರಜ್ವಲನ್ ಸರ್ವತೋಮುಖಃ ।
ವಿಶ್ವತೋಬಾಹುರನಘೋ ವಿಶ್ವತಸ್ಸ್ತ್ರಿವಿಕ್ರಮಃ ॥೨೯॥
ಕೇಶವಃ ಕ್ಲೇಶಹಾಽನಂತಸ್ತಾರಃ ಪಾರೋ ಭವಾಂಬುಧೇಃ ।
ರಾಮೋಽಭಿರಾಮೋ ವೀರೇಶೋ ರಾವಣಾನ್ವಯದಾವಧಕ್ ॥೩೦॥
ಸೀರಾಭಿಕೃಷ್ಟಯಮುನಃ ಪ್ರಲಂಬಾದ್ಯಸುರಾಂತಕೃತ್ ।
ಬಲ್ಲವೀರಾಸರಸಿಕಃ ಕಂಸಾರಿಃ ಕಾಲಿಯಾಹಿಜಿತ್ ॥೩೦॥
ಅಷ್ಟಾದಶಾಕ್ಷೌಹಿಣೀನಾಂ ನಿಹಂತಾ ಪಾರ್ಥಸಾರಥಿಃ ।
ದೇವಕೀನಂದನಃ ಕೃಷ್ಣಃ ಪರಮಾತ್ಮಾ ಪರಾತ್ಪರಃ ॥೩೨॥
ನಾರಾಯಣೋಽಚ್ಯುತಃ ಸಚ್ಚಿತ್ ಪರಬ್ರಹ್ಮ ಪರಾಯಣಃ ।
ನಾಮ್ನಾಮಷ್ಟೋತ್ತರಶತಂ ನೃಸಿಂಹಸ್ಯ ಪರಾತ್ಮನಃ ॥೩೩॥
ಯಸ್ತ್ರಿಸಂಧ್ಯಮಿದಂ ನಿತ್ಯಂ ದ್ವಿಜಃ ಪಠತಿ ಭಕ್ತಿಮಾನ್ ।
ಭವಂತಿ ತಸ್ಯ ಭಕ್ತಸ್ಯ ಕರಸ್ಥಾಃ ಸರ್ವಸಿದ್ಧಯಃ ॥೩೪॥
ಆಪದೋ ವಿಲಯಂ ಯಾಂತಿ ನಾಶಂ ಚ ಪರಿಪಂಥಿನಃ ।
ಬ್ರಹ್ಮರಾಕ್ಷಸವೇತಾಲಕೂಷ್ಮಾಂಡಾದ್ಯಾ ಮಹಾಗ್ರಹಾಃ ॥೩೫॥
ಅಸ್ಯ ಸ್ತೋತ್ರಸ್ಯ ಪಠನಾತ್ ಪಲಾಯಂತೇ ದಿಶೋ ದಶ ।
ವಿವಾದೇ ಜಯಮಾಪ್ನೋತಿ ಸಮರ್ಥೋ ಗ್ರಂಥಧಾರಣೇ ॥೩೬॥
ಬಂಧನಾನ್ಮುಚ್ಯತೇ ಬದ್ಧೋ ರುಗ್ಣೋ ರೋಗಾದ್ವಿಮುಚ್ಯತೇ ।
ದರಿದ್ರೋ ಧನಮಾಪ್ನೋತಿ ಪುತ್ರಾರ್ಥೀ ಪುತ್ರಮಾಪ್ನುಯಾತ್ ॥೩೭॥
ಯಂ ಯಂ ಕಾಮಯತೇ ಕಾಮಂ ತಂ ತಮಾಪ್ನೋತ್ಯಸಂಶಯಃ ।
ಇತ್ಯೇತನ್ನರಸಿಂಹಸ್ಯ ನಾಮ್ನಾಮಷ್ಟೋತ್ತರಂ ಶತಮ್ ॥೩೮॥
ಕಥಿತಂ ಮುನಯಃ ಸ್ತೋತ್ರಂ ಕಥಯಾಮ್ಯಪರಾಂ ಕಥಾಮ್ ॥೩೯॥

ವಿಷ್ಣು, ಜಿಷ್ಣು, ಜಗದ್ವ್ಯಾಪೀ, ವಿಶ್ವರೂಪ, ವಿರಾಟ್‌ಪ್ರಭು, ಯೋಗಿಹೃತ್ಪದ್ಮ ನಿಲಯ, ಯೋಗೇಶ, ಯೋಗಿನಾಂಗತಿ ॥೨೫॥

ಚಿದ್ರೂಪ, ಪ್ರಕೃತೇಃ ಸಾಕ್ಷೀ, ಗುಣಾತೀತ, ನಿರಂಜನ, ಮಾಯಾವೀ, ಮಾಯಿನಾಮಗ್ರ್ಯ, ಕಲ್ಯಾಣಗುಣಶೇವಧಿ ॥೨೬॥

ಕಮನೀಯತರ, ಕಾಮ್ಯ, ಕಾಮತಾತ, ಕೃಪಾರ್ಣವ, ಪುಣ್ಯಕೀರ್ತಿ, ಪುಣ್ಯಲಭ್ಯ ಪುಣ್ಯಶ್ರವಣಕೀರ್ತನ ॥೨೭॥

ಮಂತ್ರರಾಜ ಮಹಾಯಂತ್ರಜಾಪಕಾರ್ಚಕವಲ್ಲಭ, ಮಂತ್ರಮೂರ್ತಿ, ಪರೇಷಾಂ ಮಂತ್ರಯಂತ್ರವಿಭಂಜನ ॥೨೮॥

ಉಗ್ರ, ವೀರ, ಮಹಾವಿಷ್ಣು, ಪ್ರಜ್ವಲನ್, ಸರ್ವತೋಮುಖ, ವಿಶ್ವತೋಬಾಹು, ಅನಘ, ವಿಶ್ವತಃಸ್ಥ, ತ್ರಿವಿಕ್ರಮ ॥೨೯॥

ಕೇಶವ, ಕ್ಲೇಶಹಾ, ಅನಂತ, ತಾರ, ಭವಾಂಬುಧೇಃ ಪಾರ, ರಾಮ, ಅಭಿರಾಮ, ವೀರೇಶ, ರಾವಣಾನ್ವಯದಾವಧಕ್ ॥೩೦॥

ಸೀರಾಭಿಕೃಷ್ಟಯಮುನ, ಪ್ರಲಂಬಾದ್ಯಸುರಾಂತಕೃತ್, ಬಲ್ಲವೀರಾಸ ರಸಿಕ, ಕಂಸಾರಿ, ಕಾಲಿಯಾಹಿಜಿತ್ ॥೩೧॥

ಅಷ್ಟಾದಶಾಕ್ಷೌಹಿಣೀನಾಂ ನಿಹಂತಾ, ಪಾರ್ಥಸಾರಥಿಃ ದೇವಕೀನಂದನ, ಕೃಷ್ಣ, ಪರಮಾತ್ಮಾ, ಪರಾತ್ಪರ ॥೩೨॥

ನಾರಾಯಣ, ಅಚ್ಯುತ, ಸತ್, ಚಿತ್, ಪರಬ್ರಹ್ಮ, ಪರಾಯಣ, ಈ ರೀತಿಯಿರುವ ಭಗವಾನ್ ಶ್ರೀನೃಸಿಂಹಸ್ವಾಮಿಯ ಈ ಅಷ್ಟೋತ್ತರ ಶತನಾಮವನ್ನು ನಿತ್ಯ ತ್ರಿಕಾಲದಲ್ಲಿ ಭಕ್ತಿಯಿಂದ ಪಠಿಸುವ ವಿಪ್ರರಿಗೆ ಸರ್ವಸಿದ್ಧಿಗಳೂ ಕರಗತ ವಾಗುವವು. ॥೩೩–೩೪॥

ಅವರ ಆಪತ್ತುಗಳು ಕ್ಷೀಣವಾಗಿ ಶತ್ರುಗಳು ನಾಶಹೊಂದುವರು. ಈ ಸ್ತೋತ್ರವನ್ನು ಪಠಿಸುವದರಿಂದ ‘ಬ್ರಹ್ಮರಾಕ್ಷಸ, ವೇತಾಲ, ಕೂಷ್ಮಾಂಡವೇ ಮೊದಲಾದ ಮಹಾಗ್ರಹಗಳು ದಶದಿಕ್ಕುಗಳಿಗೆ ಪಲಾಯನ ಮಾಡುವವು. ಭಕ್ತನು ವ್ಯವಹಾರದಲ್ಲಿ ಜಯಶೀಲನಾಗುವನು ಮಂದನು ಈ ಸ್ತೋತ್ರ ಪಠಣ ಪ್ರಭಾವದಿಂದ ಗ್ರಂಥಗಳನ್ನು ನೆನಪಿಟ್ಟುಕೊಳ್ಳಲು ಸಮರ್ಥನಾಗುವನು ಬದ್ಧನು ಬಂಧನದಿಂದ ವಿಮೋಚನೆ ಹೊಂದುವನು ರೋಗಿಯು ಆರೋಗ್ಯವಂತನಾಗುವನು. ದರಿದ್ರನು ಧನವನ್ನೂ, ಪುತ್ರಾಪೇಕ್ಷಿಯು ಸಂತಾನವನ್ನೂ, ಹೊಂದುವನು ಭಕ್ತನು ಏನೇನನ್ನು ಇಚ್ಛಿಸುವನೋ ಅವೆಲ್ಲವನ್ನೂ ಈ ಸ್ತೋತ್ರ ಪಠಿಸುವದರಿಂದ ಹೊಂದುವನು ಮುನಿಗಳೇ! ಇದುವರೆಗೆ ಶ್ರೀನೃಸಿಂಹ ಸ್ವಾಮಿಯ ಅಷ್ಟೋತ್ತರ ಶತನಾಮಗಳನ್ನು ಹೇಳಿದೆ. ಇನ್ನು ಶ್ರೀನೃಸಿಂಹಸ್ವಾಮಿಯ ಮಂಗಲಕರವಾದ ಸ್ತೋತ್ರವನ್ನು ಹೇಳುವೆ. ಕೇಳಿರಿ ॥ ೩೫–೩೯ ॥

**ಸೂತ ಉವಾಚ –**

ಋಷಿಭಿಃ ಸಹ ಶಕ್ರಾದ್ಯಾ ದೇವಾ ಬ್ರಹ್ಮಾಣಮಬ್ರುವನ್ ।
ಕೈರ್ಮಂತ್ರೈಃ ಸಂಸ್ತುತೋ ದೇವಸ್ತುಷ್ಟೋ ಭವತಿ ತದ್ವದ ॥೪೦॥

**ಬ್ರಹ್ಮೋವಾಚ –**

ಯೋ ವೈ ನೃಸಿಂಹೋ ಭಗವಾನಭೂದ್ಬ್ರಹ್ಮಾ ಸನಾತನಃ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೪೧॥

ಯೋ ವೈ ನೃಸಿಂಹೋ ಭಗವಾನಭೂದ್ವಿಷ್ಣುಃ ಸನಾತನಃ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೪೨॥

ಯೋ ವೈ ನೃಸಿಂಹೋ ಭಗವಾನಭೂದ್ರುದ್ರಃ ಸನಾತನಃ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೪೩॥

ಯೋ ವೈ ನೃಸಿಂಹೋ ಭಗವಾನಭವತ್ಪುರುಷಃ ಪರಃ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೪೪॥

ಯೋ ವೈ ನೃಸಿಂಹೋ ಭಗವಾನಭೂದ್ವಾಣೀ ಸನಾತನೀ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೪೫॥

ಯೋ ವೈ ನೃಸಿಂಹೋ ಭಗವಾನಭೂಲ್ಲಕ್ಷ್ಮೀಃ ಸನಾತನೀ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೪೬॥

ಯೋ ವೈ ನೃಸಿಂಹೋ ಭಗವಾನಭೂದ್ಗೌರೀ ಸನಾತನೀ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೪೭॥

ಯೋ ವೈ ನೃಸಿಂಹೋ ಭಗವಾನೋಂಕಾರೋಽಭೂತ್ಸನಾತನಃ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೪೮॥

ಯೋ ವೈ ನೃಸಿಂಹೋ ಭಗವಾನ್ ಸಪ್ತವ್ಯಾಹೃತಯೋಽಭವತ್ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೪೯॥

ಯೋವೈ ನೃಸಿಂಹೋ ಭಗವಾನ್ ಸಾಂಗಾಃ ಸಸ್ಮೃತಯೋಽಭವತ್ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೫೦॥

ಯೋ ವೈ ನೃಸಿಂಹೋ ಭಗವಾನಭೂತ್ ದಿಕ್ಪತಯೋಽಖಿಲಾಃ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೫೧॥

ಯೋ ವೈ ನೃಸಿಂಹೋ ಭಗವಾನಭೂತ್ತ್ರೇತಾ ಸನಾತನೀ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೫೨॥

**ಸೂತರು ಹೇಳಿದರು –**

ಇಂದ್ರಾದಿದೇವತೆಗಳು ಮಹರ್ಷಿಗಳೊಂದಿಗೆ ಬ್ರಹ್ಮದೇವನಲ್ಲಿಗೆ ತೆರಳಿ ದೇವ! ಯಾವ ಮಂತ್ರಗಳಿಂದ ಭಗವಂತನನ್ನು ಸ್ತುತಿಸಿದರೆ ಆತ ಸಂತುಷ್ಟನಾಗುವನು? ಅದನ್ನು ತಿಳಿಸು ಎಂದರು. ||೪೦||

**ಬ್ರಹ್ಮದೇವನು ಹೇಳಿದನು –**

ಯಾವ ಭಗವಾನ್ ಶ್ರೀನೃಸಿಂಹಸ್ವಾಮಿಯು ಸೃಷ್ಟಿಕರ್ತಾ ಬ್ರಹ್ಮರೂಪ ತಾಳಿದನೋ ಆ ಶ್ರೀನೃಸಿಂಹಸ್ವಾಮಿಗೆ ಸತತ ನಮಸ್ಕಾರವಿರಲಿ ||೪೧||

ಸನಾತನನಾದ ಶ್ರೀಮಹಾವಿಷ್ಣುವಿನ ರೂಪತಳೆದ ಶ್ರೀನೃಹರಿಗೆ ನಮಸ್ಕಾರ ||೪೨||

ರುದ್ರ ರೂಪಧಾರಿಯಾಗಿ ಜಗತ್ತನ್ನು ಉಪಸಂಹರಿಸುವ ಭಗವಾನ್ ಶ್ರೀನೃಸಿಂಹ ಸ್ವಾಮಿಗೆ ನಮಸ್ಕಾರ ||೪೩||

ಪರಮ ಪುರುಷೋತ್ತಮನಾಗಿ ರೂಪತಳೆದ ಭಗವಾನ್ ನೃಸಿಂಹ ಪ್ರಭುವಿಗೆ ನಮಸ್ಕಾರ ||೪೪||

ಶಾಶ್ವತಳಾದ ಭಗವತೀ ಸರಸ್ವತೀದೇವಿಯ ರೂಪಧರಿಸಿದ ಶ್ರೀನೃಸಿಂಹ ಸ್ವಾಮಿಗೆ ನಮಸ್ಕಾರ ||೪೫||

ಮಹಾಲಕ್ಷ್ಮೀರೂಪಧಾರಿಯಾಗಿ ಸಂಪತ್ಪ್ರದನಾದ ಭಗವಾನ್ ಶ್ರೀನರಹರಿಗೆ ನಮಸ್ಕಾರ ||೪೬||

ಅನಾದಿಯಾದ ಶ್ರೀಗೌರೀ ಸ್ವರೂಪವನ್ನು ಧರಿಸಿದ ಶ್ರೀ ನೃಸಿಂಹನಿಗೆ ನಮಸ್ಕಾರ. ||೪೭||

ಶಾಶ್ವತರೂಪವಾದ ಓಂಕಾರಾಕಾರನಾದ ನೃಸಿಂಹ ಪ್ರಭುವಿಗೆ ನಮಸ್ಕಾರ.||೪೮||

ಸಪ್ತವ್ಯಾಹೃತಿ ಸ್ವರೂಪನಾದ ಭಗವಾನ್ ಶ್ರೀನರಸಿಂಹಸ್ವಾಮಿಗೆ ನಮಸ್ಕಾರ. ||೪೯||

ಶ್ರೀನರಹರಿಯು ಅಂಗಗಳಿಂದ ಸಹಿತವಾದ ವೇದ ಹಾಗೂ ಸ್ಮೃತಿಗಳ ಸ್ವರೂಪನೇ ಆಗಿ ಕಂಗೊಳಿಸುತ್ತಿರುವನು. ಇಂತಹ ಶ್ರೀನರಹರಿಗೆ ನಮಸ್ಕಾರ. ||೫೦||

ಅಷ್ಟದಿಕ್ಪಾಲಕ ರೂಪದಿಂದ ಜಗದ್ರಕ್ಷಕನಾದ ಭಗವಾನ್ ಶ್ರೀ ನರಹರಿಗೆ ನಮಸ್ಕಾರ. ||೫೧||

'ದಕ್ಷಿಣಾಗ್ನಿ – ಗಾರ್ಹಪತ್ಯ – ಆಹವನೀಯ' ಎಂಬ ತ್ರಿವಹ್ನಿಸ್ವರೂಪನಾದ ಪ್ರಭು ಶ್ರೀನರಹರಿಗೆ ನಮಸ್ಕಾರ. ||೫೨||

ಯೋ ವೈ ನೃಸಿಂಹೋ ಭಗವಾನಾದಿತ್ಯಾ ಅಭವತ್ಸ್ವಯಮ್ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೫೩॥
ಯೋ ವೈ ನೃಸಿಂಹೋ ಭಗವಾನ್ ರುದ್ರಾ ಏಕಾದಶಾಽಭವತ್ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೫೪॥
ಯೋ ವೈ ನೃಸಿಂಹೋ ಭಗವಾನಭೂದಷ್ಟಗ್ರಹಾಃ ಸ್ವಯಮ್ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೫೫॥
ಯೋ ವೈ ನೃಸಿಂಹೋ ಭಗವಾನಭವದ್ಭೂತಪಂಚಕಮ್ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೫೬॥
ಯೋ ವೈ ನೃಸಿಂಹೋ ಭಗವಾನಭೂಜ್ಜೀವಃ ಸನಾತನಃ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೫೭॥
ಯೋ ವೈ ನೃಸಿಂಹೋ ಭಗವಾನಭೂತ್ಸರ್ವಂ ಸನಾತನಃ ।
ಕುರ್ವೇ ಭಗವತೇ ತಸ್ಮೈ ನೃಸಿಂಹಾಯ ನಮೋನಮಃ ॥೫೮॥

**ಸೂತ ಉವಾಚ –**

ನೃಸಿಂಹತಾಪಿನೀಪ್ರೋಕ್ತಂ ಸ್ತೋತ್ರಮೇತತ್ಪಠನ್ ದ್ವಿಜಃ ।
ಪುಂಡರೀಕೋ ನೃಸಿಂಹಂ ತಂ ದರ್ಶನಾರ್ಥಂ ವ್ಯಜಿಜ್ಞಪತ್ ॥೫೯॥
ತತಃ ಪ್ರಸನ್ನೋ ನೃಹರಿಃ ಪ್ರತ್ಯಕ್ಷೋಽಭೂತ್ತದಗ್ರತಃ ।
ರಮಾಲಿಂಗಿತವಾಮಾಂಗಃ ಶಂಖಚಕ್ರಗದಾಧರಃ ॥೬೦॥
ಬ್ರಹ್ಮಾದಿಭಿಃ ಸುರಗಣೈಃ ಸನಕಾದ್ಯೈಸ್ತಪೋಧನೈಃ ।
ಗರುತ್ಮತಾ ಚ ಶೇಷೇಣ ಪರಿಷ್ಟುತಗುಣೋತ್ತಮಃ ॥೬೧॥
ತಂ ದೃಷ್ಟ್ವಾ ಪರಮಾತ್ಮಾನಂ ನೃಸಿಂಹಂ ಚ ಸ ಸಂಭ್ರಮಾತ್ ।
ಸಾಷ್ಟಾಂಗಂ ದಂಡವದ್ವಿಪ್ರಃ ಪ್ರಣನಾಮ ಪುನಃ ಪುನಃ ॥೬೨॥

**ಶ್ರೀನೃಸಿಂಹ ಉವಾಚ –**

ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಪುಂಡರೀಕ ದ್ವಿಜಾಗ್ರಣೀಃ ।
ತ್ವದರ್ಥ ಮಾಗತೋಽಸ್ಮ್ಯತ್ರ ಸರ್ವಗೋಽಪಿ ಹಿ ಮೂರ್ತಿಮಾನ್॥೬೩॥
ವರಂ ವರಯ ಮತ್ತಸ್ತ್ವಂ ವಾಂಛಿತಂ ವರದರ್ಷಭಾತ್ ।
ಸರ್ವಥಾ ದರ್ಶನಂ ಮೇಽದ್ಯ ನ ಮೋಘಂ ಭವತಿ ದ್ವಿಜ ॥೬೪॥

**ಪುಂಡರೀಕ ಉವಾಚ –**

ತವ ಸಂದರ್ಶನಾದನ್ಯಂ ಕಂ ವರಂ ವರಯಾಮ್ಯಹಮ್ ।
ಕೃತಾರ್ಥೋಸ್ಮ್ಯದ್ಯ ಸಂವೃತ್ತಸ್ತ್ವಾಂ ದೃಷ್ಟ್ವಾ ಮಾಂ ಚ ಚಕ್ಷುಷಾ।೬೫।

ದ್ವಾದಶಾದಿತ್ಯರ ರೂಪ ತಳೆದ ನೃಸಿಂಹಸ್ವಾಮಿಗೆ ನಮಸ್ಕಾರವು ।।೫೩।।

ಏಕಾದಶರುದ್ರಸ್ವರೂಪನಾದ ಭಗವಾನ್ ಶ್ರೀನರಹರಿಗೆ ನಮಸ್ಕಾರ. ।।೫೪।।

ಅಷ್ಟಗ್ರಹ ಸ್ವರೂಪಿಯೂ ಆದ ಶ್ರೀನರಸಿಂಹ ಸ್ವಾಮಿಗೆ ನಮಸ್ಕಾರ. ।।೫೫।।

ಪಂಚಭೂತಗಳ ರೂಪಧರಿಸಿದ ಶ್ರೀನರಹರಿಗೆ ನಮಸ್ಕಾರವಿರಲಿ ।।೫೬।।

ಸನಾತನ ಜೀವ ಸ್ವರೂಪನಾದ ಭಗವಾನ್ ಶ್ರೀನರಹರಿಗೆ ನಮಸ್ಕಾರ ।।೫೭।।

ಶ್ರೀನರಸಿಂಹ ಪ್ರಭುವೇ ಸರ್ವಸ್ವರೂಪನಾಗಿಯೂ ತೋರುವನು ಇಂಥ ಪ್ರಭುವಿಗೆ ನಮಸ್ಕಾರ ।।೫೮।।

**ಸೂತರು ಹೇಳಿದರು –**

ಶ್ರೀನೃಸಿಂಹತಾಪಿನ್ಯುಪನಿಷತ್ತಿನಲ್ಲಿ ಹೇಳಿದ ಈ ಸ್ತೋತ್ರವನ್ನು ಪಠಿಸುತ್ತ ಪುಂಡರೀಕನು ದರ್ಶನವೀಯುವಂತೆ ಶ್ರೀನರಸಿಂಹ ಸ್ವಾಮಿಯನ್ನು ಪ್ರಾರ್ಥಿಸಿದನು.।।೫೯।।

ಆಗ ಪ್ರಸನ್ನನಾದ ಶಂಖಚಕ್ರಗದಾಧಾರಿಯಾದ ಭಗವಾನ್ ಶ್ರೀನರಸಿಂಹ ಸ್ವಾಮಿಯು ಪುಂಡರೀಕನೆದುರು ಪ್ರತ್ಯಕ್ಷನಾದನು ದೇವನ ಎಡಭಾಗವನ್ನು ಲಕ್ಷ್ಮೀದೇವಿಯು ಆಲಂಗಿಸಿದ್ದಳು. ।।೬೦।।

ಬ್ರಹ್ಮಾದಿ ದೇವತೆಗಳು, ಸನಕಾದಿ ಮುನಿವರ್ಯರು; ಗರುಡ, ಆದಿಶೇಷ, ಮೊದಲಾದವರು ಪ್ರಭು ಶ್ರೀನೃಸಿಂಹಸ್ವಾಮಿಯ ಗುಣಗಾನ ಮಾಡುತ್ತಿದ್ದರು ।।೬೧।।

ಭಗವಾನ್ ಶ್ರೀ ನರಸಿಂಹಸ್ವಾಮಿಯನ್ನು ಕಂಡೊಡನೆಯೇ ಆ ವಿಪ್ರ ಪುಂಡರೀಕನು ಸಂಭ್ರಮದಿಂದ ಪುನಃ ಪುನಃ ದಂಡವತ್ ಸಾಷ್ಟಾಂಗ ಪ್ರಣಾಮ ಮಾಡಿದನು. ।।೬೨।।

**ಶ್ರೀನೃಸಿಂಹ ಸ್ವಾಮಿಯು ಹೇಳಿದನು –**

ದ್ವಿಜೋತ್ತಮ! ಪುಂಡರೀಕ! ಏಳು ಮೇಲೇಳು. ನಿನಗೆ ಮಂಗಲವಾಗಲಿ ಸರ್ವವ್ಯಾಪಿಯಾದರೂ ಸಹ ನಿನ್ನ ಸಲುವಾಗಿ ನಾನು ದೇಹಧಾರಿಯಾಗಿ ಬಂದಿರುವೆ. ।।೬೩।।

ವಿಪ್ರ! ಖಂಡಿತವಾಗಿಯೂ ನನ್ನ ದರ್ಶನವು ವ್ಯರ್ಥವಾಗುವದಿಲ್ಲ. ವರವೀಯಲು ಸಮರ್ಥನಾದ ನನ್ನಿಂದ ನಿನಗೇನು ವರಬೇಕು. ಕೇಳು. ಅದನ್ನು ನೀಡುವೆ ।।೬೪।।

**ಪುಂಡರೀಕ ಹೇಳಿದನು –**

ದೇವ! ನಿನ್ನ ದರ್ಶನಕ್ಕಿಂತಲೂ ಬೇರೆ ಅದಾವ ವರವನ್ನು ಕೇಳಲಿ ನಾನಿಂದು ನಿನ್ನನ್ನು ಹಾಗೂ ಲಕ್ಷ್ಮೀದೇವಿಯನ್ನು ಕಂಡು ಕೃತಾರ್ಥನಾದೆ. ।।೬೫।।

ನ ಕಾಮಾನ್ ಕಾಮಯೇ ಸ್ವಾಮಿನ್! ಮೃಗತೃಷ್ಣೋಪಮಾಂಶ್ಚಲಾನ್ ।
ದೂರೀಕುರು ಕೃಪಾಸಿಂಧೋ! ತವ ಮಾಯಾಂ ದುರತ್ಯಯಾಮ್ ॥೬೬॥

ಯದ್ಯವಶ್ಯಂ ವರೋ ದೇಯಸ್ತ್ವಯಾ ನರಮೃಗಾಕೃತೇ ।
ತರ್ಹ್ಯತ್ರೈವ ಸದಾ ತಿಷ್ಠನ್ ಭಕ್ತಾನಾಂ ವರದೋ ಭವ ॥೬೭॥

ಶ್ರೀನೃಸಿಂಹ ಉವಾಚ –

ಏವಮಸ್ತು ತವ ಪ್ರೀತ್ಯೈ ವಸಾಮ್ಯತ್ರ ತಪೋಧನ! ।
ಭಕ್ತಾನಾಂ ಪೂರಯನ್ ಕಾಮಾನ್ ದೇವಾನಾಮಪಿದುರ್ಲಭಾನ್॥೬೮॥

ಶ್ರೀನೃಸಿಂಹೇತಿ ಮೇ ನಾಮ ಚತುರಕ್ಷರಮರ್ಥದಮ್ ।
ಯಸ್ಯ ವಾಚಿ ಸದಾ ತಿಷ್ಠೇತ್ತಸ್ಯ ಸಂಸಾರಭೀಃ ಕುತಃ ॥೬೯॥

ಭಕ್ತಾನಾಮನುರಕ್ತಾನಾಂ ವಶಗೋऽಹಂ ಜಗತ್ಪತಿಃ ।
ಭಿನದ್ಮಿ ತೇಷಾಂ ದುಃಖಾನಿ ಪ್ರಹ್ಲಾದೋऽತ್ರ ನಿದರ್ಶನಮ್ ॥೭೦॥

ಇತ್ಯುಕ್ತ್ವಾ ತಂ ದ್ವಿಜವರಂ ನರಸಿಂಹಃ ಸುರೈಃ ಸಹ ।
ತತ್ರೈವಾಂತರ್ದಧೇ ತಸ್ಯ ಪುಂಡರೀಕಸ್ಯ ಪಶ್ಯತಃ ॥೭೧॥

ಅಂತರ್ಹಿತೇ ನರಹರೌ ಪುಂಡರೀಕಸ್ತದಾ ಮುದಾ ।
ನೃಸಿಂಹಪ್ರತಿಮಾಂ ರಮ್ಯಾಂ ಸ್ಥಾಪಯಾಮಾಸ ಭಕ್ತಿತಃ ॥೭೨॥

ತದಾದಿ ತತ್ಕ್ರತುಪುರಂ ನೃಸಿಂಹಕ್ಷೇತ್ರಮೂಚಿರೇ ।
ತ್ರಿಕೂಟೇಶ್ವರಸಂವಾಸಾತ್ ಸಾ ಶಿವಕ್ಷೇತ್ರಂ ಚ ತಜ್ಜ್ಞಗುಃ ॥೭೩॥

ನೃಸಿಂಹೋಪಾಸ್ತಿಪರಮಃ ಪುಂಡರೀಕದ್ವಿಜೋತ್ತಮಃ ।
ಕಾಲೇ ಪ್ರಾಪ್ತೇ ಬ್ರಹ್ಮಲೋಕಮರ್ಚಿರಾದಿಪಥಾ ಯಯೌ ॥೭೪॥

ಇತ್ಯೇತತ್ಕಥಿತಂ ವಿಪ್ರಾ ನೃಸಿಂಹಾಖ್ಯಾನಮುತ್ತಮಮ್ ।
ದ್ವಿಜಸ್ಯ ಪುಂಡರೀಕಸ್ಯ ಭಕ್ತ್ಯಾ ಪ್ರಾದುರಭೂದ್ಧರಿಃ ॥೭೫॥

ಯ ಏತ ಚ್ಛೃಣುಯಾದ್ಭಕ್ತ್ಯಾ ನೃಸಿಂಹಚರಿತಂ ಶುಭಮ್ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ॥೭೬॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ
ಕ್ರತುಪುರಮಾಹಾತ್ಮ್ಯೇ
ನೃಸಿಂಹಪ್ರಾದುರ್ಭಾವೋ ನಾಮ ದಶಮೋऽಧ್ಯಾಯಃ

ಪ್ರಭೋ! ಬಿಸಿಲುಗುದುರೆಯಂತೆ ಚಂಚಲವೂ ಅನಿತ್ಯವೂ ಆದ ವಿಷಯಗಳನ್ನು ನಾನು ಇಚ್ಛಿಸುವದಿಲ್ಲ. ದಯಾಸಾಗರ! ನಿನ್ನ ಮಾಯೆಯು ಅಪಾರವಾಗಿದೆ. ಅದನ್ನು ನನ್ನಿಂದ ದೂರಮಾಡು ||೬೬||

ನೃಸಿಂಹಪ್ರಭುವೇ! ನೀನು ಅವಶ್ಯ ವರ ಕೊಡಲೇಬೇಕಾಗಿದ್ದರೆ ನೀನು ಸದಾಕಾಲ ಇಲ್ಲಿಯೇ ನೆಲೆಸಿ ಭಕ್ತರಿಗೆ ವರವನ್ನು ದಯಪಾಲಿಸು ಅದೇ ನಿನ್ನಲ್ಲಿ ಬೇಡುವ ವರ ||೬೭||

**ನೃಸಿಂಹನು ಹೇಳಿದನು –**

ತಪೋಧನ! ವಿಪ್ರ! ಹಾಗೆಯೇ ಆಗಲಿ ನಿನ್ನ ಪ್ರೀತಿಗಾಗಿ ನಾನಿಲ್ಲಿ ನಿಂತು ದೇವತಗಳಿಗೂ ದುರ್ಲಭವಾದ ಭಕ್ತರ ಕಾಮನೆಗಳನ್ನು ಈಡೇರಿಸುತ್ತೇನೆ ||೬೮||

ಸಕಲ ಪುರುಷಾರ್ಥಗಳನ್ನು ನೀಡುವ 'ಶ್ರೀನೃಸಿಂಹ' ಎಂಬ ಈ ನಾಲ್ಕಕ್ಷರವು ಯಾರ ಮುಖದಲ್ಲಿ ಸರ್ವದಾ ನೆಲೆಸಿರುವುದೋ ಅವರಿಗೆ ಸಂಸಾರ ಭೀತಿಯು ಎಲ್ಲಿಂದ ಬರುವುದು? ||೬೯||

ನನ್ನಲ್ಲಿ ಅನುರಕ್ತರಾದ ಭಕ್ತರಿಗೆ ಜಗತ್ಪತಿಯಾದ ನಾನು ವಶನಾಗುವೆ ಅವರ ಎಲ್ಲ ದುಃಖಗಳನ್ನೂ ನಾಶಗೊಳಿಸುವೆ. ಇದಕ್ಕೆ ನನ್ನ ಭಕ್ತ ಪ್ರಹ್ಲಾದನೇ ಉದಾಹರಣೆ||೭೦||

ಈರೀತಿ ಪುಂಡರೀಕನಿಗೆ ವರವನ್ನಿತ್ತು ಆತ ನೋಡುತ್ತಿರುವಂತೆಯೇ ಭಗವಾನ್ ಶ್ರೀನರಸಿಂಹಸ್ವಾಮಿಯು ದೇವತಗಳೊಂದಿಗೆ ಅಲ್ಲಿಯೇ ಅದೃಶ್ಯನಾದನು ||೭೧||

ನೃಸಿಂಹಸ್ವಾಮಿಯು ಅಂತರ್ಧಾನನಾಗಲು ಪುಂಡರೀಕನು ಸುಂದರವಾದ ಶ್ರೀನೃಸಿಂಹಸ್ವಾಮಿಯ ಮೂರ್ತಿಯನ್ನು ಭಕ್ತಿ–ಸಂತೋಷಗಳಿಂದ ಸ್ಥಾಪಿಸಿದನು ||೭೨||

ಆಗಿನಿಂದ ಆ ಕ್ರತುಪುರವನ್ನು ನೃಸಿಂಹ ಕ್ಷೇತ್ರವೆಂದು ಹೇಳುವರು ತ್ರಿಕೂಟೇಶ್ವರನೂ ಅಲ್ಲಿ ನೆಲೆಸಿರುವುದರಿಂದ ಅದು ಶಿವಕ್ಷೇತ್ರವೆಂದೂ ಪ್ರಸಿದ್ಧಿ ಹೊಂದಿತು. ||೭೩||

ನೃಸಿಂಹೋಪಾಸನೆಯಲ್ಲಿ ಆಸಕ್ತನಾದ ವಿಪ್ರವರ ಪುಂಡರೀಕನು ಕಾಲಕ್ರಮೇಣ ದೇವಯಾನ ಮಾರ್ಗದಿಂದ ಬ್ರಹ್ಮಲೋಕವನ್ನು ಸೇರಿದನು ||೭೪||

ವಿಪ್ರರೇ! ಹೀಗೆ ಅತ್ಯುತ್ತಮವಾದ ಶ್ರೀನೃಸಿಂಹಾಖ್ಯಾನವನ್ನು ಹೇಳಿದೆನು. ವಿಪ್ರನಾದ ಪುಂಡರೀಕನ ಭಕ್ತಿಗೆ ಮೆಚ್ಚಿಯೇ ನೃಸಿಂಹಸ್ವಾಮಿಯು ಪ್ರತ್ಯಕ್ಷನಾದನು.||೭೫||

ಮಂಗಲಮಯವಾದ ಈ ನೃಸಿಂಹ ಚರಿತೆಯನ್ನು ಭಕ್ತಿಯಿಂದ ಕೇಳುವವರು ಸರ್ವಪಾಪಗಳಿಂದ ಮುಕ್ತರಾಗಿ ವಿಷ್ಣುಲೋಕವನ್ನು ಹೊಂದುವರು. ||೭೬||

**ಶ್ರೀಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ**
**ಕ್ರತುಪುರಮಾಹಾತ್ಮ್ಯೆಯಲ್ಲಿ**
**ನೃಸಿಂಹಪ್ರಾದುರ್ಭಾವವೆಂಬ ಹತ್ತನೆಯ ಅಧ್ಯಾಯವು ಮುಗಿಯಿತು.**

# ಅಥ ಏಕಾದಶೋಽಧ್ಯಾಯಃ

**ಋಷಯ ಊಚುಃ –**

ತ್ರಿಕೂಟೇಶ್ವರಮಾಹಾತ್ಮ್ಯಂ ಶ್ರೋತುಮಿಚ್ಛಾಮಹೇ ವಯಮ್ ।
ತನ್ನಃ ಶಂಸ ಮಹಾಬುದ್ಧೇ! ಮಹೇಶಚರಿತಂ ಮಹತ್ ॥೧॥

ತ್ರಿಕೂಟೇಶ್ವರ ಇತ್ಯೇಷಾ ಸಂಜ್ಞಾ ದೇವಸ್ಯ ಶೂಲಿನಃ ।
ಕಸ್ಮಾದ್ವೈ ಕಾರಣಾತ್ಖ್ಯಾತಾ ಶ್ರೋತುಂ ಕೌತೂಹಲಂ ಹಿ ನಃ ॥೨॥

**ಸೂತ ಉವಾಚ –**

ಸಾಧು ಪೃಷ್ಟಂ ಮಹಾಭಾಗಾ! ಋಷಯಃ! ಶೌನಕಾದಯಃ ।
ಶೃಣುಧ್ವಂ ಚರಿತಂ ಶಂಭೋಃ ಕಥಯಾಮಿ ಸತಾಂ ಪ್ರಿಯಮ್ ॥೩॥

ವಿದ್ಯುನ್ಮಾಲೀ ಹೇಮಮಾಲೀ ಮೇಘಮಾಲೀತಿ ತೇ ತ್ರಯಃ ।
ಪಾತಾಲೇ ನ್ಯವಸನ್ ದೈತ್ಯಾಃ ಪ್ರಾಗೇವ ತ್ರಿಪುರಕ್ಷಯಾತ್ ॥೪॥

ತ್ರಿಪುರೇಶಸ್ಯ ದೈತ್ಯಸ್ಯ ಪುತ್ರಾಃ ಸುತ್ರಾಮಶತ್ರವಃ ।
ತೇ ಸಸೈನ್ಯಾಃ ಸಮುತ್ತಸ್ಥುಃ ಕೃತವೈರೇ ಮಹೇಶ್ವರೇ ॥೫॥

ತ್ರಿದಶಾನ್ ತ್ರಾಸಯಾಮಾಸುಃ ಸ್ವರ್ಗಮಾವೃತ್ಯ ಸರ್ವತಃ ।
ತೇಷಾಂ ಸೇನಾನಿವೇಶಂ ತು ದೃಷ್ಟ್ವಾ ಶಕ್ರಪುರೋಗಮಾಃ ॥೬॥

ಯುದ್ಧಾಯ ನಿರ್ಯಯುರ್ದೇವಾ ದಂಶಿತಾಃ ಸೇನಯಾ ವೃತಾಃ ।
ಆದಿತ್ಯಾ ವಸವೋ ರುದ್ರಾ ಮರುತಶ್ಚ ಮಹಾಬಲಾಃ ॥೭॥

ಸಾಧ್ಯಾ ವಿಶ್ವೇ ಚ ಪಿತರಃ ಸರ್ಪಾ ಯಕ್ಷಾಶ್ಚ ಗುಹ್ಯಕಾಃ ।
ಗಂಧರ್ವಾ ರಾಕ್ಷಸಾಶ್ಚೈವ ಲೋಕಪಾಲಾಃ ಸಹಾಯಯುಃ ॥೮॥

ತೇಷಾಂ ಯುದ್ಧಂ ಸಮಭವದ್ದಾರುಣಂ ಸಮರೇಽಸುರೈಃ ।
ಭೀರೂಣಾಂ ತ್ರಾಸಜನನಂ ಶೂರಾಣಾಂ ಹರ್ಷವರ್ಧನಮ್ ॥೯॥

ಏವಂ ಪ್ರವೃತ್ತೇ ತುಮುಲೇ ಸಂಪ್ರಹಾರೇ ಸುದಾರುಣೇ ।
ಪ್ರದುದ್ರುವುಸ್ತಾಡ್ಯಮಾನಾ ಅಸುರೈಃ ಸಮರೇ ಸುರಾಃ ॥೧೦॥

ತ್ರಾತಾರಂ ನಾಧಿಗಚ್ಛಂತಃ ಶಂಕರಂ ಶರಣಂ ಯಯುಃ ।
ಸಾ ವಿತ್ರಸ್ತಾ ದೇವಸೇನಾ ಕೈಲಾಸಗಿರಿಮಭ್ಯಗಾತ್ ॥೧೧॥

# ಹನ್ನೊಂದನೆಯ ಅಧ್ಯಾಯ

**ಋಷಿಗಳು ಹೇಳಿದರು –**

ವಂದಿತೋತ್ತಮ ಸೂತ! ನಾವೀಗ ತ್ರಿಕೂಟೇಶ್ವರ ಮಹಾತ್ಮೆಯನ್ನು ಕೇಳ ಬಯಸಿದ್ದೇವೆ ನಮಗೀಗ ಆ ಮಹೇಶಚರಿತೆಯನ್ನು ತಿಳಿಸು ।।೧।।

ಭಗವಾನ್ ಮಹಾದೇವನಿಗೆ ತ್ರಿಕೂಟೇಶ್ವರನೆಂಬ ಹೆಸರು ಬರಲು ಕಾರಣ ವೇನು? ಇದನ್ನು ತಿಳಿಯಲು ಬಹಳ ಕುತೂಹಲಿಗಳಾಗಿದ್ದೇವೆ. ಕಾರಣ ನೀನೀಗ ಅದನ್ನು ತಿಳಿಸು ।।೨।।

**ಸೂತರು ಹೇಳಿದರು –**

ಶೌನಕಾದಿ ಮಹರ್ಷಿಗಳೇ! ಯೋಗ್ಯ ಪ್ರಶ್ನೆಯನ್ನೇ ಮಾಡಿದಿರಿ ಸಜ್ಜನರಿಗೆ ಪ್ರಿಯವಾದ ವರಶಿವನ ಕಥೆಯನ್ನು ಹೇಳುವೆ ಕೇಳಿರಿ ।।೩।।

'ವಿದ್ಯುನ್ಮಾಲಿ–ಹೇಮಮಾಲಿ–ಮೇಘಮಾಲಿ' ಎಂಬ ಈ ಮೂವರು ದೈತ್ಯರು ತಮ್ಮ ತಂದೆಯಾದ ತ್ರಿಪುರಾಸುರನು ನಾಶಹೊಂದುವುದಕ್ಕೂ ಮೊದಲೇ ಪಾತಾಳದಲ್ಲಿ ನೆಲೆಸಿದ್ದರು ।।೪।।

ಇಂದ್ರಶತ್ರುಗಳಾದ ತ್ರಿಪುರಾಸುರನ ಆ ಮೂವರು ಮಕ್ಕಳೂ ಸೇನಾಸಮೇತ ರಾಗಿ ತಮ್ಮೊಂದಿಗೆ ವೈರ ಬೆಳೆಸಿದ ದೇವೇಂದ್ರನ ಮೇಲ ಏರಿಹೋಗಿ ಸ್ವರ್ಗವನ್ನು ಸುತ್ತಲೂ ಆವರಿಸಿ ದೇವತೆಗಳನ್ನು ಗೋಳಾಡಿಸಿದರು ದೈತ್ಯರ ಸೇನೆ ಬಂದದ್ದನ್ನರಿತ ಇಂದ್ರಾದಿ ದೇವತಗಳು ಸಜ್ಜರಾಗಿ ಅವರೊಡನ ಹೋರಾಡಲು ತಮ್ಮ ತಮ್ಮ ಸೈನ್ಯಗಳೊಂದಿಗ ಆಗಮಿಸಿದರು ಮಹಾಬಲಶಾಲಿಗಳಾದ ದ್ವಾದಶಾದಿತ್ಯರು, ಅಷ್ಟವಸುಗಳು ಏಕಾದಶರುದ್ರರು, ಸಪ್ತ ಮರುತರು, ಸಾಧ್ಯರು, ವಿಶ್ವೇದೇವರು ಹಾಗೂ ಪಿತೃಗಳು, ಸರ್ಪಗಳು, ಯಕ್ಷರು, ಗುಹ್ಯಕರು, ಗಂಧರ್ವರು, ರಾಕ್ಷಸರು, ಲೋಕಪಾಲಕರು, ಇವರಲ್ಲರೂ ಸಮರ ಸನ್ನದ್ಧರಾಗಿ ಬಂದರು. (ರಾಕ್ಷಸರು ಮತ್ತು ದೈತ್ಯರು ಬೇರೆಯಾದರೂ ಒಂದೇ ಸ್ವಬಾವದವರಾದ್ದರಿಂದ ಜನರು ಇಬ್ಬರೂ ಒಂದೇ ಎಂದು ವ್ಯವಹರಿಸುತ್ತಾರ ವಾಸ್ತವಿಕವಾಗಿ ಅವರಿಬ್ಬರೂ ಭಿನ್ನರು.) ।। ೫–೮ ।।

ಭೀರುಜನರಿಗೆ (ಹೆದರಿಕೆಯುಳ್ಳವರಿಗೆ) ಭಯಂಕರವೂ ಶೂರರಿಗ ಹರ್ಷ ದಾಯಕವೂ ಆದ ದಾರುಣವಾದ ದೇವಾಸುರ ಸಮರವು, ಪ್ರಾರಂಭವಾಯಿತು.।।೯।।

ಈ ರೀತಿ ಪ್ರಾರಂಭವಾದ ದಾರುಣವಾದ ತುಮುಲಯುದ್ಧದಲ್ಲಿ ಅಸುರರು ದೇವತೆಗಳನ್ನು ಬಲವಾಗಿ ಹೊಡೆದು ಓಡಿಸಿದರು. ।।೧೦।।

ತಮಗಾರೂ ರಕ್ಷಕರೇ ಇಲ್ಲದ್ದನ್ನು ತಿಳಿದ ದೇವತೆಗಳು ಭಗವಾನ್ ಶಂಕರನಿಗ ಶರಣು ಬಂದರು ಅಲ್ಲಲ್ಲಿ ಚದುರಿದ್ದ ದೇವಸೇನೆಯೂ ಕೈಲಾಸಗಿರಿಗೆ ಬಂದಿತು ।।೧೧।।

ವಿದ್ರಾಣಾಂ ದೇವಸೇನಾಂ ತಾಮಾಸುರೀ ಪೃಷ್ಠತೋ ಯಯೌ ।
ಯೋಜನಾಂತರಿತೇ ಸೇನೇ ಉಭೇ ತತ್ರೋಷತುರ್ದ್ವಿಜಾಃ ॥೧೨॥

ತತಃ ಶಕ್ರಾದಯೋ ದೇವಾ ಮರೀಚ್ಯಾದ್ಯಾ ಮಹರ್ಷಯಃ ।
ಬ್ರಹ್ಮವಿಷ್ಣೂ ಪುರೋಧಾಯ ಶಂಕರಂ ಶರಣಂ ಯಯುಃ ॥೧೩॥

ಕೈಲಾಸಶಿಖರೇ ರಮ್ಯೇ ಪ್ರಾಸಾದೇ ಹಾಟಕೇ ಶುಭೇ ।
ನವರತ್ನಪ್ರಭಾಪುಂಜಕಿರ್ಮೀರಿತನಭೋಂಗಣೇ ॥೧೪॥

ಪಾರಿಜಾತತರುಭ್ರಾಜನ್ನಿಷ್ಕುಟೇ ಮಣಿಕುಟ್ಟಿಮೇ ।
ಮಣಿಸ್ತಂಭಸಹಸ್ರಾಢ್ಯೇ ದಿವ್ಯಪ್ರಾಕಾರಗೋಪುರೇ ॥೧೫॥

ಕೇಕಿವಾರಾವತಾಘುಷ್ಟೇಽಗರುಧೂಪವಿಧೂಪಿತೇ।
ರತ್ನದೀಪಪ್ರಭೋದಸ್ತತಮಸ್ತೋಮೇ ದಿವಾನಿಶಮ್ ॥೧೬॥

ಕಿಂನ್ನರೀಗೀತಮುದಿತಮೃಗಶಾಪೋಪರಂಜಿತೇ ।
ಸರ್ವತ್ರ ಪ್ರಮಥಾಕೀರ್ಣೇ ವೇತ್ರಿಕೋಲಾಹಲೇ ಕುಲೇ ॥೧೭॥

ಚಾಮರಗ್ರಾಹಿಣೀನಾಂ ಚ ದೇವೀನಾಂ ಮಂಜುಶಿಂಜಿತೈಃ ।
ಜಿತವೀಣಾಕಲರವೇ ನಿತ್ಯಾನಂದಮಹೋತ್ಸವೇ ॥೧೮॥

ತತ್ರ ಸಿಂಹಾಸನೇ ರಮ್ಯೇ ದಿವ್ಯಹಾಟಕನಿರ್ಮಿತೇ ।
ಮಹಾರ್ಹಮಣಿಭಿರ್ಯುಕ್ತೇ ಭಾಸ್ಕರಾಯುತತೇಜಸಿ ॥೧೯॥

ಸಮಾಸೀನಂ ಮಹಾದೇವಂ ಭಗವಂತಂ ತ್ರಿಲೋಚನಮ್ ।
ನಿಷ್ಕಲಂ ನಿರ್ಮಲಂ ಶಾಂತಂ ಮಾಯಯೋಪಾತ್ತವಿಗ್ರಹಮ್ ॥೨೦॥

ಉಪಾಸ್ಯಮಾನಂ ದಿವ್ಯಾಭಿರ್ನವಭಿಃ ಶಕ್ತಿಭಿಃ ಸದಾ ।
ದಿವ್ಯರೂಪಧರೈಃ ಶಾಂತೈಃ ಪಾರ್ಷದೈರುಪಸೇವಿತಮ್ ॥೨೧॥

ಕರ್ಪೂರಧವಲಂ ಚಂದ್ರಕಲಾಕಲಿತಶೇಖರಮ್ ।
ನೀಲಕಂಠಂ ಚತುರ್ಬಾಹುಂ ಭಸ್ಮೋದ್ಧೂಲಿತವಿಗ್ರಹಮ್ ॥೨೨॥

ರುದ್ರಾಕ್ಷಮಾಲಾಭರಣಂ ನಾಗಯಜ್ಞೋಪವೀತಿನಮ್ ।
ವರಾಭಯಮೃಗೋದಗ್ರಶೂಲಪಾಣಿಂ ಮಹೇಶ್ವರಮ್ ॥೨೩॥

ಮುನಿಗಳೇ! ಹೀಗೆ ಓಡಿಬಂದ ದೇವಸೇನೆಯ ಹಿಂದೆಯೇ ಅಸುರರ ಸೇನೆಯೂ ಅದನ್ನು ಅಟ್ಟಿಸಿಕೊಂಡು ಬಂದಿತು. ಯೋಜನದಷ್ಟು ವಿಸ್ತಾರವಾದ ಆ ಎರಡೂ ಸೇನೆಗಳು ಕೈಲಾಸದಲ್ಲಿ ಬೀಡುಬಿಟ್ಟವು ॥೧೨॥

ಆಗ ಇಂದ್ರಾದಿ ದೇವತೆಗಳೂ, ಮರೀಚಿ ಮೊದಲಾದ ಮಹರ್ಷಿಗಳೂ, ವಿಷ್ಣು ಬ್ರಹ್ಮರನ್ನು ಮುಂದೆಮಾಡಿಕೊಂಡು ಭಗವಾನ್ ಶ್ರೀಶಂಕರನಿಗೆ ಶರಣಾಗತರಾದರು ॥೧೩॥

ಭಗವಾನ್ ಶ್ರೀನೀಲಕಂಠೇಶ್ವರನು ನೆಲಸಿದ್ದ ಆ ಕೈಲಾಸ ಶಿಖರವು ರಮ್ಯವಾದ ಬಂಗಾರದ ಪ್ರಾಸಾದವನ್ನೊಳಗೊಂಡಿತ್ತು. ಅದರ ನವರತ್ನ ಕಾಂತಿಯಿಂದ ಆಕಾಶ ಮಂಡಲವು ಚಿತ್ರ ವಿಚಿತ್ರ ಬಣ್ಣದ್ದಾಗಿ ತೋರುತ್ತಿತ್ತು ॥೧೪॥

ಅಲ್ಲಿಯ ಕೈದೋಟಗಳಲ್ಲಿ ಪಾರಿಜಾತ ವೃಕ್ಷಗಳು ಶೋಭಿಸುತ್ತಿದ್ದವು ಅಲ್ಲಿಯ ಎಲ್ಲ ಭೂಮಿಯು ರತ್ನಖಚಿತವಾಗಿತ್ತು ಅಲ್ಲಿಯ ಪ್ರಾಕಾರಗಳು, ಗೋಪುರಗಳು ದಿವ್ಯವಾಗಿದ್ದವು ಅಲ್ಲಿ ಸಾವಿರಾರು ರತ್ನಖಚಿತ ಸ್ತಂಭಗಳಿದ್ದವು ॥೧೫॥

ನವಿಲು – ಪಾರಿವಾಳಗಳ ಕಲರವವು ಸರ್ವದಾ ಕೇಳಿಬರುತ್ತಿದ್ದ ಆ ಪಾವನ ಪರಿಸರದಲ್ಲಿ ಅಗರುಧೂಪದ ಸುವಾಸನೆಯು ಹರಡಿತ್ತು ರತ್ನದೀಪಗಳ ಪ್ರಕಾಶದಿಂದ ಆ ಪರಿಸರವು ಬೆಳಗುತ್ತಿತ್ತು ॥೧೬॥

ಕಿನ್ನರಿಯರ ಗಾಯನಕ್ಕೆ ಮುದಗೊಂಡ ಚಿಗರೆಗಳು ಅಲ್ಲಲ್ಲಿ ಸುಳಿದಾಡುತ್ತಿದ್ದವು ಸರ್ವತ್ರ ಪರಶಿವನ ಪ್ರಮಥಗಣಗಳು ವ್ಯಾಪಿಸಿದ್ದವು. ದಂಡಧಾರಿಗಳಾದ ಸೇವಕರು ಘೋಷಿಸುತ್ತಿದ್ದ ಪರಾಕುಗಳು ದೊಡ್ಡದಾಗಿ ಕೇಳಿ ಬರುತ್ತಿದ್ದವು ॥೧೭॥

ಚಾಮರಧಾರಿಗಳಾದ ದೇವಸ್ತ್ರೀಯರ ಆಭರಣಗಳ ಮಂಜುಳ ನಿನಾದವು ವೀಣಾಕಲರವಕ್ಕಿಂತಲೂ ಇಂಪಾಗಿತ್ತು ಅಲ್ಲಿ ಸತತ ಆನಂದದ ಮಹೋತ್ಸವವೇ ನಡೆಯುತ್ತಿತ್ತು. ॥೧೮॥

ಆ ಪ್ರಾಸಾದದಲ್ಲಿ ಸುವರ್ಣನಿರ್ಮಿತ ಸುಂದರ ಸಿಂಹಾಸನವೊಂದು ರಾರಾಜಿಸುತ್ತಿತ್ತು ಸಾವಿರಾರು ಸೂರ್ಯರ ಪ್ರಭೆಗಿಂತಲೂ ಮಿಗಿಲಾದ ಕಾಂತಿಯಿಂದ ಬೆಳಗುವ ಅನರ್ಘ್ಯ ರತ್ನಗಳಿಂದ ಅದು ಅಲಂಕೃತವಾಗಿತ್ತು ॥೧೯॥

ಈ ದಿವ್ಯ ಸಿಂಹಾಸನದಲ್ಲಿ ತ್ರಿಲೋಚನನಾದ ಭಗವಾನ್ ಮಹಾದೇವನು ವಿರಾಜಮಾನನಾಗಿದ್ದನು ನಿಷ್ಕಲನೂ, ಪರಮಶಾಂತನೂ ಆದ ಪರಶಿವನು ಲೀಲಾ ವಿಗ್ರಹಧಾರಿಯಾಗಿದ್ದನು. ॥೨೦॥

ನಿರ್ಮಲನಾದ ಶ್ರೀಶಂಕರನನ್ನು ದಿವ್ಯನವಶಕ್ತಿಗಳೂ ಹಾಗೂ ದಿವ್ಯ ರೂಪಧಾರಿ ಶಾಂತಮೂರ್ತಿಗಳಾದ ಪಾರ್ಷದರೂ ಅನವರತ ಸೇವಿಸುತ್ತಿದ್ದರು ॥೨೧॥

ಕರ್ಪೂರದಂತೆ ಪರಿಶುಭ್ರನಾದ ಗಿರಿಜಾಪತಿಯು ತನ್ನ ಮುಕುಟದಲ್ಲಿ ಅರ್ಧ ಚಂದ್ರನನ್ನು ಧರಿಸಿದ್ದನು. ಸರ್ವಾಂಗದಲ್ಲಿಯೂ ಭಸ್ಮಧಾರಿಯಾದ ಚತುರ್ಬಾಹು ಪಾದ ಶ್ರೀನೀಲಕಂಠೇಶ್ವರನು ಕೊರಳಲ್ಲಿ ರುದ್ರಾಕ್ಷಮಾಲೆಯಿಂದ ಅಲಂಕೃತನಾಗಿ ಸರ್ಪವನ್ನು ಉಪವೀತದಂತೆ ಧರಿಸಿದ್ದನು. ವರದಾಭಯಹಸ್ತನಾದ ಶಂಭುವು ಉಳಿದೆರಡು ಕರಗಳಲ್ಲಿ ಮೃಗ ಮತ್ತು ಶೂಲವನ್ನು ಧರಿಸಿದ್ದನು. ॥ ೨೨–೨೩ ॥

ಕಾರುಣ್ಯಾಮೃತವಾರಾಶಿಂ ಪಶುಪಾಶವಿಮೋಚನಮ್ ।
ವಾಮಾಂಕಾರೂಢಯಾ ಗೌರ್ಯಾ ಪರಿಷ್ವಕ್ತಂ ಜಗತ್ಪತಿಮ್ ॥೨೪॥

ತಂ ದೃಷ್ಟ್ವಾ ತಾದೃಶಂ ದೇವಂ ಹರಿಬ್ರಹ್ಮಾದಯಃ ಸುರಾಃ ।
ಋಷಯಶ್ಚ ಮಹಾಭಾಗಾಃ ಪ್ರಣೇಮುರ್ದಂಡವದ್ಭುವಿ ॥೨೫॥

ಉತ್ತಿಷ್ಠತೋತ್ತಿಷ್ಠತೇತಿ ತಾನಾಹ ಗಿರಿಜಾಪತಿಃ ।
ಅಥೋತ್ಥಾಯ ಸುರಾಃ ಸರ್ವೇ ತುಷ್ಟುವುಸ್ತಂ ಮಹೇಶ್ವರಮ್ ॥೨೬॥

ದೇವಾ ಊಚುಃ –

ನಮಃ ಶಿವಾಯ ಶಾಂತಾಯ ಸರ್ವಜ್ಞಾಯಾಖಿಲಾತ್ಮನೇ ।
ಜಗದಾನಂದದಾತ್ರೇ ಚ ಪರಮಾನಂದಮೂರ್ತಯೇ ॥೨೭॥

ಅರೂಪಾಯ ಸರೂಪಾಯ ಗುಣಿನೇ ನಿರ್ಗುಣಾಯ ಚ ।
ವಿರೂಪಾಕ್ಷಾಯ ವಿಶ್ವಸ್ಮೈ ವಿಶ್ವಾತೀತಾಯ ತೇ ನಮಃ ॥೨೮॥

ನಮಸ್ತ್ರೈಲೋಕ್ಯನಾಥಾಯ ನಮಸ್ತೇ ಪರಮಾತ್ಮನೇ ।
ನಮೋಽಶೇಷವಿಶೇಷಾಯ ಶೇಷಭೋಗಾಂಗದಾಯ ಚ ॥೨೯॥

ಶ್ರೀಕಂಠಾಯ ನಮಸ್ತುಭ್ಯಂ ವಿಷಕಂಠಾಯ ತೇ ನಮಃ ।
ವೈಕುಂಠೇನ ಸ್ವದೃಕ್ಪದ್ಮಾರ್ಪಣಪ್ರೀತಾಯ ಶಂಭವೇ ॥೩೦॥

ನಮೋಽಷ್ಟಮೂರ್ತಯೇಽನಂತಮೂರ್ತಯೇಽಕುಂಠಶಕ್ತಯೇ ।
ಭಸ್ಮೋದ್ಧೂಲಿತದೇಹಾಯ ಮಾಯಾತೀತಾಯ ಮಾಯಿನೇ ॥೩೧॥

ಅಚಿಂತ್ಯಾವ್ಯಕ್ತರೂಪಾಯ ವಿಷ್ಣುಬ್ರಹ್ಮಾದಿರೂಪಿಣೇ ।
ಸದ್ಯೋಜಾತಾದಿಭಿಃ ಪಂಚಬ್ರಹ್ಮಮಂತ್ರೈಃ ಸ್ತುತಾಯ ಚ ॥೩೨॥

ದೈತ್ಯೇಶ್ವರಾರ್ಚಿತಸುರಾರ್ತಿಹರಂ ಪ್ರಪನ್ನಂ
ವಂದಾರುಕಲ್ಪತರುಮೀಪ್ಸಿತಕಾಮಪೂರಮ್ ।
ಸಂಸಾರರೋಗಶಮನಕ್ಷಮನಾಮಮಾತ್ರಂ
ಕಲ್ಯಾಣಮೂರ್ತಿಮನಘಂ ಶಿವಮಾಶ್ರಯಾಮಃ ॥೩೩॥

ಶ್ರೀಶಿವ ಉವಾಚ –

ಬ್ರಹ್ಮವಿಷ್ಣ್ವಾದಯಃ ಸರ್ವೇ ತ್ರಿದಿವೇಶಾ ಬ್ರುವಂತು ವಃ ।
ಕಂ ಕಾಮಂ ವಿತರಾಮ್ಯದ್ಯ ಕಿಮರ್ಥಂ ಯೂಯಮಾಗತಾಃ ॥೩೪॥

ಪಶುಪಾಶದಿಂದ ಬಿಡುಗಡೆಗೊಳಿಸುವ, ಕರುಣಾಸಾಗರನಾದ ಪರಶಿವನ ಎಡ ತೊಡೆಯನ್ನೇರಿದ ಗಿರಿಜೆಯು ಜಗತ್ಪತಿಯಾದ ಆತನನ್ನು ಆಲಿಂಗಿಸಿದ್ದಳು ||೨೪||

ಅಂಥ ಪರಶಿವನನ್ನು ದರ್ಶಿಸಿದ ಬ್ರಹ್ಮವಿಷ್ಣುಮೊದಲಾದ ಸಕಲ ದೇವತೆಗಳೂ, ಮಹಾನುಭಾವರಾದ ಮಹರ್ಷಿಗಳೂ ಭುವಿಯಲ್ಲಿಯೇ ಆತನಿಗ ದಂಡವತ್ ಸಾಷ್ಟಾಂಗವೆರಗಿದರು ||೨೫||

ಗಿರಿಜಾಪತಿಯು ''ಏಳಿರಿ – ಮೇಲೇಳಿರಿ'' ಎಂದು ಅವರಿಗೆ ಹೇಳಿದನು ಶಿವಾಜ್ಞೆಯಂತೆ ಮೇಲೆದ್ದ ಸುರರು ಪರಶಿವನನ್ನು ಸ್ತುತಿಸಿದರು ||೨೬||

**ದೇವತೆಗಳು ಹೇಳಿದರು –**

ಸರ್ವಸ್ವರೂಪನೂ, ಸರ್ವಜ್ಞನೂ, ಜಗತ್ತಿಗೆ ಆನಂದದಾಯಕನೂ ಪರಮಾನಂದ ಮೂರ್ತಿಯೂ ಆದ ಶಾಂತನಾದ ಪರಶಿವನಿಗ ನಮಸ್ಕಾರ ||೨೭||

ಉಪಾಸಕರಿಗೆ ಸಗುಣನೂ, ಸರೂಪನೂ, ಕೈವಲ್ಯದಲ್ಲಿ ನಿರ್ಗುಣನೂ ನೀರೂಪನೂ ಆದ ಪರಶಿವನಿಗ ನಮಸ್ಕಾರ, ವಿಶ್ವರೂಪನಾಗಿ ವಿಶ್ವಾತೀತನಾಗಿರುವ ವಿರೂಪಾಕ್ಷನಿಗೆ ನಮಸ್ಕಾರ ||೨೮||

ಲೋಕತ್ರಯಗಳಿಗೊಡೆಯನಾದ ಪರಮಾತ್ಮನಿಗ ನಮಸ್ಕಾರ ಸಕಲ ವೈಶಿಷ್ಟ್ಯಗಳಿಂದ ಕೂಡಿದ ನಾಗಭೂಷಣನಿಗ ನಮಸ್ಕಾರ ||೨೯||

ಶ್ರೀಹರಿಯು ತನ್ನ ಕಣ್ಣನ್ನು ಕಮಲರೂಪದಿಂದ ಸಮರ್ಪಿಸಿದಾಗ ಸಂತುಷ್ಟನಾದ, ಕಂಠದಲ್ಲಿ ವಿಷವನ್ನು ಧರಿಸಿದ, ಶ್ರೀಕಂಠನಿಗ ಅನಂತ ನಮಸ್ಕಾರಗಳು ||೩೦||

ಭಸ್ಮಧಾರಿಯೂ, ಅಪರಿಮಿತ ಪರಾಕ್ರಮಿಯೂ, ಅವಿದ್ಯಾರಹಿತನೂ, ಮಾಯಾತೀತನಾದ ಮಾಯಿಯೂ ಆದ ಪರಶಿವನಿಗ ವಂದನೆಗಳು. ಅನಂತಮೂರ್ತಿಯಾದ ನಿನಗೆ ವಂದನಗಳು. ||೩೧||

ಅಚಿಂತ್ಯ ಹಾಗೂ ಅವ್ಯಕ್ತರೂಪಿಯೂ, ಬ್ರಹ್ಮ, ವಿಷ್ಣು ಮೊದಲಾದ ದೇವತಾಸ್ವರೂಪಿಯೂ, ಸದ್ಯೋಜಾತ ಮೊದಲಾದ ಪಂಚಬ್ರಹ್ಮ ಮಂತ್ರಗಳಿಂದ ಸ್ತುತಿಸಲ್ಪಡುವವನೂ ಆದ ಪರಶಿವನಿಗೆ ನಮಸ್ಕಾರಗಳು ||೩೨||

ದೈತ್ಯರಾಜರಿಂದ ಪೂಜಿತನೂ, ಅಮರಗಣದ ಪೀಡಾಪರಿಹಾರಕನೂ, ಕಲ್ಯಾಣ ಮೂರ್ತಿಯೂ ಆದ ಶಿವನು ನಮಿಪರಿಗ ಕಲ್ಪವೃಕ್ಷ ಸ್ವರೂಪನಾಗಿರುವನು ಅವರ ಇಷ್ಟಾರ್ಥಗಳನ್ನು ಪೂರೈಸುವ ಶಿವನ ನಾಮಮಂತ್ರವು ಸಂಸಾರ ರೋಗದ ಔಷಧವಾಗಿದ ಶಂಕರ! ಪುಣ್ಯಮೂರ್ತಿಯಾದ ನಿನ್ನನ್ನು ಆಶ್ರಯಿಸುತ್ತೇವೆ

**ಶ್ರೀ ಶಿವನು ಹೇಳಿದನು –**

ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೇ! ಹೇಳಿರಿ ನಿಮ್ಮ ಯಾವ ಕೋರಿಕೆಯನ್ನು ಈಡೇರಿಸಲಿ? ನೀವೇಕೆ ಇತ್ತ ಬಂದಿರಿ? ||೩೪||

ಯೋ ವೋ ದ್ರುಹ್ಯಾತ್ಸಮೇ ದ್ರುಹ್ಯಾದ್ಯೋ ವೋ ಹ್ಯನು ಸ ಮಾಮನು ।
ಯತಃ ಸರ್ವೇ ಭವಂತೋ ಹಿ ವಿಸ್ತೃತಾ ಮದ್ವಿಭೂತಯಃ ॥೩೫॥

ಏತೌ ವಿಧಿಹರೀ ಸಾಕ್ಷಾದಹಮೇವ ನ ಸಂಶಯಃ ।
ಅಸ್ಮಾಸು ತ್ರಿಷು ಯಃ ಪಶ್ಯೇದ್ಭೇದಂ ನಶ್ಯೇತ್ ಸ ಪಾಮರಃ ॥೩೬॥

ಕೇನ ವಾ ಪೀಡಿತಾ ಯೂಯಂ ಮಮ ಪ್ರಾಣಾ ಮುಮೂರ್ಷುಣಾ ।
ಬ್ರೂತ ತಂ ವಿನಿಷೂದಾಮಿ ಸಾಕ್ಷಾದಂತಕಮಪ್ಯಹಮ್ ॥೩೭॥

ದೇವಾ ಊಚುಃ —

ಬಾಧಂತೇಽಸ್ಮಾನ್ ಮಹಾದೇವ ತ್ರಿಪುರೇಶಸುತಾ ಇಮೇ ।
ತ್ರಯಸ್ತ್ರಯಾಣಾಂ ಲೋಕಾನಾಮುಚ್ಛೇದಂ ಕರ್ತುಮುದ್ಯತಾಃ ॥೩೮॥

ಅಕ್ಷೋಹಿಣೀನಾಂ ದಶಕಂ ವ್ಯೂಹ್ಯಾಸ್ಮಾನ್ ಪ್ರತ್ಯುಪಾಗತಾಃ ।
ತೇಭ್ಯೋ ಭೀತಾ ವಯಂ ಶಂಭೋ ತ್ವಾಂ ವಯಂ ಶರಣಾಗತಾಃ ॥೩೯॥

ಇತಿ ತೇಷಾಂ ವಚಃ ಶ್ರುತ್ವಾ ಭಗವಾನ್ ಭೂತಭಾವನಃ ।
ಸೇನಾನ್ಯಂ ಪ್ರಾಹ ಮೇ ಸೇನಾ ಸಜ್ಜೀಭವತು ಮಾ ಚಿರಮ್ ॥೪೦॥

ಇತಿ ಶಂಭುವಚಃ ಶ್ರುತ್ವಾ ಭೇರೀಭೋಂಕಾರಮಾದಿಶತ್ ।
ಯೋಗೋ ಯೋಗ ಇತಿ ಪ್ರೋಚ್ಚೈರ್ಭಾಸ್ಕರಸ್ಯೋದಯಂ ಪ್ರತಿ ॥೪೧॥

ಸೇನಾನ್ಯೈವಂ ಸಮಾದಿಷ್ಟಾಃ ಸೌವಿದಲ್ಲಾಸ್ತ್ವರಾನ್ವಿತಾಃ ।
ಪ್ರಮಥಾಂಶ್ಚೋದಯಾಮಾಸುಃ ಸಜ್ಜತ ತ್ವಿತಿ ಚಾಸಕೃತ್ ॥೪೨॥

ಶೈಲಾದಿನಾಽಪಿ ತ್ವರಯಾ ರಥೋ ಹೇಮಪರಿಷ್ಕೃತಃ ।
ಸೂಪಸ್ಕರಃ ಶೋಭನಾಶ್ವಃ ಸ್ವಕ್ಷದಂಡಃ ಸುಚಕ್ರಯುಕ್ ॥೪೩॥

ಸಕೂಬರಃ ಸರ್ವಸಹಃ ಸರ್ವಪ್ರಹರಣಾನ್ವಿತಃ ।
ಸುಪತಾಕಃ ಪ್ರಾವೃಷೇಣ್ಯಘನಗಂಭೀರಗರ್ಜಿತಃ ॥೪೪॥

ತರ್ಜಿತಾಶೇಷಭೂಗೋಲಃ ಸಮುಚ್ಛ್ರಿತವೃಷಧ್ವಜಃ ।
ಸಜ್ಜೀಕೃತಃ ಕ್ಷಣೇನೇವ ಸರ್ವಲಕ್ಷಣಲಕ್ಷಿತಃ ॥೪೫॥

ಉದಿತೇಽರ್ಕೇ ಮಹಾದೇವೋ ರಥಮಾಸ್ಥಾಯ ಶಂಕರಃ ।
ಯುದ್ಧಾಯ ನಿರ್ಯಯೌ ದೇವಃ ಸೇನಾನ್ಯಾ ಚ ಸ್ವಸೇನಯಾ ॥೪೬॥

ನಿಮಗೆ ಕೇಡು ಮಾಡಿದವನು ನನಗೆ ಕೇಡು ಮಾಡಿದಂತೆಯೇ. ನಿಮಗೆ ಅನುಕೂಲನಾದವನು ನನಗೆ ಅನುಕೂಲವಾಗಿರುವನು. ನನ್ನ ಅಂಶದಿಂದಲೇ ನಿಮ್ಮ ಸೃಷ್ಟಿಯಾಗಿದೆ ॥೩೫॥

ಈ ವಿಷ್ಣುಬ್ರಹ್ಮರೂ ಸಹ ಸಾಕ್ಷಾತ್ ನಾನೇ ಆಗಿರುವೆ ಇದರಲ್ಲಿ ಸಂಶಯವೇ ಬೇಡ ನಮ್ಮ ಮೂವರಲ್ಲಿ ಭೇದವೆಣಿಸುವ ಪಾಮರನು ನಾಶಹೊಂದುತ್ತಾನೆ ॥೩೬॥

ನನ್ನ ಪ್ರಾಣದಂತಿರುವ ನಿಮ್ಮನ್ನು ಸಾಯಲಿಚ್ಛಿಸುವ ಯಾವನು ಪೀಡಿಸಿದನು ? ಹೇಳಿ. ಆತ ಯಮನಾಗಿದ್ದರೂ ಸಹ ಆತನನ್ನು ಬಿಡದೆ ಸಂಹರಿಸುತ್ತೇನೆ ॥೩೭॥

**ದೇವತೆಗಳು ಹೇಳಿದರು –**

ಪ್ರಭೋ! ಮಹಾದೇವ! ತ್ರಿಪುರಾಸುರನ ತನಯರಾದ ಈ ಮೂರುಜನ ದೈತ್ಯರು ನಮ್ಮನ್ನು ಬಹಳ ಪೀಡಿಸುತ್ತಿದ್ದಾರೆ. ಮೂರು ಲೋಕಗಳನ್ನು ನಾಶಗೊಳಿಸಲು ತೊಡಗಿದ್ದಾರೆ ॥೩೮॥

ಶಂಕರ! ಹತ್ತು ಅಕ್ಷೋಹಿಣಿ ಸೇನೆಯೊಂದಿಗೆ ವ್ಯೂಹ ರಚಿಸಿಕೊಂಡು ನಮ್ಮ ಮೇಲೆ ಮುಗಿಬಿದ್ದ ಈ ದಾನವರಿಗೆ ಹೆದರಿ ನಾವೀಗ ನಿನ್ನನ್ನು ಶರಣು ಹೊಂದಿದ್ದೇವೆ ॥೩೯॥

ದೇವತೆಗಳ ಈ ಮಾತನ್ನಾಲಿಸಿದ ಭಗವಾನ್ ಪರಮೇಶ್ವರನು ತನ್ನ ಸೈನ್ಯವನ್ನು ಶೀಘ್ರವಾಗಿ ಸಮರ ಸನ್ನದ್ಧಗೊಳಿಸುವಂತೆ ದೇವ ಸೇನಾಪತಿಯಾದ ಸುಬ್ರಹ್ಮಣ್ಯನಿಗೆ ತಿಳಿಸಿದನು ॥೪೦॥

ಪರಶಿವನ ಈ ಅಪ್ಪಣೆಯನ್ನು ಕೇಳಿ ಕುಮಾರಸ್ವಾಮಿಯು ರಣವಾದ್ಯಗಳನ್ನು ಬಾರಿಸಲು ತಿಳಿಸಿದನು. ಯುದ್ಧಯೋಗ ಒದಗಿತಂದು ಸೂರ್ಯೋದಯವನ್ನು ಎದುರು ನೋಡಿದನು ॥೪೧॥

ಷಣ್ಮುಖನ ಆದೇಶವನ್ನು ಕೇಳಿದೊಡನೆಯೇ ಶಿವಾಂತಃಪುರ ರಕ್ಷಕರಾದ ಕಂಚುಕಿಗಳು ಅವಸರದಿಂದ ಸಜ್ಜುಗೊಳ್ಳುವಂತೆ ಪ್ರಮಥ ಗಣಗಳನ್ನು ಪುನಃ ಪುನಃ ಪ್ರಚೋದಿಸಿದರು ॥೪೨॥

ಶಿಲಾದಕುಮಾರನಾದ ನಂದೀಶ್ವರನು ಬಂಗಾರದಿಂದ ನಿರ್ಮಿಸಿದ ರಥವೊಂದನ್ನು ಸಜ್ಜುಗೊಳಿಸಿದನು. ಸುದೃಢವಾದ ಅಚ್ಚು ಮತ್ತು ಚಕ್ರಗಳನ್ನುಳ್ಳ, ಮನೋಹರ ಸ್ತಂಭಗಳುಳ್ಳ ಆ ರಥಕ್ಕೆ ಸುಂದರಾಶ್ವಗಳನ್ನು ಹೂಡಿದ್ದರು. ಸಕಲ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿದ್ದ ನೊಗವುಳ್ಳ ಅದು ಎಂಥ ದಾಳಿಯನ್ನಾದರೂ ಎದುರಿಸುವಷ್ಟು ಬಲವಾಗಿತ್ತು. ಅದರ ಶಬ್ದವು ಮಳೆಗಾಲದ ಮೋಡಗಳ ಗುಡುಗಿನಂತೆ ಕೇಳಿಬರುತ್ತಿದ್ದವು ಅದರ ಚಲನೆಗೆ ಭೂಮಿಯೇ ನಡುಗುತ್ತಿತ್ತು. ಕ್ಷಣಮಾತ್ರದಲ್ಲಿ ಸಜ್ಜುಗೊಂಡ, ಸರ್ವಶುಭಲಕ್ಷಣಗಳುಳ್ಳ ಈ ಶಿವರಥದ ಮೇಲ್ಭಾಗದಲ್ಲಿ ವೃಷಭ ಚಿಹ್ನೆಯ ಧ್ವಜವನ್ನು ಎತ್ತಿ ಕಟ್ಟಲಾಗಿತ್ತು. ॥೪೩–೪೫॥

ಸೂರ್ಯೋದಯವಾದೊಡನೆಯೇ ಭಗವಾನ್ ಶಂಕರನು ಆ ರಥವನ್ನು ಆರೋಹಿಸಿ ದೇವಸೇನಾನಿಯಾದ ಕುಮಾರಸ್ವಾಮಿಯೊಂದಿಗೆ ತನ್ನ ಸೇನೆಯನ್ನು ಯುದ್ಧಕ್ಕೆ ಕರೆದೊಯ್ದನು. ॥೪೬॥

ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಡಿಂಡಿಮಾಃ ।
ಸಹಸ್ರೈವಾಭ್ಯಹನ್ಯಂತ ಶತಶೋಧ ಸಹಸ್ರಶಃ ॥೪೭॥
ಪ್ರೇಮ್ಣಾ ಚ ವಿಕೃತಾಕಾರಾ ವಿನಂದಂತೋ ಯುಯುತ್ಸವಃ ।
ನಾನಾವೇಷಾಯುಧಧರಾಃ ಕಂಪಯಂತೋ ಧರಾಂ ಯಯುಃ ॥೪೮॥
ಸ್ವಸೇನಾಂ ದೇವಸೇನಾಂ ಚ ಸೇನಾನೀಃ ಷಣ್ಮುಖೋ ಬಲೀ।
ಮಯೂರವಾಹನೋ ವ್ಯೂಹ್ಯ ಯುದ್ಧಾಯಾಭಿಯಯೌ ಪುನಃ ॥೪೯॥
ಬೃಹತ್ಪ್ರಚಂಡೋ ಬಲವಾನ್ ಗಣಾಧಿಪತಿರುಂದುರುಮ್ ।
ಯುದ್ಧಾಯಾಭಿಯಯೌ ಯುಕ್ತೋ ನಿಜಯಾ ವಿಘ್ನಸೇನಯಾ ॥೫೦॥
ಘಂಟಾಕರ್ಣಃ ಶಂಕುಕರ್ಣಃ ಕುಂಡೋದರಮಹೋದರೌ ।
ಶೂರ್ಪಕರ್ಣಃ ಕಾಕಮುಖಃ ಸಿಂಹಾಸ್ಯೋ ವ್ಯಾಘ್ರತುಂಡಕಃ ॥೫೧॥
ಸೂರ್ಯವಕ್ತ್ರಶ್ಚಂದ್ರವಕ್ತ್ರಃ ಚತುರ್ವಕ್ತ್ರಶ್ಚತುರ್ಭುಜಃ ।
ಚತುರಂಘ್ರಿಶ್ಚತುರ್ನೇತ್ರ ಇತ್ಯಾದ್ಯಾಃ ಕೋಟಿಶೋ ಗಣಾಃ ॥೫೨॥
ನೃತ್ಯಂತಶ್ಚ ಹಸಂತಶ್ಚ ಯುದ್ಧಾಯಾಭಿಯಯುಃ ಪುರಾತ್ ।
ತಥೈವ ದೈತ್ಯಸೇನಾಽಪಿ ಸನ್ನದ್ಧಾ ಯುದ್ಧದುರ್ಮದಾ ॥೫೩॥
ವ್ಯೂಢಾಸಿಲೋಮ್ನಾ ಸೇನಾನ್ಯಾ ಗುಪ್ತಾ ಯುದ್ಧಾಯ ನಿರ್ಯಯೌ ।
ಯತ್ರ ಶೂರಾ ಮಹೇಷ್ವಾಸಾ ಅಸುರಾಃ ಸುರಶತ್ರವಃ ॥೫೪॥
ಅಯಃಶಿರಾ ಅಶ್ವಶಿರಾಸ್ತ್ರಿಶಿರಾ ದ್ವಿಶಿರಾಃ ಶರಃ ।
ಗಜವಕ್ತ್ರಃ ಕಾಕಮುಖಃ ಕಾಲತುಂಡಸ್ತು ಹುಂಡಕಃ ॥೫೫॥
ಸುರಾಪೋಽಪದ್ಯುಮಾಂಸಾಶೀ ಲೋಹದಂಡಸ್ತ್ರಿಲೋಚನಃ।
ಮಾಹಿಷೋ ಮಖವಿಧ್ವಂಸೀ ಸೀರದಂಷ್ಟ್ರೋ ರಣಪ್ರಿಯಃ ॥೫೬॥
ಗೃಧ್ರಕೇತುಃ ಸಿಂಹಕೇತುಃ ಸುಕೇತುಃ ಕೇತುಮಾನ್ ಹಲೀ।
ಜೃಂಭಣಃ ಸ್ತಂಭನಃ ಸ್ತಂಭ ಇತ್ಯಾದ್ಯಾ ಅಸುರೇಶ್ವರಾಃ ॥೫೭॥
ವಿವಿಧಾಯುಧವಾಹಾಸ್ತೇ ಯುದ್ಧಾಯಾಭಿಮುಖಾ ಯಯುಃ ।
ದೇವಾನಾಮಸುರಾಣಾಂ ಚ ಚಮ್ವಾವೇವಂ ಸಮುದ್ಯತೇ ॥೫೮॥
ರಣಾಯ ಮಹತೇ ಕ್ರುದ್ಧೇ ಪರಸ್ಪರಜಯೋತ್ಸುಕೇ ।
ಕಥಂ ತಯೋಃ ಸಂಪ್ರಹಾರ ಆಸೀತ್ಪ್ರಾಣವಿನಾಶನಃ ॥೫೯॥
ಶೃಣುಧ್ವಂ ಮುನಯಃ ಸರ್ವೇ ಕಥಯಿಷ್ಯಾಮಿ ತಂ ಹಿ ವಃ ॥೬೦॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ
ಕ್ರತುಪುರಮಾಹಾತ್ಮ್ಯೇ
ದೇವಾಸುರಯುದ್ಧೋದ್ಯೋಗೋ ನಾಮೈಕಾದಶೋಽಧ್ಯಾಯಃ

ನಂತರ ನೂರಾರು ಸಾವಿರಾರು ಶಂಖಗಳು, ರಣಭೇರಿಗಳು, ತಮಟೆಗಳು, ಡಮರುಗಳು ಮೊದಲಾದ ವಾದ್ಯಗಳನ್ನು ಒಮ್ಮೆಗೇ ಬಾರಿಸಲಾರಂಭಿಸಿದರು ||೪೭||

ಬಗೆ ಬಗೆಯ ವೇಷಗಳನ್ನು ಧರಿಸಿದ, ವಿವಿಧಾಯುಧಧಾರಿಗಳಾದ ಶಿವಗಣಗಳು ಭೂಮಿಯನ್ನು ನಡುಗಿಸುತ್ತ, ಪ್ರೇಮದಿಂದ ಪರಸ್ಪರ ನಗಿಸುತ್ತ ಯುದ್ಧಕ್ಕೆ ತೆರಳಿದರು ||೪೮||

ಸೇನಾಪತಿಯಾದ ಷಣ್ಮುಖನು ಮಯೂರವನ್ನಾರೋಹಿಸಿ ತನ್ನ ಸೇನೆಯನ್ನು ದೇವಸೇನೆಯೊಂದಿಗೆ ವ್ಯೂಹಾಕಾರವಾಗಿ ಮುನ್ನಡೆಸಿದನು. ದೊಡ್ಡದಾದ ಉದರವುಳ್ಳ, ಬಲಶಾಲಿಯಾದ ಗಣೇಶ್ವರನು ತನ್ನ ವಾಹನವಾದ ಮೂಷಕವನ್ನು ಆರೋಹಿಸಿ ತನ್ನ ವಿಘ್ನ ಸೈನ್ಯದೊಂದಿಗೆ ಯುದ್ಧಕ್ಕೆ ತೆರಳಿದನು ||೪೯–೫೦||

''ಘಂಟಾಕರ್ಣ – ಶಂಕುಕರ್ಣ – ಕುಂಡೋದರ – ಮಹೋದರ – ಶೂರ್ಪಕರ್ಣ – ಕಾಕಮುಖ – ಸಿಂಹಾಸ್ಯ – ವ್ಯಾಘ್ರತುಂಡಕ – ಸೂರ್ಯವಕ್ತ್ರ – ಚಂದ್ರವಕ್ತ್ರ – ಚತುರ್ವಕ್ತ್ರ – ಚತುರ್ಭುಜ – ಚತುರಂಘ್ರಿ – ಚತುರ್ನೇತ್ರ, ಇವರೇ ಮೊದಲಾದ ಕೋಟಿಗಟ್ಟಲೆ ಗಣಗಳು ನಗುತ್ತ, ಕುಣಿಯುತ್ತ, ಯುದ್ಧಕ್ಕಾಗಿ ಕೈಲಾಸ ಗಿರಿಯಿಂದ ಹೊರಟರು ಅದರಂತೆಯೇ ರಣೋತ್ಸಾಹದಿಂದ ಸೊಕ್ಕಿದ ದಾನವ ಸೇನೆಯೂ ಸಹ ಯುದ್ಧ ಮಾಡಲು ಸನ್ನದ್ಧಗೊಂಡಿತು ||೫೧–೫೩||

ಮಹಾಮದಮುರ್ಧಾರಿಗಳಾದ, ದೇವವೈರಿಗಳಾದ ದಾನವರಿರುವ ಕಡೆಗೆ ತಾನು ಸಂರಕ್ಷಿಸಿದ ಸೇನೆಯನ್ನು ಸೇನಾಪತಿ ಷಣ್ಮುಖನು ಕಳಿಸಿಕೊಟ್ಟನು ||೫೪||

ಅಯಃಶಿರ–ಅಶ್ವಶಿರ–ತ್ರಿಶಿರ–ಮಹಾಕ್ರೂರಿಯಾದ ದ್ವಿಶಿರ – ಗಜವಕ್ತ್ರ– ಕಾಕಮುಖ–ಕಾಲತುಂಡ–ಹುಂಡಕ–ಸುರಾಪ–ಅಪದ್ಯುಮಾಂಸಾಶೀ–ಲೋಹದಂತ– ತ್ರಿಲೋಚನ–ಮಾಹಿಷ–ಮಖವಿಧ್ವಂಸಿ–ಸೀರದಂಷ್ಟ್ರ–ರಣಪ್ರಿಯ–ಗೃಧ್ರಕೇತು–ಸುಕೇತು– ಕೇತುಮಾನ್–ಹಲೀ–ಜೃಂಭಣ–ಸ್ತಂಭನ–ಸ್ತಂಭ, ಮೊದಲಾದ ಅಸುರ ಸೇನಾಧಿಪತಿ ಗಳುಳ್ಳ ದಾನವ ಸೇನೆಯು ಉತ್ಸಾಹದಿಂದ ಮೇಲೆದ್ದಿತು. ||೫೫–೫೭||

ವಿವಿಧಾಯುಧಧಾರಿಗಳಾದ ಅವರೆಲ್ಲರೂ ಯುದ್ಧಾಭಿಮುಖವಾಗಿ ಹೊರಟರು ಮುನಿಗಳೇ! ದೇವಸೇನೆಗೂ ದೈತ್ಯಸೇನೆಗೂ ಭೀಕರ ಸಮರವಾರಂಭವಾಯಿತು ಪರಸ್ಪರ ಗೆಲ್ಲಲೇಬೇಕೆಂಬ ಛಲದಿಂದ, ಕ್ರೋಧದಿಂದ, ಆ ಯುದ್ಧದಲ್ಲಿ ಅವರಿಬ್ಬರೂ ಪ್ರಾಣಾಂತಿಕವಾದ ಪ್ರಹಾರಗಳನ್ನು ಹೇಗೆ ಮಾಡಿದರು? ಎಂಬುದನ್ನು ಹೇಳುವ ಗಮನವಿಟ್ಟು ಅದನ್ನು ಕೇಳಿರಿ ||೫೮–೬೦||

ಭವಿಷ್ಯೋತ್ತರ ಪುರಾಣದ ಉತ್ತರ ಖಂಡದಲ್ಲಿನ
ಕ್ರತುಪುರಮಾಹಾತ್ಮ್ಯೆಯಲ್ಲಿ
ದೇವಾಸುರಯುದ್ಧೋದ್ಯೋಗವೆಂಬ ಹನ್ನೊಂದನೆಯ ಅಧ್ಯಾಯವು ಮುಗಿಯಿತು.

# ಅಥ ದ್ವಾದಶೋಽಧ್ಯಾಯಃ

**ಸೂತ ಉವಾಚ –**

ತಯೋಃ ಸಮಭವದ್ಯುದ್ಧಂ ಸೇನಯೋ ರೋಮಹರ್ಷಣಮ್ ।
ನಾನಾವಾದಿತ್ರಸಂಘುಷ್ಟಂ ಭೀರೂಣಾಂ ಭಯವರ್ಧನಮ್ ॥೧॥

ಅಶ್ವವಾರಾ ಅಶ್ವವಾರೈ ರಥಿನೋ ರಥಿಭಿಃ ಸಹ ।
ಪತ್ತಿಭಿಃ ಪತ್ತಯಶ್ಚೈವ ಸಮಾಪೇತುರ್ಯಥಾಯಥಮ್ ॥೨॥

ನಿರ್ಮರ್ಯಾದಂ ಮಹಾಯುದ್ಧಂ ಯಮರಾಷ್ಟ್ರವಿವರ್ಧನಮ್ ।
ಪ್ರಾವರ್ತತ ಸುರಾಣಾಂ ಚಾಽಸುರಾಣಾಂ ಚ ಪರಸ್ಪರಮ್ ॥೩॥

ತತಃ ಶಿವಗಣಾಃ ಕ್ರುದ್ಧಾ ಅಸುರಾನ್ ಶಿವಚೋದಿತಾಃ ।
ನಿಜಘ್ನುರಸುರಾನ್ ಯುದ್ಧೇ ಶಸ್ತ್ರೈರುಚ್ಚಾವಚೈಃ ಶಿತೈಃ ॥೪॥

ಕೇಷಾಂ ಚಿದ್ಬಾಹವಶ್ಛಿನ್ನಾಶ್ಛಿನ್ನಗ್ರೀವಾಸ್ತಥಾಪರೇ ।
ಛಿನ್ನವಾಹಾಶ್ಛಿನ್ನರಥಾ ನಿಪೇತುರ್ಧರಣೀತಲೇ ॥೫॥

ರುಧಿರೌಘಮಹಾನದ್ಯಃ ನದ್ಯಸ್ತತ್ರ ವಿಸುಸ್ರುವುಃ ।
ಅಶ್ವಮೀನಾ ರಥಾವರ್ತಾ ಗಜಗ್ರಾಹಾ ಧ್ವಜಾಹಯಃ ॥೬॥

ಸಾಽಸುರಾಣಾಂ ಶಿವಗಣೈರ್ವಧ್ಯಮಾನಾ ವರೂಥಿನೀ ।
ತ್ರಾತಾರಂ ನಾಧಿಗಚ್ಛಂತೀ ವಿದ್ರುತಾ ಸರ್ವತೋ ದಿಶಃ ॥೭॥

ಅಸಿಲೋಮಾ ತತಃ ಕ್ರುದ್ಧಃ ಸೇನಾನೀರ್ದಷ್ಟದಚ್ಛದಃ ।
ಪ್ರಾಹೋಚ್ಚೈಃ ಸಾರಥಿಂ ಯಾಹಿ ಯತ್ರೇಮೇ ಶಿವಕಿಂಕರಾಃ ॥೮॥

ಯಂತಾ ತದುಪಧಾರ್ಯೋಗ್ರಂ ವಾಕ್ಯಂ ಸ್ವಸ್ವಾಮಿನಸ್ತದಾ ।
ಅಶ್ವಾನ್ ಸಂಚೋದಯಾಮಾಸ ಯತ್ರ ಸಾ ಶಾಂಭವೀ ಚಮೂಃ ॥೯॥

ಆಯಾಂತಮಸಿಲೋಮಾನಂ ಮಹತ್ಯಾಽಸುರಸೇನಯಾ ।
ತಂ ದೃಷ್ಟ್ವಾ ಪ್ರಮಥಾನೀಕಂ ಪ್ರಾದ್ರವದ್ಯತ್ರ ಷಣ್ಮುಖಃ ॥೧೦॥

ತಾನ್ ವಿದ್ರುತಾನ್ ಸಮಾಶ್ವಾಸ್ಯ ಗುಹೋ ಯೋದ್ಧುಮುಪಸ್ಥಿತಃ ।
ಮಯೂರಂ ಪರ್ವತಾಕಾರಂ ಸಮಾರುಹ್ಯ ಪ್ರತಾಪವಾನ್ ॥೧೧॥

# ಹನ್ನೆರಡನೆಯ ಅಧ್ಯಾಯ

**ಸೂತರು ಹೇಳಿದರು –**

ದೇವಾಸುರ ಸೇನೆಗಳೆರಡೂ ರೋಮಾಂಚಕಾರಿಯಾದ ಯುದ್ಧವನ್ನು ಆರಂಭಿಸಿದವು ವಿವಿಧ ರಣವಾದ್ಯಗಳ ನಿನಾದದಿಂದ ತುಂಬಿಹೋದ ಆ ಯುದ್ಧದ ನೋಟವು ಬೀರುಗಳಿಗೆ ಭೀಕರವಾಗಿತ್ತು ॥೧॥

ಅಶ್ವಾರೋಹಿಗಳು ಅಶ್ವಾರೋಹಿಗಳೊಂದಿಗೆ, ರಥಿಕರು ರಥಿಗಳೊಂದಿಗೆ, ಪದಾತಿಗಳು ಪದಾತಿಗಳೊಂದಿಗೆ ರಣೋತ್ಸಾಹದಿಂದ ಯುದ್ಧವನ್ನಾರಂಭಿಸಿದರು ॥೨॥

ಎಲ್ಲೆಯನ್ನೇ ಮೀರಿದ ದೇವಾಸುರರ ಆ ಪರಸ್ಪರ ಯುದ್ಧವು ಪ್ರಾರಂಭವಾಗಿ ಯಮನ ರಾಜ್ಯವನ್ನು ತುಂಬಲಾರಂಭಿಸಿತು ॥೩॥

ಅನಂತರ ಶಿವಗಣಗಳು ಕೋಪಿಷ್ಠರಾಗಿ ಶಿವನ ಅಣತಿಯಂತೆ ಅಸುರರನ್ನು ಮುತ್ತಿ ಹರಿತವಾದ ಸಣ್ಣ ದೊಡ್ಡ ಶಸ್ತ್ರಾಸ್ತ್ರಗಳಿಂದ ಅವರನ್ನು ಕೊಂದರು. ॥೪॥

ಆ ಯುದ್ಧದಲ್ಲಿ ಕೆಲವರ ಕೈಗಳು ತುಂಡಾದವು ಕೆಲವರ ಕುತ್ತಿಗೆ ಮುರಿದವು ಕೆಲವರ ಅಶ್ವಗಳು, ರಥಗಳು ಭಗ್ನಗೊಂಡವು. ಅವರೆಲ್ಲರೂ ದೇವತೆಗಳ ಪ್ರಹಾರವನ್ನು ತಾಳಲಾರದೇ ಧರೆಗುರುಳಿದರು ॥೫॥

ಅಲ್ಲಿ ಸುರಿದ ರಕ್ತದಿಂದ ಮಹಾನದಿಯೇ ಉದ್ಭವಿಸಿತು ಅದರಲ್ಲಿ ಮೃತಾಶ್ವಗಳೇ ಮೀನುಗಳಾದರೆ ರಥಗಳು ಸುಳಿಗಳಾದವು ಆನೆಗಳು ಮೊಸಳೆಗಳಂತಾದವು ಧ್ವಜಗಳೇ ಸರ್ಪಗಳಂತಿದ್ದ ಈ ಭೀಕರ ನದಿಯು ಅಲ್ಲಿ ಉದ್ಭವಿಸಿತು. ಶಿವಗಣಗಳ ಪ್ರಹಾರಗಳನ್ನು ತಾಳಲಾರದ ಅಸುರಸೇನೆಯು ತನ್ನ ರಕ್ಷಿಸುವ ನಾಯಕರಾರೂ ಅಲ್ಲಿಲ್ಲದ್ದನ್ನು ಕಂಡು ಎಲ್ಲ ದಿಕ್ಕುಗಳಿಗೂ ಚದುರಿ ಓಡಿಹೋಯಿತು. ॥೬–೭॥

ಅಸಿಲೋಮನೆಂಬ ದೈತ್ಯ ಸೇನಾಪತಿಯು ಕೋಪದಿಂದ ತನ್ನ ತುಟಿಗಳನ್ನು ಕಡಿಯುತ್ತ ಈ "ಶಿವಗಣಗಳಿರುವೆಡೆ ನನ್ನ ರಥವನ್ನು ಸಾಗಿಸು" ಎಂದು ಸಾರಥಿಗೆ ಗಟ್ಟಿಯಾಗಿ ಹೇಳಿದನು ॥೮॥

ಸ್ವಾಮಿಭಕ್ತನಾದ ಆ ಸಾರಥಿಯು ತನ್ನ ಸ್ವಾಮಿಯ ಬಿರುನುಡಿಗಳನ್ನು ಕೇಳಿ ಶಿವಸೇನೆಯಿರುವ ಕಡೆ ತನ್ನ ರಥಾಶ್ವಗಳನ್ನು ಓಡಿಸಿದನು ॥೯॥

ತನ್ನ ಅಸುರ ಸೇನೆಯೊಂದಿಗೆ ತಮ್ಮ ಮೇಲೇರಿ ಬರುತ್ತಿದ್ದ ಅಸಿಲೋಮನನ್ನು ಕಂಡ ಪ್ರಮಥಗಣಗಳು ದೇವಸೇನಾಪತಿ ಕುಮಾರಸ್ವಾಮಿಯಿರುವ ಕಡೆ ಓಡಿದರು.॥೧೦॥

ಮಹಾಪ್ರತಾಪಿಯಾದ ಕುಮಾರಸ್ವಾಮಿಯು ಹೆದರಿ ಬಂದ ಶಿವಗಣಗಳನ್ನು ಸಮಾಧಾನಪಡಿಸಿ ಪರ್ವತದಂತಿದ್ದ ತನ್ನ ವಾಹನ ಮಯೂರವನ್ನೇರಿ ಅಸಿಲೋಮ ನೆಡೆಗೆ ಹೋದನು. ॥೧೧॥

ಅಸಿಲೋಮಾಥ ಸೇನಾನೀಃ ಸೇನಾನ್ಯಂ ಪ್ರಾಹ ತಂ ಗುಹಮ್ ।
ಚಿರಾದ್ದೃಷ್ಟೋಽಸಿ ರೇ ಸ್ಕಂದ ಯುದ್ಧ್ಯಸ್ವ ಪುರುಷೋ ಭವ ॥೧೨॥

ಸೈನಾಪತ್ಯಂ ಕುಮಾರಾಯ ಪ್ರಯಚ್ಛಂತ್ಯಬುಧಾ ಬುಧಾಃ ।
ಯೋದ್ಧವ್ಯಂ ಕಿಂತು ಬಾಲೇನ ತ್ವಯಾ ಕ್ರೌಂಚಾರಿಣಾ ಗುಹ ॥೧೩॥

ಘಾಟಸ್ವ ಶೌರ್ಯಮಾಸ್ಥಾಯ ಮಾಽತ್ರ ಕಾಪುರುಷೋ ಭವ ।
ಇತಿ ತೇನಾಸಿಲೋಮ್ನಾಽಽಜೌ ಸಮಾಕ್ಷಿಪ್ತಃ ಸುರಾರಿಣಾ ॥೧೪॥

ಗುಹಸ್ತಮಾಹ ದುರ್ಬುದ್ಧೇ ಮಾಽಽತ್ಮಶ್ಲಾಘಾಂ ವೃಥಾ ಕೃಥಾಃ ॥
ಮಾ ವಾಚಾ ಭವಶೂರಸ್ತ್ವಂ ಕ್ರಿಯಯಾ ಭವ ಮೇ ಪುರಃ ॥೧೫॥

ಇತಿ ತಸ್ಯ ವಚಃ ಶ್ರುತ್ವಾಽಸಿಲೋಮಾ ಕ್ರೋಧಮೂರ್ಛಿತಃ ।
ನಾರಾಚಾನಾಂ ಸಹಸ್ರೇಣ ಸೇನಾನ್ಯಂ ಸ ಸಮಾವೃಣೋತ್ ॥೧೬॥

ಸೇನಾನೀರಪಿ ತಂ ಬಾಣೈರಸಿಲೋಮಾನಮಾವೃಣೋತ್ ।
ಕೃತೇ ಪ್ರತಿಕೃತಂ ಕುರ್ವನ್ ಕ್ಷಿಪ್ರಕಾರೀ ಶಿವಾತ್ಮಜಃ ॥೧೭।

ಅಸಿಲೋಮ್ನಾಥ ವಿವ್ಯಾಧ ಮಯೂರಂ ಬಹುಭಿಃ ಶರೈಃ ।
ನ ಗಾಢವಿದ್ಧೋ ವ್ಯಥಿತೋ ಬಭೂವ ಫಣಿಭೋಜನಃ ॥೧೮॥

ಮಯೂರಂ ವ್ಯಥಿತಂ ದೃಷ್ಟ್ವಾ ಕುಮಾರಃ ಕ್ರೋಧಮೂರ್ಛಿತಃ ।
ನಿಶಿತೇನಾಚ್ಛಿನತ್ತಸ್ಯ ಸಾರಥೇರಿಷುಣಾ ಶಿರಃ ॥೧೯॥

ಚತುರ್ಭಿಶ್ಚತುರೋ ವಾಹಾನಚ್ಛಿನನ್ನಿಶಿತೈಃ ಶರೈಃ ।
ಧ್ವಜಂ ನ್ಯಪಾತಯದ್ಭೂಮೌ ರಥಂ ಚ ತಿಲಶೋಽಚ್ಛಿನತ್ ॥೨೦॥

ನ ಚ್ಛಿನ್ನಧನ್ವಾ ವಿರಥೋ ಹತಾಶ್ವೋ ಹತಸಾರಥಿಃ ।
ಶೂಲಮುದ್ಯಮ್ಯ ತರಸಾ ಹಂತುಂ ಸೇನಾನ್ಯಮದ್ರವತ್ ॥೨೧॥

ತೌ ಸೇನಾನ್ಯಾವುಭೌ ಯುದ್ಧಮಕುರ್ವಾತಾಂ ಪರಸ್ಪರಮ್ ।
ಪದಾತೀ ಪಾದಘಾತೇನ ಕಂಪಯಂತೌ ವಸುಂಧರಾಮ್ ॥೨೨॥

ದೇವಾಶ್ಚ ದಾನವಾಶ್ಚಾಸನ್ ವಿಸ್ಮಿತಾ ಯುದ್ಧವೀಕ್ಷಣಾತ್ ।
ಉಭಾವಪಿ ಪ್ರಶಂಸಂತಃ ಸಾಧು ಸಾಧ್ವಿತ್ಯವಾದಿಷುಃ ॥೨೩॥

ಆಗ ದೈತ್ಯಸೇನಾಪತಿ ಅಸಿಲೋಮನು ಪ್ರತಾಪಿಯಾದ ಕಾರ್ತಿಕೇಯನಿಗೆ ಸ್ಕಂದ! ಬಹಳ ಕಾಲದ ಮೇಲೆ ನೀನೀಗ ನನ್ನ ಕಣ್ಣಿಗೆ ಬಿದ್ದಿರುವಿ ನನ್ನೊಂದಿಗೆ ಯುದ್ಧ ಮಾಡಿ ನಿನ್ನ ಪೌರುಷವನ್ನು ತೋರಿಸು ॥೧೨॥

ಸಣ್ಣ ಬಾಲಕನಿಗೆ ಸೇನಾಧಿಪತ್ಯವನ್ನು ಕಟ್ಟುವವರು ಮೂರ್ಖರೇ ಸರಿ ಆದರೆ ನಾನೀಗ ಕ್ರೌಂಚಾರಿಯಾದ ಬಾಲಕನಾದ ನಿನ್ನೊಂದಿಗ ಯುದ್ಧವನ್ನು ಮಾಡ ಬೇಕಾಗಿದೆ ॥೧೩॥

ಪರಾಕ್ರಮದಿಂದ ನನ್ನೊಂದಿಗೆ ಕಾದು ನಿನ್ನ ಪೌರುಷವನ್ನು ತೋರು ಹೇಡಿಯಂತೆ ಹಿಂಜರಿಯಬೇಡ ಎಂದನು ರಣರಂಗದಲ್ಲಿ ಅಸಿಲೋಮನ ನಿಂದಾತ್ಮಕವಾದ ಈ ಮಾತನ್ನು ಕೇಳಿ ಕುಮಾರ ಸ್ವಾಮಿಯು ಆತನಿಗೆ ''ದುರ್ಬುದ್ಧಿಯ ದೈತ್ಯನೇ! ವ್ಯರ್ಥವಾಗಿ ಆತ್ಮಶ್ಲಾಘನೆ ಮಾಡಬೇಡ ಮಾತಿನಿಂದಲೇ ನಿನ್ನ ಶೌರ್ಯವನ್ನು ತೋರದೇ ನನ್ನೊಂದಿಗ ಕಾದು ತೋರಿಸು'' ಎಂದು ಉತ್ತರಿಸಿದನು ॥೧೪–೧೫॥

ಕುಮಾರಸ್ವಾಮಿಯ ಮರ್ಮಭೇದಕವಾದ ನುಡಿಗಳನ್ನು ಕೇಳಿ ಕ್ರೋಧದಿಂದ ಸಿಡಿದೆದ್ದ ಅಸಿಲೋಮನು ಸಾವಿರ ಬಾಣಗಳಿಂದ ಸ್ಕಂದನನ್ನು ಮುಚ್ಚಿದನು ॥೧೬॥

ಸ್ಕಂದನೂ ಸಹ ಅಸಿಲೋಮನನ್ನು ಬಾಣಗಳಿಂದ ಮುಚ್ಚಿದನು ಶಿವತನಯ ನಾದ ಕಾರ್ತಿಕೇಯನು ಅಸುರನು ಮಾಡಿದ್ದಕ್ಕ ಪ್ರತೀಕಾರವನ್ನು ಒಡನೆಯೇ ಮಾಡುತ್ತಿದ್ದನು. ॥೧೭॥

ನಂತರ ಅಸಿಲೋಮನು ಅಸಂಖ್ಯ ಶರಗಳಿಂದ ಸ್ಕಂದವಾಹನವಾದ ನವಿಲನ್ನು ಘಾಸಿಗೊಳಿಸಿದನು ಸರ್ಪಭಕ್ಷಕವಾದ ಸ್ಕಂದವಾಹನ ಮಯೂರವು ಅಸುರನ ಬಾಣ ಗಳಿಂದ ಮುಚ್ಚಿ ಹೋಗಿ ಬಹಳ ಕ್ಲೇಶಕ್ಕೊಳಗಾಯಿತು ॥೧೮॥

ತನ್ನ ವಾಹನಕ್ಕೊದಗಿದ ಸಂಕಟದಿಂದ ಕೋಪಗೊಂಡ ಕುಮಾರಸ್ವಾಮಿಯು ಹರಿತವಾದ ಬಾಣವೊಂದರಿಂದ ಅಸಿಲೋಮನ ಸಾರಥಿಯ ತಲೆಯನ್ನು ಕತ್ತರಿಸಿದನು ॥೧೯॥

ನಂತರ ನಿಶಿತವಾದ ನಾಲ್ಕು ಬಾಣಗಳಿಂದ ಆತನ ನಾಲ್ಕು ಕುದುರೆಗಳನ್ನು ಯಮಸದನಕ್ಕಟ್ಟಿದನು ರಥದ ಧ್ವಜವನ್ನು ನೆಲಕ್ಕೆ ಕಡವಿ ರಥವನ್ನು ಸಣ್ಣಸಣ್ಣ ಕಣಗಳಾಗಿ ತುಂಡರಿಸಿದನು ॥೨೦॥

ತನ್ನ ಧನಸ್ಸು ಮುರಿದು, ರಥವೂ ಭಗ್ನಗೊಂಡು ಕುದುರೆಗಳೂ ಸಾರಥಿಯೂ ಹತರಾಗಲು ಅಸಿಲೋಮನು ಶೂಲವನ್ನು ಹಿಡಿದು ಕುಮಾರಸ್ವಾಮಿಯನ್ನು ವಧಿಸಲು ವೇಗವಾಗಿ ಬಂದನು ॥೨೧॥

ಇಬ್ಬರು ಸೇನಾಧಿಪತಿಗಳೂ ಪದಾತಿಗಳಾಗಿ (ವಾಹನ ಏರದೇ) ತಮ್ಮ ಪಾದಾಘಾತದಿಂದ ಭೂಮಿಯನ್ನೇ ನಡುಗಿಸುತ್ತ ಪರಸ್ಪರ ಯುದ್ಧ ಮಾಡಿದರು ॥೨೨॥

ಆ ಯುದ್ಧವನ್ನು ನೋಡಿದ ದೇವಾಸುರರು ಬಹಳ ಆಶ್ಚರ್ಯದಿಂದ ಸಾಧು– ಸಾಧು ಎಂದು ಇಬ್ಬರನ್ನೂ ಹೊಗಳಿದರು ॥೨೩॥

ಅಸಿಲೋಮ್ನಾಽಥ ಶೂಲೇನ ವಿಭಿನ್ನೋ ಹೃದಿ ಷಣ್ಮುಖಃ ।
ಮೂರ್ಛಾಮವಾಪ್ಯ ಮಹತೀಂ ನಿಪಪಾತ ಮಹೀತಲೇ ॥೨೪॥

ಅಸ್ಮಿನ್ನಿಪತಿತೇ ವೀರೇ ಷಣ್ಮುಖೇ ಭಿನ್ನವಕ್ಷಸಿ ।
ಹಾಹಾಕಾರೋ ಮಹಾನಾಸೀತ್ಪ್ರಮಥಾನಾಂ ಸಮಂತತಃ ॥೨೫॥

ಅಸಿಲೋಮಾ ಜಗರ್ಜಾಽಜೌ ಜಿತಕಾಶೀ ಮಹೋತ್ಕಟಃ ।
ತಸ್ಮಿನ್ನೇವ ಕ್ಷಣೇ ಸ್ಕಂದ ಉತ್ತಸ್ಥೌ ಗತಮೂರ್ಛಿತಃ ॥೨೬॥

ಶತ್ರುಂ ಪುರಃ ಸಮಾಲೋಕ್ಯ ಗರ್ಜಂತಂ ಜಿತಕಾಶಿನಮ್ ।
ಗಣಾನಾಂ ಕ್ರಂದಿತಂ ಶ್ರುತ್ವಾ ಜಗಾಮಾಲ್ಪೀಯಸೀಂ ತ್ರಪಾಮ್ ॥೨೭॥

ಆಜುಹಾವ ತತಃ ಶತ್ರುಮಸಿಲೋಮಾನಮಗ್ನಿಭೂಃ ।
ಏಹಿ ಯುದ್ಧ್ಯ ಮಯಾ ಸಾರ್ಧಂ ಮೃತ್ಯುಸ್ತ್ವಾಂ ಪ್ರತ್ಯುಪಸ್ಥಿತಃ ॥೨೮॥

ಅಸಿಲೋಮಾ ಸಮಾಕರ್ಣ್ಯ ತದ್ವಾಕ್ಯಂ ಕ್ರೋಧಮೂರ್ಛಿತಃ ।
ಆವಿಧ್ಯ ಶೂಲಂ ತರಸಾ ಗುಹಂ ಹಂತುಮುಪಾದ್ರವತ್ ॥೨೯॥

ಅಪ್ರಾಪ್ತಮೇವ ತಚ್ಛೂಲಂ ಶಕ್ತ್ಯಾ ತ್ರೇಧಾಽಚ್ಛಿನದ್ಗುಹಃ ।
ತ್ರೋಟ್ಯಾ ತಾರ್ಕ್ಷ್ಯಃ ಸ್ವಯಾ ಕಾಕೋದರಂ ತ್ರೇಧಾಽಚ್ಛಿನದ್ಯಥಾ॥೩೦॥

ಛಿನ್ನಶೂಲಃ ಸಮುತ್ಕ್ಷಿಪ್ಯ ಶೈಲಂ ದೈತ್ಯಃ ಪ್ರತಾಪವಾನ್ ।
ಗುಹೇ ಚಿಕ್ಷೇಪ ರೋಷೇಣ ಹತೋಽಸೀತ್ಯಭ್ಯಭಾಷತ ॥೩೧॥

ತತಃ ಪ್ರಹಸ್ಯ ಗಾಂಗೇಯಃ ಶಕ್ತ್ಯಾ ಗಿರಿಮತಾಡಯತ್ ।
ಸ ಗಿರಿಃ ಶಕಲೀಭೂತಃ ಪಪಾತಾಜೌ ದಲನ್ ರಿಪೂನ್ ॥೩೨॥

ತಸ್ಮಿನ್ ಗಿರೌ ವಿದಲಿತೇ ಮುಷ್ಟಿಮುದ್ಯಮ್ಯ ದೈತ್ಯರಾಟ್ ।
ಅಭಿದುದ್ರಾವ ವೇಗೇನ ಕಾರ್ತಿಕೇಯಜಿಘಾಂಸಯಾ ॥೩೩॥

ತಮಭ್ಯಾಶಗತಂ ವೀಕ್ಷ್ಯ ಶಕ್ತಿಮಾವಿಧ್ಯ ಷಣ್ಮುಖಃ ।
ಚಿಕ್ಷೇಪ ಲಕ್ಷ್ಯೀಕೃತ್ಯೋರಸ್ತಸ್ಯ ದೈತ್ಯಚಮೂಪತೇಃ ॥೩೪॥

ಸಾ ವಿನಿರ್ಭಿದ್ಯ ತಸ್ಯೋರಃ ಪ್ರಾಣಾನಾದಾಯ ವೇಗತಃ ।
ಪುನಃ ಪ್ರತ್ಯಾಯಯೌ ಹಸ್ತೇ ಕಾರ್ತಿಕೇಯಸ್ಯ ತತ್ಕ್ಷಣಾತ್ ॥೩೫॥

ಮುಂದೆ ಅಸಿಲೋಮನು ಶೂಲವೊಂದನ್ನು ಸ್ಕಂದನ ಎದೆಗೆ ನೆಟ್ಟನು ಅದರ ಭೀಕರ ಆಘಾತಕ್ಕೊಳಗಾದ ಕುಮಾರನು ಮೂರ್ಛೆ ಹೊಂದಿ ನೆಲಕ್ಕುರುಳಿದನು. ||೨೪||

ಪ್ರತಾಪಿಯಾದ ಈ ಸ್ಕಂದನು ಶೂಲಾಘಾತದಿಂದ ಧರೆಗುರುಳಿದೊಡನೆ ಶಿವಗಣ ಗಳಲ್ಲಿ ದೊಡ್ಡದಾದ ಹಾಹಾಕಾರವೆದ್ದಿತು ||೨೫||

ಗೆಲುವಿನಿಂದ ಉತ್ಸಾಹಿತನಾದ ಅಸಿಲೋಮನು ಯುದ್ಧದಲ್ಲಿ ಸಿಂಹನಾದವನ್ನು ಮಾಡಿದನು. ಅದೇ ಕ್ಷಣದಲ್ಲಿ ಮೂರ್ಛೆಯನ್ನು ಕಳೆದುಕೊಂಡು ಷಣ್ಮುಖನು ಎದ್ದು ಕುಳಿತನು. ||೨೬||

ಎದುರಿಗೆ ಸಿಂಹನಾದ ಮಾಡುತ್ತಿದ್ದ ಅಸಿಲೋಮನನ್ನು ನೋಡಿ ಮತ್ತು ಗಣಗಳ ಹಾಹಾಕಾರವನ್ನು ಕೇಳಿ ಸ್ವಲ್ಪ ಲಜ್ಜಿತನಾದನು. ||೨೭||

ಕುಮಾರಸ್ವಾಮಿಯು ಪುನಃ ಯುದ್ಧ ಸನ್ನದ್ಧನಾಗಿ ಅಸಿಲೋಮನನ್ನು ಕರೆದನು. ದುಷ್ಟನೇ! ಬಾ. ನನ್ನೊಂದಿಗೆ ಹೋರಾಡು. ನಿನ್ನೆದುರಿಗೆ ಮೃತ್ಯುವು ನಿಂತಿದೆ ಎಂದನು ||೨೮||

ಸ್ಕಂದನ ಈ ಮಾತನ್ನು ಕೇಳಿ ಕ್ರುದ್ಧನಾದ ಅಸಿಲೋಮನು ಒಡನೆಯೇ ಶೂಲವನ್ನು ಹಿಡಿದು ಕುಮಾರಸ್ವಾಮಿಯನ್ನು ವಧಿಸಿಯೇ ಬಿಡಬೇಕಂದು ಅದನ್ನು ಒಗೆದು ಮುನ್ನುಗ್ಗಿದನು. ||೨೯||

ತೀಕ್ಷ್ಣವಾದ ತನ್ನ ಚಂಚುವಿನಿಂದ ಗರುಡನು ಸರ್ಪವನ್ನು ಮೂರು ತುಂಡು ಮಾಡಿದಂತೆ ಸ್ಕಂದನೂ ಸಹ ದೈತ್ಯನು ಒಗೆದ ಶೂಲವು ತನ್ನನ್ನು ಸಮೀಪಿಸುವದಕ್ಕೆ ಮೊದಲೇ ಮೂರು ತುಂಡು ಮಾಡಿದನು. ||೩೦||

ತನ್ನ ಶೂಲವು ಭಗ್ನಗೊಂಡುದನ್ನು ಕಂಡ ಶೂರನಾದ ಅಸಿಲೋಮನು ಕೋಪದಿಂದ 'ನೀನು ಸತ್ತೆ' ಎನ್ನುತ್ತ ಪರ್ವತವೊಂದನ್ನು ಎತ್ತಿ ಸ್ಕಂದನ ಮೇಲೆ ಒಗೆದನು ||೩೧||

ಅದನ್ನು ನೋಡಿ ಸ್ಕಂದನು ನಕ್ಕು ತನ್ನ ಶಕ್ತಿಯಿಂದ ಆ ಪರ್ವತದ ಮೇಲೆ ಪ್ರಹಾರ ಮಾಡಿದನು ಆ ಪರ್ವತವು ತುಂಡು ತುಂಡಾಗಿ ರಣರಂಗದಲ್ಲಿ ಬಿದ್ದು ಶತ್ರು ಸೈನಿಕರನ್ನೇ ಕೊಂದಿತು. ||೩೨||

ಆ ಪರ್ವತವು ತುಂಡಾಗಿ ಬೀಳಲು ಅಸಿಲೋಮನು ಕಾರ್ತಿಕೇಯನನ್ನು ಕೊಲ್ಲಲೇಬೇಕೆಂದು ಕೈಯನ್ನು ಮುಷ್ಟಿಕಟ್ಟಿ ವೇಗವಾಗಿ ಓಡಿಬಂದನು ||೩೩||

ತನ್ನ ಸಮೀಪಕ್ಕೆ ಓಡಿಬಂದ ದೈತ್ಯನನ್ನು ಅವಲೋಕಿಸಿ ಸ್ಕಂದನು ತನ್ನ ಶಕ್ತ್ಯಾಯುಧವನ್ನೆತ್ತಿ ದೈತ್ಯ ಸೇನಾಪತಿಯ ಎದೆಯನ್ನೇ ಗುರಿಯಿಟ್ಟು ಬೀಸಿದನು ಆ ಶಕ್ತಿಯು ವೇಗವಾಗಿ ಧಾವಿಸಿ ಆ ಅಸುರನ ಎದೆಯನ್ನು ಸೀಳಿ ಆತನ ಪ್ರಾಣವನ್ನು ತೆಗೆದು ಕೂಡಲೇ ಪುನಃ ಕಾರ್ತಿಕೇಯನ ಹಸ್ತವನ್ನೇ ಸೇರಿತು. ||೩೪-೩೫||

ನೇನಾನ್ಯಾ ನಿಹತೇ ತಸ್ಮಿನ್ನಸುರಾಣಾಂ ಬಲಾಧಿಕೇ ।
ಆಸುರೀ ಕಾಂದಿಶೀ ನೇನಾ ಬಭೂವಾಗತಸಾಧ್ವಸಾ ॥೩೬॥

ಅಭಿದ್ರುತಾಂಯಾಮಾಸುರ್ಯಾಂ ನೇನಾಯಾಂ ದೈತ್ಯಪುಂಗವಾಃ ।
ಅಭಿಸಸ್ರೂ ರುಷಾऽऽವಿಷ್ಟಾಃ ಪ್ರತಾಡ್ಯ ರಣದುಂದುಭೀನ್ ॥೩೭॥

ವಿದ್ಯುನ್ಮಾಲೀ ಮಹಾದೇವಂ ಹೇಮಮಾಲೀ ಬಿಡೌಜಸಮ್ ।
ಸಮಸಜ್ಜತ ರೋಷೇಣ ಮೇಘಮಾಲೀ ಹರಿಂ ಪ್ರತಿ ॥೩೮॥

ಅನ್ಯೇ ಸಪ್ತದಿಶಾಂಪಾಲಾಃ ಸ್ವಸ್ವಸೈನ್ಯೈಃ ಪರೀವೃತಾಃ ।
ಅಯಃಶಿರೋಮುಖ್ಯೈರ್ದೈತ್ಯೈಃ ಸಮಸಜ್ಜಂತ ಸಂಯುಗೇ ॥೩೯॥

ತದ್ಯುದ್ಧಮಭವದ್ಘೋರಂ ತುಮುಲಂ ರೋಮಹರ್ಷಣಮ್ ।
ಪ್ರತ್ಯೇಕಶೋ ವರ್ಣಯಿತುಮಶಕ್ಯಂ ಮುನಿಸತ್ತಮಾಃ ॥೪೦॥

ಪ್ರಾಧಾನ್ಯೇನ ಪ್ರವಕ್ಷ್ಯಾಮಿ ಯುದ್ಧಂ ಶೃಣುತ ತಾಪಸಾಃ ।
ವಿದ್ಯುನ್ಮಾಲೀ ಮಹಾದೇವಂ ನಿಚಖಾನ ಶರೈಃ ಶಿತೈಃ ॥೪೧॥

ಮಹಾದೇವೋऽಪಿ ವಿವ್ಯಾಧ ವಿದ್ಯುನ್ಮಾಲಿನಮಾಹವೇ ।
ತಾವುಭಾವತಿಸಂರಬ್ಧೌ ಕೃತಪ್ರತಿಕೃತೈಷಿಣೌ ॥೪೨॥

ಯುಯುಧಾತೇ ಮಹಾಸ್ತ್ರೈಶ್ಚ ವಿದ್ಯುನ್ಮಾಲಿಮಹೇಶ್ವರೌ ।
ಕ್ರೋಧಸಂರಕ್ತನಯನೌ ವೀಕ್ಷಂತೌ ವೃಷಭಾವಿವ ॥೪೩॥

ಪರ್ಜನ್ಯಂ ಪಾರ್ವತಂ ಸೌರಮಾಗ್ನೇಯಂ ಪರ್ವತೇ ತಥಾ ।
ವಾಯವ್ಯಂ ಭಾರ್ಗವಂ ರೌದ್ರಂ ಬ್ರಾಹ್ಮಂ ಸಾರ್ವಂ ಚ ಮೋಹನಮ್॥೪೪॥

ಇತ್ಯಾದೀನಿ ಮಹಾಸ್ತ್ರಾಣಿ ದೈತ್ಯಃ ಪ್ರಾಯುಂಕ್ತ ಶಂಕರೇ ।
ಶಮಯಾಮಾಸ ತಾನ್ಯಸ್ತ್ರಾಣ್ಯಸ್ತ್ರೈರೇವ ತ್ರಿಲೋಚನಃ ॥೪೫॥

ಏವಂ ಬಿಡೌಜಸಾ ಸಾರ್ಧಂ ಹೇಮಮಾಲೀ ಯುಯೋಧ ಹ ।
ನಾನಾವಿಧೈರಸ್ತ್ರಪೂಗೈಸ್ತೈರಸ್ತ್ರೈಸ್ತೇನ ದಾನವಃ ॥೪೬॥

ಮೇಘಮಾಲೀ ಘನಶ್ಯಾಮಂ ವಿವ್ಯಾಧ ನಿಶಿತೈಃ ಶರೈಃ ।
ಗರುತ್ಮಂತಂ ಚ ವಿವ್ಯಾಧ ಹಸನ್ನಿವ ಮಹಾಸುರಃ ॥೪೭॥

ಪ್ರಬಲನಾದ ಅಸಿಲೋಮನು ಕಾರ್ತಿಕೇಯನಿಂದ ಹತನಾಗುತ್ತಲೇ ಅಸುರರ ಸೇನೆಯು ಮಹಾಭಯದಿಂದ ದಿಕ್ಕಾಪಾಲಾಗಿ ಓಡಿಹೋಯಿತು ।।೩೬।।

ದಿಕ್ಕುದೆಸೆಯಿಲ್ಲದೆ ಓಡಿದ ದಾನವ ಸೇನೆಯ ಮಧ್ಯದಲ್ಲಿದ್ದ ದೈತ್ಯ ಪ್ರಮುಖರು ಸಿಟ್ಟಿಗೆದ್ದು ರಣದುಂದುಭಿಗಳನ್ನು ಮೊಳಗಿಸಿ ಯುದ್ಧಕ್ಕೆ ಮುನ್ನಡೆದರು ।।೩೭।।

ವಿದ್ಯುನ್ಮಾಲಿಯು ಶಂಕರನನ್ನು, ಹೇಮಮಾಲಿಯು ದೇವೇಂದ್ರನನ್ನು, ಮೇಘಮಾಲಿಯು ಮಹಾವಿಷ್ಣುವನ್ನು ಎದುರಿಸಲು ಸಿದ್ಧರಾದರು ।।೩೮।।

ಇನ್ನು ತಮ್ಮ ತಮ್ಮ ಸೈನ್ಯಗಳೊಂದಿಗೆ ರಣಾಂಗಣದಲ್ಲಿ ಸಿದ್ಧರಾಗಿದ್ದ ಉಳಿದ ಸಪ್ತಲೋಕಪಾಲರು ಅಯಃಶಿರ ಮೊದಲಾದ ದಾನವರೊಡನೆ ಕಾದಲು ಸಜ್ಜು ಗೊಂಡರು ।।೩೯।।

ಮುನಿಗಳೇ! ಘೋರವಾದ ಆ ತುಮುಲ ಯುದ್ಧವು ರೋಮಾಂಚಕಾರಿಯಾಗಿ ಪ್ರಾರಂಭವಾಯಿತು ಆ ಯುದ್ಧ ವೈಭವವನ್ನು ಪ್ರತ್ಯೇಕವಾಗಿ ವರ್ಣನೆ ಮಾಡಲು ಸಾಧ್ಯವಾಗುವುದಿಲ್ಲ ।।೪೦।।

ಮುನಿಗಳೇ! ಆದ್ದರಿಂದ ಪ್ರಮುಖ ಯುದ್ಧ ವರ್ಣನೆಯನ್ನು ಮಾತ್ರ ಹೇಳುವೆ ಕೇಳಿರಿ ವಿದ್ಯುನ್ಮಾಲಿಯು ಹರಿತವಾದ ಬಾಣಗಳನ್ನು ಪರಶಿವನ ಮೇಲೆ ಪ್ರಯೋಗಿಸಿದನು ।।೪೧।।

ಭಗವಾನ್ ಶಂಕರನೂ ಸಹ ಅಸಂಖ್ಯ ಬಾಣಗಳಿಂದ ವಿದ್ಯುನ್ಮಾಲಿಯನ್ನು ಘಾಸಿಪಡಿಸಿದನು. ಅವರಿಬ್ಬರೂ ಪರಸ್ಪರ ಬಾಣಗಳನ್ನು ಪ್ರಯೋಗಿಸಿ ಪ್ರತೀಕಾರ ಮಾಡುತ್ತ ಬೀಕರ ಕಾಳಗವನ್ನಾಡಿದರು ।।೪೨।।

ವಿವಿಧ ಮಹಾಸ್ತ್ರಗಳಿಂದ ವಿದ್ಯುನ್ಮಾಲಿ ಮಹಾದೇವರು ಕಾದಾಡಿದರು ಕೋಪ ದಿಂದ ಅವರ ಕಣ್ಣುಗಳು ಕೆಂಪಡರಿದ್ದವು. ಅವರಿಬ್ಬರೂ ಸೊಕ್ಕಿದ ವೃಷಭಗಳಂತೆ ಪರಸ್ಪರ ನೋಡುತ್ತಿದ್ದರು ।।೪೩।।

ಪರ್ಜನ್ಯಾಸ್ತ್ರ – ಪರ್ವತಾಸ್ತ್ರ – ಸೌರಾಸ್ತ್ರ – ಆಗ್ನೇಯಾಸ್ತ್ರ – ವಾಯವ್ಯಾಸ್ತ್ರ – ಭಾರ್ಗವಾಸ್ತ್ರ – ರೌದ್ರಾಸ್ತ್ರ – ಬ್ರಹ್ಮಾಸ್ತ್ರ – ಸರ್ಪಾಸ್ತ್ರ – ಸಮ್ಮೋಹನಾಸ್ತ್ರ ಇವೇ ಮೊದಲಾದ ಮಹಾಸ್ತ್ರಗಳನ್ನು ವಿದ್ಯುನ್ಮಾಲಿಯು ಭಗವಾನ್ ಪರಮೇಶ್ವರನ ಮೇಲೆ ಪ್ರಯೋಗಿಸಿದನು ಪರಶಿವನೂ ಸಹ ಬೇರೆ ಅಸ್ತ್ರಗಳಿಂದಲೇ ಆ ಮಹಾಸ್ತ್ರಗಳನ್ನು ನಾಶಗೊಳಿಸಿದನು. ।।೪೪–೪೫।।

ಇದೇ ರೀತಿ ಹೇಮಮಾಲಿಯೂ ಸಹ ದೇವೇಂದ್ರನೊಂದಿಗೆ ಯುದ್ಧ ಆರಂಭಿಸಿದನು. ದೇವೇಂದ್ರನನ್ನು ವಿವಿಧಾಸ್ತ್ರಗಳಿಂದ ಪೀಡಿಸಿದನು. ದೇವೇಂದ್ರನೂ ತಕ್ಕ ಪ್ರತೀಕಾರವೆಸಗಿದನು. ಇತ್ತ ಮೇಘಮಾಲಿಯು ನಸುನಗುತ್ತ ಹರಿತವಾದ ಬಾಣ ಗಳಿಂದ ಮಹಾವಿಷ್ಣುವನ್ನು ಹೊಡೆದು ಆತನ ವಾಹನ ಗರುಡನನ್ನೂ ಸಹ ತೀವ್ರ ಘಾಸಿಗೊಳಿಸಿದನು ।।೪೬–೪೭।।

ವನಮಾಲ್ಯಥ ವಿವ್ಯಾಧ ಮೇಘಮಾಲಿನಮಾಶುಗೈಃ ।
ಹಸನ್ನಿವ ಬಭಾಷೇ ತಂ ಮರ್ತುಕಾಮೋಽಸಿ ರೇಽಸುರ ॥೪೮॥

ಸ ತಮೂಚೇ ತ್ವಮಸ್ಮಾಕಮಸುರಾಣಾಂ ಕುಲಾಂತಕಃ ।
ತ್ವಾಂ ನಿಹತ್ಯಾತ್ರ ಸಮರೇ ತೇಷಾಂ ನಾಶಂ ಕರೋಮ್ಯಹಮ್ ॥೪೯॥

ಏವಮಾಕ್ಷಿಪ್ಯ ದೈತ್ಯೇಂದ್ರೋ ಗದಾಮಾವಿಧ್ಯ ವೇಗತಃ ।
ತಾಡಯಾಮಾಸ ರೋಷೇಣ ವಕ್ಷೋದೇಶೇ ಗದಾಧರಮ್ ॥೫೦॥

ಸಾ ಗದಾ ಗದಿನಸ್ತಸ್ಯ ವಕ್ಷಃ ಪ್ರಾಪ್ಯ ವ್ಯಶೀರ್ಯತ ।
ವಿಕಿರಂತೀ ವಿಸ್ಫುಲಿಂಗಾನ್ನಿಪಪಾತ ಮಹೀತಲೇ ॥೫೧॥

ಗದಾಂ ವಿಶೀರ್ಣಾಮಾಲೋಕ್ಯ ದೈತ್ಯಃ ಪ್ರಹರತಾಂ ವರಃ ।
ತೋಮರೈಸ್ತಾಡಯಾಮಾಸ ಯುಗಪತ್ತಾರ್ಕ್ಷ್ಯಮಾಧವೌ ॥೫೨॥

ವೈನತೇಯಸ್ತತಃ ಕ್ರೋಧಾದುಡ್ಡೀಯ ತರಸಾ ಧ್ರುವಮ್ ।
ದಾರಯಾಮಾಸ ಹೃದಯೇ ನಖತುಂಡಪ್ರಹಾರತಃ ॥೫೩॥

ರಥಾದಾಕ್ಷಿಪ್ಯ ತಂ ಭೂಮೌ ಪಾತಯಿತ್ವಾ ಸ ಪಕ್ಷಿರಾಟ್ ।
ಪಕ್ಷಾಭ್ಯಾಂ ವಜ್ರಕಲ್ಪಾಭ್ಯಾಂ ಭೂಯೋ ಭೂಮ್ಯಾಮತಾಡಯತ್॥೫೪॥

ಮೂರ್ಛಾಗತಂ ತಮುತ್ಕ್ಷಿಪ್ಯ ಪ್ರಾಕ್ಷಿಪತ್ ಸೈನ್ಯಮಧ್ಯತಃ ।
ತತ್ಸೈನ್ಯಂ ಪ್ರಾದ್ರವದ್ಭೀತ್ಯಾ ತಂ ನಿರೀಕ್ಷ್ಯ ತಥಾಽಽಗತಮ್ ॥೫೫॥

ತಸ್ಮಿನ್ನೇವಾಂತರೇ ವಿಷ್ಣುರ್ಹೇಮಮಾಲಿನಮಾಹವೇ ।
ಚಕಾರ ವಿರಥಂ ಸಂಖ್ಯೇ ಸೋಽಪಚಕ್ರಾಮ ದೈತ್ಯರಾಟ್ ॥೫೬॥

ಮಹಾದೇವೋಽಪಿ ವಿಜ್ಞಾಯ ತೇಷಾಂ ಸ್ಮ ರಣಭೂಮಿಕಾಮ್ ।
ತಂ ದೈತ್ಯಂ ಪಾತಯಾಮಾಸ ಶೂಲೇನಾಽಽತಾಡ್ಯ ವಕ್ಷಸಿ ॥೫೭॥

ಏತಸ್ಮಿನ್ನಂತರೇ ಸೇನಾಮಾಸುರೀಂ ಭೃಶಮಾಕುಲಾಮ್ ।
ದಿಕ್ಪಾಲಾಃ ಪ್ರಮಥೈಃ ಸಾರ್ಧಂ ಮಮರ್ದುರ್ಜಿತಕಾಶಿನಃ ॥ ೫೮॥

ಅಕ್ಷೌಹಿಣೀನಾಮಷ್ಟಾನಾಂ ವಿನಾಶಃ ಸಮಭೂತ್ತದಾ ।
ವಿಸಸ್ರುಃ ಶತಶೋ ನದ್ಯಃ ಸದ್ಯಃ ಶೋಣಿತಸಂಭವಾಃ ॥೫೯॥

ಪ್ರತಿಯಾಗಿ ಮಹಾವಿಷ್ಣುವು ಸಹ ನಿಶಿತ ಬಾಣಗಳಿಂದ ಮೇಘಮಾಲಿಯನ್ನು ಹೊಡೆದು ನಸುನಗುತ್ತ "ದೈತ್ಯನೇ! ನೀನು ಸಾಯಲಿಚ್ಛಿಸಿರುವಿಯೇನು?" ಎಂದು ಕೇಳಿದನು ||೪೮||

ಆಗ ಮೇಘಮಾಲಿಯು " ನೀನು ಅನೇಕ ದೈತ್ಯರನ್ನು ನಾಶಮಾಡಿರಬಹುದು ಆದರೆ ಈಗ ನಾನು ನಿನ್ನನ್ನು ಕೊಂದು ನಂತರ ಉಳಿದವರನ್ನು ನಾಶಗೊಳಿಸುವೆನು" ಎಂದು ಹೇಳಿದನು. ||೪೯||

ಹೀಗೆ ಹೇಳಿದ ಮೇಘಮಾಲಿಯು ತನ್ನ ಗದೆಯನ್ನೆತ್ತಿ ರೋಷಾವೇಶದಿಂದ ಮಹಾವಿಷ್ಣುವಿನ ವಕ್ಷಃಸ್ಥಲಕ್ಕೆ ರಭಸವಾಗಿ ಬೀಸಿದನು ||೫೦||

ಆ ಗದೆಯು ಅಷ್ಟೇ ವೇಗವಾಗಿ ಹರಿಯ ವಕ್ಷಃಸ್ಥಲವನ್ನಪ್ಪಳಿಸಿ ಬೆಂಕಿ ಕಿಡಿಗಳನ್ನು ಉಗುಳುತ್ತ ತುಂಡುತುಂಡಾಗಿ ಭುವಿಯಲ್ಲಿ ಬಿದ್ದಿತು. ||೫೧||

ಪ್ರಹರಿಸುವದರಲ್ಲಿ ಚತುರನಾದ ಮೇಘಮಾಲಿಯು ತನ್ನ ಗದೆ ಭಗ್ನವಾದುದನ್ನು ಕಂಡು ಶ್ರೀಹರಿಯನ್ನೂ, ಆತನ ವಾಹನ ಗರುಡನನ್ನೂ ಒಮ್ಮೆಗೇ ತೋಮರಗಳಿಂದ ಹೊಡೆದನು ||೫೨||

ಕ್ರುದ್ಧನಾದ ವೈನತೆಯನು ಹೆಚ್ಚಿನ ವೇಗದಿಂದ ಹಾರಿ ತೀಕ್ಷ್ಣವಾದ ತನ್ನ ಉಗುರು – ಚುಂಚಗಳಿಂದ ಆ ದೈತ್ಯನ ಎದೆಯನ್ನು ಗೀರಿದನು ||೫೩||

ಪಕ್ಷಿರಾಜನಾದ ಗರುಡನು ಆತನನ್ನು ಅಷ್ಟಕ್ಕೆ ಬಿಡದೆ ರಥದಿಂದ ಹೊರ ಒಗೆದು ಭೂಮಿಯಲ್ಲಿ ಕೆಡವಿ ವಜ್ರಾಯುಧದಂತಿದ್ದ ತನ್ನ ರೆಕ್ಕೆಗಳಿಂದ ಮತ್ತ ಮತ್ತೆ ಹೊಡೆದನು ||೫೪||

ಮೂರ್ಛೆಯನ್ನು ಹೊಂದಿದ ಮೇಘಮಾಲಿಯನ್ನು ಗರುಡನು ಸೈನ್ಯ ಮಧ್ಯ ದಿಂದ ದೂರ ಎಸೆದನು ಅದನ್ನು ನೋಡಿ ಅವನ ಸೈನ್ಯವು ಭೀತಿಯಿಂದ ಪಲಾಯನ ಮಾಡಿತು ||೫೫||

ಅಷ್ಟರಲ್ಲಿ ಮಹಾವಿಷ್ಣುವು ರಣಾಂಗಣದಲ್ಲಿದ್ದ ಹೇಮಮಾಲಿಯನ್ನು ಎದುರಿಸಿ ರಥವಿಲ್ಲದಂತೆ ಮಾಡಿದನು. ಆಗ ದೈತ್ಯನು ಹರಿಯನ್ನು ಎದುರಿಸಲು ಮತ್ತೆ ಮುಂದೆ ಬಂದನು ||೫೬||

ಮಹಾದೇವನು ದೈತ್ಯರ ರಣನೀತಿಯನ್ನು ಅರಿತುಕೊಂಡು ಹೇಮಮಾಲಿಯ ಎದೆಗೆ ತನ್ನ ಶೂಲವನ್ನು ಪ್ರಯೋಗಿಸಿ ಆತನನ್ನು ಕೆಡವಿದನು. ||೫೭||

ಈ ಸಂದರ್ಭದಲ್ಲಿ ಕಂಗೆಟ್ಟ ದೈತ್ಯಸೈನ್ಯವನ್ನು ಪ್ರಮಥಗಣಗಳಿಂದ ಕೂಡಿ ಜಯದಿಂದ ಬೀಗುತ್ತಿರುವ ದಿಕ್ಪಾಲಕರು ಸಂಹರಿಸಿದರು. ||೫೮||

ಹೀಗೆ ಎಂಟು ಅಕ್ಷೌಹಿಣೀ ಸೈನ್ಯವು ನಾಶ ಹೊಂದಿತು. ಇದರಿಂದ ನೂರಾರು ರಕ್ತದ ನದಿಗಳು ಹರಿದವು. ||೫೯||

ದ್ವಾಭ್ಯಾಮಕ್ಷೌಹಿಣೀಭ್ಯಾಂ ತೇ ವಿದ್ಯುನ್ಮಾಲಿಮುಖಾಸ್ತದಾ ।
ಆಚಕ್ರಮುರ್ವಿಷ್ಣುಪದಂ ಮಾಯಾಮಾಸ್ಥಾಯ ಮಾಯಿನಃ ॥೬೦॥

ಸ್ಥಿತ್ವಾ ವಿಯತಿ ತೇ ದೈತ್ಯಾ ಗರ್ಜಂತೋ ಜಲದಾ ಇವ ।
ವವರ್ಷುಃ ಕೀಕಸೈರಸ್ತ್ರೈರಶ್ಮಭಿಶ್ಚಾಪಿ ಭೂರುಹೈಃ ॥೬೧॥

ತತಃ ಸಾ ದೇವಸೇನಾಪಿ ದಿವಮಾಚಕ್ರಮೇ ಜಯಾತ್ ।
ನಿಘ್ನಂತೀ ದಾನವೀಂ ಸೇನಾಂ ಮಹಾದೇವೇನ ಚೋದಿತಾ ॥೬೨॥

ಏವಂ ಯುದ್ಧಂ ಪ್ರಕುರ್ವಾಣಾ ಅಸುರಾ ಅಮರೈಃ ಸಹ ।
ಆಕೃಷ್ಟಾಃ ಪೂರ್ವ ಸಂಸ್ಕಾರೈರ್ಜಗ್ಮುಃ ಪ್ರೀತ್ಯಾ ಕ್ರತುಂ ಪ್ರತಿ ॥೬೩॥

ತೇ ಸಂಪ್ರಾಪ್ಯ ಕ್ರತುಪುರಂ ವಿದ್ಯುನ್ಮಾಲ್ಯಾದಯಸ್ತ್ರಯಃ ।
ಜಾತಿಸ್ಮರತ್ವಂ ಸಂಪ್ರಾಪ್ತಾಃ ಪಶ್ಚಾತ್ತಾಪಂ ಪ್ರಪೇದಿರೇ ॥೬೪॥

ವಿದ್ಯುನ್ಮಾಲೀ ಮೇಘಮಾಲೀ ಹೇಮಮಾಲೀತಿ ತೇ ತ್ರಯಃ ।
ವಿಶಸ್ತ್ರಾ ವಿರಥಾ ಭೂತ್ವಾ ಶಂಕರಂ ಶರಣಂ ಯಯುಃ ॥೬೫॥

**ದೈತ್ಯಾ ಊಚುಃ –**

ಪ್ರಯತ್ನಾತ್ ಪಾಹಿ ನಃ ಶಂಭೋ ದಯಾಲುತ್ವೇನ, ಸಾಗಸಃ ।
ಸಂಪ್ರಾಪ್ತಾನಾಸುರಂ ಭಾವಂ ಪೂರ್ವೋಪಾತ್ತೇನ ಕರ್ಮಣಾ ॥೬೬॥

**ಮಹಾದೇವ ಉವಾಚ –**

ಕಿಮರ್ಥಂ ಶರಣಂ ಪ್ರಾಪ್ತಾ ಬಲವಂತೋ ದುರಾಸದಾಃ ।
ಅಶ್ಲಾಘ್ಯಮೇತಚ್ಛೂರಾಣಾಂ ಯಚ್ಛತ್ರುಂ ಪ್ರತಿ ಯಾಚನಮ್ ॥೬೭॥

ವಿನಾಶ್ಯಾಕ್ಷೌಹಿಣೀರಷ್ಟೌ ನಿಜಪ್ರಾಣಪರೀಪ್ಸಯಾ ।
ಯದ್ಯೂಯಂ ಶರಣಂ ಪ್ರಾಪ್ತಾ ನೈಷ ಧರ್ಮಃ ಸತಾಂ ಮತಃ ॥೬೮॥

**ದೈತ್ಯಾ ಊಚುಃ –**

ವಯಂ ಹಿ ಬ್ರಾಹ್ಮಣಾಃ ಶಂಭೋ ಪೂರ್ವಸ್ಮಿನ್ ಜನ್ಮನಿ ತ್ರಯಃ ।
ಸೋದರ್ಯಾ ವಿಷ್ಣುಭಕ್ತಾಶ್ಚ ಶಿವಪ್ರದ್ವೇಷಿಣಃ ಸದಾ ॥೬೯॥

ಅಸ್ಮಿನ್ನೇವ ಮಹಾಕ್ಷೇತ್ರೇ ನ್ಯವಸಾಮ ಪುರಾ ವಯಮ್ ।
ಅದ್ರಾಕ್ಷ್ಮ ನ ಕದಾಽಪೀಹ ತ್ರಿಕೂಟೇಶ್ವರಮಾಗ್ರಹಾತ್ ॥೭೦॥

ತೇನ ಪಾಪೇನ ಸಂಪ್ರಾಪ್ತಾ ದಾರುಣಾಂ ಯೋನಿಮಾಸುರೀಮ್ ।
ಜಾತಿಸ್ಮೃತಿಂ ಚ ಸಂಪ್ರಾಪ್ತಾ ವಿಷ್ಣುಭಕ್ತಿಪ್ರಭಾವತಃ ॥೭೧॥

ಆಗ ವಿದ್ಯುನ್ಮಾಲಿಯೇ ಮೊದಲಾದ ದಾನವರು ಉಳಿದ ತಮ್ಮ ಎರಡು ಅಕ್ಷೋಹಿಣಿ ಸೇನೆಯೊಂದಿಗೆ ಮಾಯೆಯನ್ನವಲಂಬಿಸಿ ಗಗನವನ್ನಾಕ್ರಮಿಸಿದರು ॥೬೦॥

ಗಗನದಲ್ಲಿ ನಿಂತ ಆ ದಾನವರು ಮೇಘಗಳಂತೆ ಗರ್ಜಿಸುತ್ತ ಎಲುಬುಗಳನ್ನೂ, ದೊಡ್ಡ ದೊಡ್ಡ ಬಂಡೆಗಳನ್ನು ಹಾಗೂ ಮರಗಳನ್ನು, ಶಸ್ತ್ರಗಳನ್ನೂ ಸತತ ಸುರಿಸಲಾರಂಭಿಸಿದರು ॥೬೧॥

ಆಗ ಇದಕ್ಕೆ ಪ್ರತಿಯುದ್ಧವನ್ನು ಮಾಡಿ ಜಯಗಳಿಸಿದ ದೇವಸೇನೆಯು ಶಿವನ ಪ್ರೇರಣೆಯಂತೆ ಸ್ವರ್ಗಕ್ಕೆ ಮರಳಿತು. ॥೬೨॥

ಹೀಗೆ ದೇವತೆಗಳೊಂದಿಗೆ ಯುದ್ಧವಾಡಿದ ದಾನವರು ತಮ್ಮ ಹಿಂದಣ ಜನ್ಮದ ಸಂಸ್ಕಾರಗಳಿಂದ ಆಕರ್ಷಿತರಾಗಿ ಕ್ರತುಪುರಕ್ಕೆ ಬಂದರು. ॥೬೩॥

ವಿದ್ಯುನ್ಮಾಲಿಯೇ ಮೊದಲಾದ ಆ ಮೂವರು ದಾನವರು ಕ್ರತುಪುರಕ್ಕಾಗಮಿಸಿ ತಮ್ಮ ಪೂರ್ವಜನ್ಮದ ಸ್ಮರಣೆ ಪಡೆದು ಪಶ್ಚಾತ್ತಾಪಪಟ್ಟರು ॥೬೪॥

'ವಿದ್ಯುನ್ಮಾಲಿ–ಮೇಘಮಾಲಿ–ಹೇಮಮಾಲಿ' ಮೂವರು ತಮ್ಮ ರಥಗಳಿಂದ ಕೆಳಗಿಳಿದು ಶಸ್ತ್ರಾಸ್ತ್ರಗಳನ್ನು ತ್ಯಜಿಸಿ ಭಗವಾನ್ ಶ್ರೀಶಂಕರನಿಗೆ ಶರಣುಬಂದರು ॥೬೫॥

**ದೈತ್ಯರು ಹೇಳಿದರು –**

ಪ್ರಭು ಶಂಕರ! ಮಹಾಪರಾದವೆಸಗಿದ ನಮ್ಮನ್ನು ದಯತೋರಿ ರಕ್ಷಿಸು ಪೂರ್ವ ಕೃತಕರ್ಮಾನುಸಾರ ನಾವೀಗ ದಾನವರಾಗಿ ಜನಿಸಿದ್ದೇವೆ ॥೬೬॥

**ಪರಮೇಶ್ವರನು ಹೇಳಿದನು –**

ಮಹಾಬಲಶಾಲಿಗಳೂ, ದುರ್ಜೇಯರೂ ಆದ ನೀವೇಕೆ ಶರಣು ಬಂದಿರಿ? ಶತ್ರುವಿನಲ್ಲಿ ಯಾಚಿಸುವುದು ಮಹಾಶೂರರಾದ ನಿಮಗೇ ತರವಲ್ಲ ॥೬೭॥

ಎಂಟು ಅಕ್ಷೋಹಿಣೀ ಸೇನೆಯನ್ನು ಬಲಿಕೊಟ್ಟು ಜೀವವುಳಿಸಿಕೊಳ್ಳುವದಕ್ಕಾಗಿ ನೀವು ಶರಣು ಬಂದದ್ದು ಸರಿಯಲ್ಲ ಇದನ್ನು ಸಜ್ಜನರು ಧರ್ಮವೆಂದು ಹೇಳುವುದಿಲ್ಲ ॥೬೮॥

**ದೈತ್ಯರು ಹೇಳಿದರು –**

ಪ್ರಭೋ ಶಂಕರ! ನಾವು ಹಿಂದಿನ ಜನ್ಮದಲ್ಲಿ ವಿಪ್ರರಾಗಿದ್ದೆವು ಸೋದರರಾಗಿದ್ದ ನಾವು ಮೂವರೂ ವಿಷ್ಣು ಭಕ್ತರಾಗಿ ಸರ್ವದಾ ಶಿವನನ್ನು ದ್ವೇಷಿಸುತ್ತ ಪಾವನವಾದ ಈ ಕ್ರತುಪುರ ಕ್ಷೇತ್ರದಲ್ಲಿಯೇ ವಾಸವಾಗಿದ್ದೆವು ಇಲ್ಲಿದ್ದ ನಾವು ಹಟದಿಂದ ಒಮ್ಮೆಯೂ ಸಹ ತ್ರಿಕೂಟೇಶ್ವರನನ್ನು ದರ್ಶಿಸಲಿಲ್ಲ ॥೬೯–೭೦॥

ಆ ಪಾಪದಿಂದಾಗಿ ನಾವೀಗ ದಾರುಣವಾದ ದೈತ್ಯಜನ್ಮವನ್ನು ಹೊಂದಿದ್ದೇವೆ. ಆದರೆ ಹಿಂದಣ ಜನ್ಮದ ನಮ್ಮ ವಿಷ್ಣು ಭಕ್ತಿ ಪ್ರಭಾವದಿಂದ ನಮಗೆ ನಮ್ಮ ಪೂರ್ವಜನ್ಮದ ಸ್ಮರಣೆಯಾಯಿತು ॥೭೧॥

ಅತಃ ಪರಂ ಮಹಾದೇವ ಪ್ರಪನ್ನಾನ್ ಶಾಧಿ ನಃ ಪ್ರಭೋ ।
ತ್ವದ್ದರ್ಶಿತೇನ ಮಾರ್ಗೇಣ ತರಿಷ್ಯಾಮೋ ಮಹಾರ್ಣವಮ್ ॥೭೨॥

**ಶ್ರೀ ಮಹಾದೇವ ಉವಾಚ –**

ಇದಮೇವ ಮಯಾ ಜ್ಞಾತ್ವಾ ಕಾರಣಂ ದೈತ್ಯನಂದನಾಃ ।
ಸಂಪ್ರಹಾರೇಽಪಿ ತುಮುಲೇ ನ ಕೃತೋ ಭವತಾಂ ವಧಃ ॥೭೩॥

ಅಹಂ ಚ ಭಗವಾನ್ ವಿಷ್ಣುರ್ಮಾಯಯಾ ಭಿನ್ನರೂಪಿಣೌ ।
ಪರಮಾರ್ಥದಶಾಯಾಂ ತು ನಾವಯೋರ್ವಿದ್ಯತೇ ಭಿದಾ ॥೭೪॥

ಹರಹರ್ಯೋರ್ಹಿ ಯೋ ಮೋಹಾತ್ ಭೇದಂ ಪಶ್ಯತಿ ಮಂದಧೀಃ ।
ಸ ಆಸಾದ್ಯಾಸುರೀಂ ಯೋನಿಂ ತತೋ ಯಾತ್ಯಧಮಾಂ ಗತಿಮ್ ॥೭೫॥

ಮಮಾತ್ಮಾ ಭಗವಾನ್ ವಿಷ್ಣುರ್ವಿಷ್ಣೋರಾತ್ಮಾಹಮೀಶ್ವರಃ ।
ಮನ್ಮಾಯಾಮೋಹಿತಧಿಯಸ್ತತ್ತ್ವಮೇತನ್ನ ಜಾನತೇ ॥೭೬॥

ಅತಃ ಪರಮಿದಂ ಕ್ಷೇತ್ರಂ ಸೇವನೀಯಂ ನಿರಂತರಮ್ ।
ತ್ರಿಕೂಟೇಶ್ವರಮಾರಾಧ್ಯ ನಿವಸಧ್ವಂ ಯಥಾಸುಖಮ್ ॥೭೭॥

ಬ್ರಹ್ಮವಿಷ್ಣುಮಹೇಶಾನಾಂ ಕೂಟಶಬ್ದೇನಮೇಲನಮ್ ।
ಲಿಂಗೇಽಸ್ಮಿನ್ನಸ್ತಿ ತಲ್ಲಿಂಗಂ ತ್ರಿಕೂಟೇಶ್ವರಸಂಜ್ಞಿತಮ್ ॥೭೮॥

ಪೂಜಯಾಸ್ಯ ತ್ರಿಕೂಟಸ್ಯ ಪೂಜಿತಾಃ ಸ್ಮೋ ವಯಂ ತ್ರಯಃ ।
ಅವಮಾನಾದಸ್ಯ ವಯಂ ತ್ರಯೋಽಪಿ ಹ್ಯವಮಾನಿತಾಃ ॥೭೯॥

ಭವಂತೋ ನಿವಸಂತ್ವತ್ರ ಶಿವಕ್ಷೇತ್ರೇಽತಿಪಾವನೇ ।
ನಿರಂತರಂ ಪೂಜಯಂತಸ್ತ್ರಿಕೂಟೇಶ್ವರಮಾದೃತಾಃ ॥೮೦॥

ಇತೋ ವರ್ಷಸಹಸ್ರಾಂತೇ ಕ್ಷೇತ್ರಸ್ಯಾಸ್ಯ ಮಹಾಸುರಾಃ ।
ಉಪದ್ರವಂ ಕರಿಷ್ಯಂತಿ ಮಯ್ಯೈವ ವರದರ್ಪಿತಾಃ ॥೮೧॥

ತತಸ್ತೇಷಾಂ ವಿನಾಶಾಯ ಕ್ರತುನಾ ಬ್ರಹ್ಮಸೂನುನಾ ।
ಸಮೇಷ್ಯತಿ ಹರಿಃ ಸಾಕ್ಷಾತ್ಪ್ರಾರ್ಥಿತೋ ಗಂಧಮಾದನಾತ್ ॥೮೨॥

ತಾನ್ ಹನಿಷ್ಯತಿ ಪಾಪಿಷ್ಠಾನಸುರಾನ್ ಕ್ಷೇತ್ರಕಂಟಕಾನ್ ।
ತ್ರಿಕೂಟೇಶಾಜ್ಞಯಾ ಬ್ರಹ್ಮಾ ತಂ ತತ್ರ ಸ್ಥಾಪಯಿಷ್ಯತಿ ॥೮೩॥

ವೀರನಾರಾಯಣಂ ದೇವಂ ದೃಷ್ಟ್ವಾ ಸಂಪೂಜ್ಯ ತಂ ಹರಿಮ್ ।
ತತಃ ಪಂಚತ್ವಮಾಪನ್ನಾ ಮತ್ಸಾಯುಜ್ಯಮವಾಪ್ಸ್ಯಥ ॥೮೪॥

ಭಗವಾನ್ ಶಂಕರನೇ! ಆದ್ದರಿಂದ ಶರಣಾಗತರಾದ ನಮಗೆ (ಮುಂದೆ ಕಲ್ಯಾಣಕ್ಕಾಗಿ) ಆಜ್ಞೆ ಮಾಡು ನೀನು ತೋರಿದ ಮಾರ್ಗದಿಂದ ನಡೆದು ಈ ಸಂಸಾರ ಸಾಗರವನ್ನು ದಾಟುವೆವು ॥೭೨॥

**ಶ್ರೀ ಮಹೇಶ್ವರನು ಹೇಳಿದನು –**

ದೈತ್ಯ ತನಯರೇ! ನಾನೀ ಕಾರಣವನ್ನರಿತೇ ನಿಮ್ಮೊಂದಿಗೆ ನಡೆದ ಭಯಂಕರ ತುಮುಲ ಯುದ್ಧದಲ್ಲಿ ನಿಮ್ಮನ್ನು ವಧಿಸಲಿಲ್ಲ ॥೭೩॥

ಬಗವಾನ್ ವಿಷ್ಣು ಮತ್ತು ನಾನು ಮಾಯೆಯಿಂದಾಗಿ ಬೇರೆ ಬೇರೆ ರೂಪವನ್ನು ಧರಿಸಿರುತ್ತೇವೆ. ಆದರೆ ಪಾರಮಾರ್ಥಿಕವಾಗಿ ನಮ್ಮಿಬ್ಬರಲ್ಲಿ ಯಾವ ಭೇದವೂ ಇರುವುದಿಲ್ಲ ॥೭೪॥

ದುರ್ಬುದ್ಧಿಯಿಂದ ಹರಿಹರನಲ್ಲಿ ಬೇದವೆಣಿಸುವ ಮಂದಮತಿಯು ದಾನವ ಜನ್ಮವನ್ನು ಹೊಂದಿ ನಂತರ ಅದಕ್ಕಿಂತಲೂ ಅಧಮ ಗತಿಯನ್ನೈದುವನು ॥೭೫॥

ಮಹಾವಿಷ್ಣುವಿನ ಆತ್ಮವೇ ನಾನಾದರೆ ನನ್ನ ಆತ್ಮ ಶ್ರೀಹರಿ ನನ್ನ ಮಾಯಾ ಪ್ರಭಾವಕ್ಕೆ ಒಳಗಾದ ಮಂದರು ಈ ತತ್ವವನ್ನು ಅರಿಯುವುದಿಲ್ಲ ॥೭೬॥

ಇನ್ನು ಮುಂದೆ ನೀವು ಪರಮ ಪಾವನವಾದ ಈ ಕ್ರತುಪುರ ಕ್ಷೇತ್ರವನ್ನೇ ಸೇವಿಸಬೇಕು ನೀವಿಲ್ಲಿ ತ್ರಿಕೂಟೇಶ್ವರನನ್ನು ಆರಾಧಿಸುತ್ತ ಆನಂದದಿಂದ ವಾಸಿಸಿರಿ ॥೭೭॥

''ಕೂಟ'ವೆಂದರೆ ಬ್ರಹ್ಮ ವಿಷ್ಣು ಮಹೇಶ್ವರರ ಸಮ್ಮಿಲನ. ಈ ಮೇಲನವು ಈ ಲಿಂಗದಲ್ಲಿರುವ ಕಾರಣ ಈ ಲಿಂಗವು ತ್ರಿಕೂಟೇಶ್ವರನೆಂದು ಹೆಸರು ಪಡೆದಿದ ॥೭೮॥

ಈ ತ್ರಿಕೂಟೇಶ್ವರನನ್ನು ಅರ್ಚಿಸಿದರ ನಮ್ಮ ಮೂವರಿಗೂ ಆ ಪೂಜೆಯು ಸಲ್ಲುವುದು. ಅದೇ ರೀತಿ ತ್ರಿಕೂಟೇಶ್ವರನನ್ನು ಅವಮಾನಿಸಿದರೆ ಅದು ನಮ್ಮ ಮೂವರನ್ನೂ ಅವಮಾನಿಸಿದಂತೆಯೇ ಆಗುತ್ತದೆ ॥೭೯॥

ನೀವು ಸಹ ಪರಮ ಪವಿತ್ರವಾದ ಈ ಶಿವಕ್ಷೇತ್ರದಲ್ಲಿ ನೆಲೆಸಿ ಭಕ್ತಿ ಗೌರವಗಳಿಂದ ನಿರಂತರ ತ್ರಿಕೂಟೇಶ್ವರನನ್ನು ಪೂಜಿಸಿರಿ ॥೮೦॥

ಇನ್ನು ಮುಂದೆ ಸಾವಿರ ವರ್ಷಗಳ ನಂತರ ನನ್ನ ವರದಿಂದಲೇ ದರ್ಪಿಷ್ಠರಾದ ಕೆಲವು ದಾನವರು ಈ ಪುಣ್ಯಕ್ಷೇತ್ರಕ್ಕೆ ಉಪದ್ರವವನ್ನು ಕೊಡುವರು. ॥೮೧॥

ಉಪದ್ರವ ಶಮನಕ್ಕಾಗಿ ಅವರನ್ನು ನಾಶಗೊಳಿಸಲು ಬ್ರಹ್ಮಸುತನಾದ ಕ್ರತು ಮುನಿಯು ಶ್ರೀ ನಾರಾಯಣನನ್ನು ಪ್ರಾರ್ಥಿಸಿ ಗಂಧಮಾದನ ಪರ್ವತದಿಂದ ಆ ಪ್ರಭುವನ್ನು ಕರೆ ತರುವನು. ॥೮೨॥

ಶ್ರೀಹರಿಯು ಕ್ಷೇತ್ರಕಂಟಕರಾದ, ಪಾಪಿಷ್ಠರಾದ ಆ ದಾನವರನ್ನು ಸಂಹರಿಸುವನು. ನನ್ನ ಆಜ್ಞೆಯಂತೆ ಬ್ರಹ್ಮನು ನಾರಾಯಣನನ್ನು ಈ ಕ್ಷೇತ್ರದಲ್ಲಿ ಸ್ಥಾಪಿಸುವನು ॥೮೩॥

ಭಗವಾನ್ ಶ್ರೀವೀರನಾರಾಯಣ ಸ್ವರೂಪನಾದ ಶ್ರೀಹರಿಯನ್ನು ದರ್ಶಿಸಿ ಪೂಜಿಸಿ ನಂತರ ಕಾಲಧರ್ಮವನ್ನೈದುವ ನೀವು ನನ್ನ ಸಾಯುಜ್ಯವನ್ನು ಹೊಂದುವಿರಿ ॥೮೪॥

ಅಸ್ಯ ಕ್ಷೇತ್ರಸ್ಯ ಯೇ ವಿಘ್ನಂ ಕರಿಷ್ಯಂತ್ಯಶುಭಾಶಯಾಃ ।
ತೇಷಾಂ ಸಮೂಲಮುಚ್ಛೇದಂ ಕರಿಷ್ಯಾಮಿ ನ ಸಂಶಯಃ ॥೮೫॥
ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ಮದೇಕಚಿತ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥೮೬॥
ಮಾಂ ದ್ವಿಷನ್ ಯೋ ಹರಿಕ್ಷೇತ್ರೇ ಮತ್ಕ್ಷೇತ್ರೇ ಯೋ ಹರಿಂ ದ್ವಿಷನ್।
ಪಸಂಸ್ತಸ್ಯ ವಿನಶ್ಯಂತಿ ಪುಣ್ಯಾನಿ ಚ ಕುಲಾನಿ ಚ ॥೮೭॥
ದಾರಾಃ ಪುತ್ರಾ ಗೃಹಂ ವಿತ್ತಂ ಪುಣ್ಯಕೀರ್ತಿಶ್ಚ ಸದ್ಗತಿಃ ।
ವಿನಶ್ಯಂತ್ಯಚಿರಾದೇವ ಸತ್ಯಂ ಸತ್ಯಂ ವದಾಮ್ಯಹಮ್ ॥೮೮॥
ವಿಷ್ಣುಸ್ತಾನಾಹ ದೈತ್ಯೇಂದ್ರಾನ್ ಮೇಘಗಂಭೀರಯಾ ಗಿರಾ ।
ಯದುಕ್ತಂ ಪಾರ್ವತೀಶೇನ ತತ್ಸತ್ಯಂ ನಾತ್ರ ಸಂಶಯಃ ॥೮೯॥
ಶಿವಂ ಮಾಂ ಪಶ್ಯತಾ ಭಿನ್ನಂ ವಿಧೇಯೋ ನೇಹ ಸಂಶಯಃ ।
ಶ್ರದ್ಧಾಲುರ್ಮೋಕ್ಷಮಾಪ್ನೋತಿ ಸಂಶಯಾತ್ಮಾ ವಿನಶ್ಯತಿ ॥೯೦॥
ಸದಾ ಮಮಾವತಾರೇಷು ಭಜನ್ನೇಕತರಂ ಯಥಾ ।
ಅನ್ಯೇಷು ವರ್ತತೇ ತದ್ವಚ್ಛಿವೇ ವರ್ತೇತ ಮಜ್ಜನಃ ॥೯೧॥
ತಾವೇವ ಪ್ರಾಪ್ನುತೋ ಮೋಕ್ಷಂ ಭೇದಜ್ಞೋ ನರಕಂ ವ್ರಜೇತ್ ।
ಆವಯೋರಂತರಂ ನಾಸ್ತಿ ಸತ್ಯಂ ಸತ್ಯಂ ನ ಸಂಶಯಃ ॥೯೨॥
ವಾಮದೇವೋ ಮಹಾಯೋಗೀ ಕ್ಷೇತ್ರಮೇತತ್ಸಮೇಷ್ಯತಿ ।
ರಹಸ್ಯಮಖಿಲಂ ಯುಷ್ಮಾನ್ ಸ ಸಮ್ಯಗುಪದೇಕ್ಷ್ಯತಿ ॥೯೩॥
ಇತ್ಯುಕ್ತ್ವಾ ತೌ ಹರಿಹರೌ ಸಹ ಶಕ್ರಾದಿಭಿಃ ಸುರೈಃ ।
ತ್ರಿಕೂಟೇಶಂ ಸಮಾಲೋಕ್ಯ ಜಗ್ಮತುಸ್ತೌ ಯಥಾಗತಮ್ ॥೯೪॥
ವಿದ್ಯುನ್ಮಾಲೀ ಹೇಮಮಾಲೀ ಮೇಘಮಾಲೀತಿ ತೇ ತ್ರಯಃ ।
ಮುಕ್ತಸಂಗಾಃ ಕ್ರತುಪುರೇ ನ್ಯವಸನ್ ಗತಮತ್ಸರಾಃ ॥೯೫॥
ಅವಶಿಷ್ಟಾಸ್ತು ಯೇ ದೈತ್ಯಾಃ ಕಾಮಕ್ರೋಧಪರಾಃ ಸದಾ ।
ಕಾಲಂ ನಿಜಂ ಪರೀಕ್ಷಂತಃ ಪಾತಾಲಂ ವಿವಿಶುಸ್ತದಾ ॥೯೬॥
ಇತ್ಯೇತತ್ಕಥಿತಂ ವಿಪ್ರಾಸ್ತ್ರಿಕೂಟೇಶಸ್ಯ ವೋ ಮಯಾ ।
ಮಾಹಾತ್ಮ್ಯಂ ದೇವದೇವಸ್ಯ ಭೂಯಃ ಕಿಂ ಕಥಯಾನಿ ವಃ ॥೯೭॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ
ಕ್ರತುಪುರಮಾಹಾತ್ಮ್ಯೇ
ಸುರಾಸುರಸಮರವರ್ಣನಂ ನಾಮ ದ್ವಾದಶೋಽಧ್ಯಾಯಃ

ಈ ಕ್ಷೇತ್ರಕ್ಕೆ ಉಪಟಳವನ್ನುಂಟು ಮಾಡುವ ವಿಘ್ನಕಾರಕ ಪಾಪಿಗಳನ್ನು ಬುಡಸಮೇತ ನಾಶಗೊಳಿಸುವೆ ಇದರಲ್ಲಿ ಸಂಶಯವೇಬೇಡ ||೮೫||

ಅನನ್ಯ ಭಕ್ತಿಯಿಂದ ನನ್ನನ್ನೇ ಧ್ಯಾನಿಸುತ್ತ, ಪೂಜಿಸುತ್ತ, ನನ್ನಲ್ಲೇ ಮನಸ್ಸಿಟ್ಟ ಸಜ್ಜನರ ಯೋಗಕ್ಷೇಮವನ್ನು ನಾನೇ ವಹಿಸುತ್ತೇನೆ ||೮೬||

ವಿಷ್ಣುಕ್ಷೇತ್ರದಲ್ಲಿ ನನ್ನನ್ನು ಹಾಗೂ ಶಿವಕ್ಷೇತ್ರದಲ್ಲಿ ಶ್ರೀಹರಿಯನ್ನು ದ್ವೇಷಿಸುತ್ತ ಯಾವನು ಪಾಪ ಮಾಡುವನೋ ಅವನ ಪುಣ್ಯಗಳು ಕುಲವೂ ಸಹ ಹಾಳಾಗುತ್ತವೆ ಆ ದ್ವೇಷಕನ "ಪತ್ನಿ–ಪುತ್ರ–ಗೃಹ–ಧಾನ್ಯ–ದನ–ಪುಣ್ಯ–ಕೀರ್ತಿ–ಸದ್ಗತಿ" ಇವೆಲ್ಲವೂ ಕೂಡಲೇ ನಾಶಹೊಂದುತ್ತವೆ ನಾನೀಗ ಪರಮ ಸತ್ಯವನ್ನೇ ಹೇಳುತ್ತಿದ್ದೇನೆ ||೮೭–೮೮||

ಅದೇ ಸಮಯದಲ್ಲಿ ಮಹಾವಿಷ್ಣುವೂ ಸಹ ಮೇಘಗಂಭೀರವಾದ ತನ್ನ ನುಡಿಯಿಂದ "ಪಾರ್ವತೀಪತಿ ಶಂಕರನು ಹೇಳಿದ್ದು ಸತ್ಯವೇ ಆಗಿದೆ ಇದರಲ್ಲಿ ತಿಲಮಾತ್ರವೂ ಸಂಶಯಬೇಡ" ವೆಂದು ಆ ದೈತ್ಯರಾಜರಿಗೆ ಹೇಳಿದನು ||೮೯||

ಶಿವನನ್ನು ಹಾಗೂ ನನ್ನನ್ನು ಬೇರೆಯಾಗಿ ನೋಡದಿರಿ ಸಂಶಯಪಡದಿರಿ ಕಾರಣ ಶ್ರದ್ಧಾವಂತನು ಮೋಕ್ಷ ಹೊಂದಿದರೆ ಸಂಶಯಿಯು ವಿನಾಶವನ್ನು ಹೊಂದುವನು ||೯೦||

ನನ್ನ ಅವತಾರಗಳ ಪೈಕಿ ಒಂದನ್ನು ಭಜಿಸುವ ಭಕ್ತನು ಆ ಬೇರೆ ಅವತಾರಗಳಲ್ಲಿ ಹೇಗೆ ಆದರಯುಕ್ತ ಅಭೇದ ದೃಷ್ಟಿಯನ್ನು ಹೊಂದಿರುವನೋ ಶಿವನಲ್ಲಿಯೂ ಅಂತಹ ಅಭೇದ ದೃಷ್ಟಿಯನ್ನೇ ಹೊಂದಿರಬೇಕು

ಹೀಗೆ ಅಭೇದ ದೃಷ್ಟಿಯುಳ್ಳ ಉಭಯತರು ಮೋಕ್ಷವನ್ನು ಹೂಂದುವರು ನಮ್ಮಿಬ್ಬರಲ್ಲಿ ಭೇದದೃಷ್ಟಿ ಮಾಡುವವರು ದುರ್ಗತಿಯನ್ನು ಹೊಂದುವರು ನಮ್ಮಿಬ್ಬರಲ್ಲಿ ಭೇದವೇ ಇಲ್ಲ ಇದು ಪರಮ ಸತ್ಯವಾಗಿದ್ದು, ಇದರಲ್ಲಿ ಸಂಶಯಪಡದಿರಿ ಮುಂದೆ ವಾಮದೇವನೆಂಬ ಮಹಾಯೋಗಿಯು ಈ ಕ್ಷೇತ್ರಕ್ಕೆ ಬರುವನು ಆ ಮಹಾನುಭಾವನು ನಿಮಗ ಸರ್ವ ರಹಸ್ಯವನ್ನೂ ಸರಿಯಾಗಿ ಉಪದೇಶಿಸುವನು ಎಂದು ಶ್ರೀಹರಿಯು ತಿಳಿಸಿದನು. ||೯೧–೯೩||

ಈ ರೀತಿ ತಿಳಿಸಿದ ಹರಿಹರರು ಇಂದ್ರಾದಿ ದೇವತೆಗಳೊಂದಿಗ ತ್ರಿಕೂಟೇಶ್ವರನನ್ನು ಅವಲೋಕಿಸಿ ಬಂದಂತೆಯೇ ತೆರಳಿದರು ||೯೪||

ವಿದ್ಯುನ್ಮಾಲೀ, ಹೇಮಮಾಲೀ, ಮೇಘಮಾಲೀ, ಈ ಮೂವರು ಮತ್ಸರಾದಿ ಗಳನ್ನು ತ್ಯಜಿಸಿ ಆಸಕ್ತಿರಹಿತರಾಗಿ, ಪಾವನವಾದ ಈ ಕ್ರತುಪುರದಲ್ಲಿ ನಲಸಿದರು ||೯೫||

ಅಳಿದುಳಿದ ಸರ್ವದಾ ಕಾಮಕ್ರೋಧ ಪರಾಯಣರಾದ ದೈತ್ಯರು ತಮ್ಮ ಸಮಯವನ್ನು ನಿರೀಕ್ಷಿಸುತ್ತ ಪಾತಾಲಕ್ಕೆ ತೆರಳಿದರು ||೯೬||

ಮುನಿಗಳೇ! ಈ ರೀತಿಯಿರುವ ದೇವದೇವನಾದ ತ್ರಿಕೂಟೇಶ್ವರನ ಮಾಹಾತ್ಮ್ಯೆಯನ್ನು ಇದುವರೆಗೂ ನಿಮಗೆ ಹೇಳಿದೆ. ಮತ್ತ ನಿಮಗ ಏನು ಹೇಳಲಿ?

ಶ್ರೀಭವಿಷ್ಯೋತ್ತರ ಪುರಾಣದ ಉತ್ತರ ಖಂಡದಲ್ಲಿನ
ಕ್ರತುಪುರ ಮಾಹಾತ್ಮ್ಯೆಯಲ್ಲಿ
ಸುರಾಸುರ ಯುದ್ಧವರ್ಣನೆಯೆಂಬ ಹನ್ನೆರಡನೆಯ ಅಧ್ಯಾಯವು ಮುಗಿಯಿತು.

# ಅಥ ತ್ರಯೋದಶೋಽಧ್ಯಾಯಃ

**ಋಷಯ ಊಚುಃ –**

ವಾಮದೇವೋ ಮಹಾಯೋಗೀ ತಸ್ಮಿನ್ ಕ್ಷೇತ್ರೇ ತಪೋನಿಧಿಃ ।
ಕಾನುದ್ದಿಶ್ಯ ಶಿವಜ್ಞಾನಂ ಪ್ರೋಕ್ತವಾನ್ ಸೂತ ಶಂಸ ನಃ ॥೧॥

**ಸೂತ ಉವಾಚ –**

ಯೋಽನಂತಮಹಿಮಾ ಶಂಭುರ್ಭೂತಾನಾಂ ಹಿತಕೃಚ್ಛಿವಃ ।
ವೇದಾಂತವೇದ್ಯೋ ವಿದ್ಯೇಶಃ ಸಚ್ಚಿದಾನಂದವಿಗ್ರಹಃ ॥೨॥
ನಿತ್ಯಃ ಶುದ್ಧಃ ಶಿವಃ ಸ್ಥಾಣುಃ ಸರ್ವಾದಿರಚಲೋಽಮಲಃ ।
ಸ ಏವ ಭಗವಾನ್ ದೇವಃ ಸರ್ವಭೂತಾದಿರವ್ಯಯಃ ॥೩॥
ಜಗದ್ವಿಧಾನತತ್ತ್ವಜ್ಞಃ ಪ್ರಧಾನಪುರುಷೇಶ್ವರಃ ।
ಕಾಲೇ ಕಾಲೇ ಸ ಭೂತಾನಿ ಸೃಜತ್ಯವತಿ ಹಂತ್ಯಜಃ ॥೪॥
ಸೋಽ ಸೃಜದ್ದಕ್ಷಿಣಾದಂಗಾದ್ಬ್ರಹ್ಮಾಣಂ ಲೋಕಪಾವನಮ್ ।
ವಾಮಭಾಗಾತ್ತಥಾ ವಿಷ್ಣುಂ ಲೋಕರಕ್ಷಾರ್ಥಮೀಶ್ವರಃ ॥೫॥
ಹೃದಯಾದಸೃಜದ್ಧರ್ಮಮಧರ್ಮಂ ಚಾಪಿ ಪೃಷ್ಠತಃ ।
ಭ್ರೂಮಧ್ಯಾದಸೃಜದ್ರುದ್ರಂ ಲೋಕಾನಾಮಪ್ಯಯಾಯ ಚ ॥೬॥
ಸ ಏವೇದಂ ಸಸರ್ಜಾಗ್ರೇ ಸ್ವಸ್ಮಿನ್ನೇವ ಸ್ವಮಾಯಯಾ ।
ಜಗದ್ವಿಚಿತ್ರನಿರ್ಮಾಣಂ ವಿಚಿತ್ರಸ್ಥಿತಿಹೇತುಕಮ್ ॥೭॥
ಲೋಕಾನ್ ಸ ಲೋಕಪಾಲಾಂಶ್ಚ ನಿರ್ಮಮೇ ಜಗತಾಂ ಪ್ರಭುಃ ।
ಭೂತಾನಿ ಭೌತಿಕಾನರ್ಥಾನ್ ಭೋಗಾನಾಯತನಾನಿ ಚ ॥೮॥
ನಕ್ಷತ್ರಾಣಿ ಗ್ರಹಾನ್ ಯೋಗಾನ್ ಕಾಲಭೇದಾಂಶ್ಚ ತಸ್ಯ ಹಿ ।
ಭುವ್ಯಂತರೀಕ್ಷೇ ಪಾತಾಲೇ ಪುಣ್ಯತೀರ್ಥಾನ್ಯನೇಕಶಃ ॥೯॥
ಸಪ್ತದ್ವೀಪಾನ್ ಪರ್ವತಾಂಶ್ಚ ಮೇರ್ವಾದೀನ್ ಕೋಟಿಶೋ ನದೀಃ ।
ಸಮುದ್ರಾನ್ ಸಪ್ತ ಸದ್ವೀಪಾನ್ ಕ್ಷೇತ್ರಾಣ್ಯಾಯತನಾನಿ ಚ ॥೧೦॥
ಪವಿತ್ರಾಂಶ್ಚ ವನೋದ್ದೇಶಾನ್ ದೇಶಾನ್ ನಾನಾವಿಧಾನ್ ಬಹೂನ್ ।
ಭಾಷಾಶ್ಚ ವಿವಿಧಾ ವರ್ಣಾನಾಶ್ರಮಾಂಶ್ಚ ಪೃಥಗ್ವಿಧಾನ್ ॥೧೧॥
ಯುಗಾನಿ ಯುಗಧರ್ಮಾಂಶ್ಚ ತಥಾ ಮನ್ವಂತರಾಣಿ ಚ ।
ದೇವಾನ್ ದೈತ್ಯಾನ್ ರಾಕ್ಷಸಾಂಶ್ಚ ಗಂಧರ್ವಾಪ್ಸರಸಃ ಖಗಾನ್ ॥೧೨॥
ವಿದ್ಯಾಧರೋರಗಪಶೂನ್ ಗುಹ್ಯಕಾನ್ ಯಕ್ಷಕಿಂನರಾನ್ ।
ಉದ್ಭಿಜ್ಜಂ ವಿವಿಧಾಕಾರಂ ಪರ್ಣಾನಿ ವಿವಿಧಾನಿ ಚ ॥೧೩॥

# ಹದಿಮೂರನೆಯ ಅಧ್ಯಾಯ

**ಋಷಿಗಳು ಹೇಳಿದರು –**

ಸೂತ! ಮಹಾತಪಸ್ವಿಯಾದ ಯೋಗಿರಾಜ ವಾಮದೇವ ಮಹರ್ಷಿಯು ಯಾರಿಗೆ ಶಿವಜ್ಞಾನವನ್ನು ಹೇಳಿದನು? ಅದನ್ನು ನಮಗೆ ಹೇಳು ॥೧॥

**ಸೂತನು ಹೇಳಿದನು –**

ಅಪಾರ ಮಹಿಮನೂ, ಸಕಲ ಪ್ರಾಣಿಗಳಿಗೆ ಹಿತಕರನೂ, ಮಂಗಳ ಸ್ವರೂಪನೂ ಆದ ಪರಶಿವನು ವಿದ್ಯಾಧಿಪತಿಯಾಗಿ ಸಚ್ಚಿದಾನಂದ ಮೂರ್ತಿಯೆಂದು ಪ್ರಸಿದ್ಧನಾಗಿ ಸರ್ವೋಪನಿಷತ್ಶ್ರುತಿವಾದ್ಯನಾಗಿದ್ದಾನೆ. ಸಕಲ ಕಾರ್ಯಗಳಿಗೂ ಮೂಲನಾದ ನಿತ್ಯ ಶುದ್ಧನಾದ ಸದಾಶಿವನು ಸ್ಥಿರನಾಗಿದ್ದಾನೆ ಸಂಸಾರ ಮಲವರ್ಜಿತನಾದ ಶಾಶ್ವತನಾದ ಪರಶಿವನು ಸಕಲ ಜೀವಿಗಳನ್ನೂ ಸೃಷ್ಟಿಸಿದನು ಜಗದ್ರಚನಾ ವಿಧಾನವನ್ನರಿತ ಸರ್ವ ಪುರುಷೋತ್ತಮನಾದ ಶಂಭುವು ಕಾಲಕಾಲಕ್ಕೆ ಜೀವರ ಸೃಷ್ಟಿ ಪಾಲನ–ಸಂಹಾರಗಳನ್ನು ಮಾಡುತ್ತಾನೆ ಪರಮೇಶ್ವರನು ತನ್ನ ದೇಹದ ದಕ್ಷಿಣ ಭಾಗದಿಂದ ಲೋಕಪೂಜ್ಯನಾದ ಬ್ರಹ್ಮನನ್ನೂ, ವಾಮಭಾಗದಿಂದ ಲೋಕರಕ್ಷಣೆಗ ಮಹಾವಿಷ್ಣುವನ್ನೂ ಸೃಷ್ಟಿಸಿದನು. ಧರ್ಮವನ್ನು ತನ್ನ ಹೃದಯದಿಂದಲೂ ಅಧರ್ಮವನ್ನು ತನ್ನ ಬೆನ್ನಿನಿಂದಲೂ ಉತ್ಪಾದಿಸಿದನು ಜಗತ್ತನ್ನು ಉಪಸಂಹರಿಸುವ ಸಲುವಾಗಿ ತನ್ನ ಭ್ರೂಮಧ್ಯದಿಂದ ರುದ್ರನನ್ನು ಸೃಷ್ಟಿಸಿದನು ॥೨–೬॥

ಬಗವಾನ್ ಶಂಕರನು ತನ್ನ ಮಾಯೆಯಿಂದ ತನ್ನಲ್ಲಿಯೇ ವಿಚಿತ್ರವಾದ ಪರಮಾದ್ಭುತಗಳಿಗೆ ಕಾರಣವಾದ ಈ ಜಗತ್ತನ್ನು ಸೃಷ್ಟಿಸಿ ಜನರನ್ನೂ, ಲೋಕಪಾಲರನ್ನೂ, ಪ್ರಾಣಿಗಳನ್ನೂ, ಭೋಗೋಪಯೋಗಿಯಾದ ಶರೀರವನ್ನೂ ಸೃಷ್ಟಿಸಿದನು, ಭೌತಿಕವಾದ ಅನಿಷ್ಟಗಳನ್ನೂ ನಕ್ಷತ್ರಗಳನ್ನೂ ನವಗ್ರಹಗಳನ್ನೂ ಯೋಗಗಳನ್ನು ಕಾಲಭೇದವನ್ನು ಭೂಮಿ – ಆಕಾಶ – ಪಾತಾಳಗಳಲ್ಲಿ ಅನೇಕ ಪುಣ್ಯ ತೀರ್ಥಗಳನ್ನು ನಿರ್ಮಿಸಿದನು ॥೭–೯॥

ಸಪ್ತದ್ವೀಪಗಳನ್ನೂ, ಮೇರು ಮೊದಲಾದ ಪರ್ವತಗಳನ್ನೂ, ಅಸಂಖ್ಯ ನದಿಗಳನ್ನೂ, ಸಪ್ತ ದ್ವೀಪಗಳನ್ನೊಳಗೊಂಡ ಸಾಗರಗಳನ್ನೂ ಕ್ಷೇತ್ರಗಳನ್ನೂ, ಗೃಹಗಳನ್ನೂ ನಾನಾ ಬಗೆಯ ಅನೇಕ ದೇಶಗಳನ್ನೂ ವಿವಿಧ ಭಾಷೆಗಳನ್ನೂ ಪವಿತ್ರವನಗಳನ್ನೂ ಬೇರೆ ಬೇರೆ ವರ್ಣಾಶ್ರಮಗಳನ್ನೂ ಸೃಷ್ಟಿಸಿದನು ॥ ೧೦–೧೧ ॥

ಇದೇ ರೀತಿ ಚತುರ್ಯುಗಗಳನ್ನೂ, ಯುಗಧರ್ಮಗಳನ್ನೂ ಮನ್ವಂತರಗಳನ್ನೂ, ದೇವಾಸುರರನ್ನೂ, ರಾಕ್ಷಸರನ್ನೂ ಗಂಧರ್ವರನ್ನೂ, ವಿದ್ಯಾಧರರಯಕ್ಷರನ್ನೂ, ಗುಹ್ಯಕರನ್ನೂ, ಕಿಂನರರನ್ನೂ, ಸರ್ಪಪಶುಪಕ್ಷಿಗಳನ್ನೂ, ಸ್ವರ್ಗವನ್ನೂ, ಅಪ್ಸರಃ ಸ್ತ್ರೀಯರನ್ನೂ, ವಿವಿಧ ಜಾತಿಯ ವೃಕ್ಷಗಳನ್ನೂ ನಾನಾ ಬಗೆಯ ಎಲೆಗಳನ್ನೂ ಸೃಷ್ಟಿಸಿದನು ॥೧೨–೧೩॥

ಏವಂ ಸ್ವಮಾಯಯಾ ಸೃಷ್ಟ್ವಾ ಜಗತ್ ಸ್ಥಾವರಜಂಗಮಮ್ ।
ತತ್ರ ಕ್ರೀಡತಿ ಸರ್ವಾತ್ಮಾ ಬಹುರೂಪೀ ಮಹೇಶ್ವರಃ ॥೧೪॥
ಸ ಸರ್ವಗೋಽಪಿ ಸರ್ವಾತ್ಮಾ ಮೂರ್ಧ್ನೈರ್ನೈವ ಹಿ ದೃಶ್ಯತೇ ।
ಸ ಸಮತ್ವೇನ ಸರ್ವತ್ರ ದೃಶ್ಯತೇ ಸಮದರ್ಶಿಭಿಃ ॥೧೫॥
ವಾಮದೇವೋ ಮಹಾಯೋಗೀ ಪಶ್ಯನ್ಮಾಯಾಮಯಂ ಜಗತ್ ।
ಚರನ್ ವಾಯುರಿವಾಽಸಂಗ ಆಯಾತ್ ಕ್ರತುಪುರಂ ಮುನಿಃ ॥೧೬॥
ತ್ರಿಕೂಟೇಶ್ವರಮಾಲೋಕ್ಯ ಹುಂಹುಂ ಕೃತ್ವಾ ತ್ರಿರುಚ್ಚಕೈಃ ।
ನಿಷಸಾದ ಪ್ರಸನ್ನಾತ್ಮಾ ಸ ತಸ್ಮಿನ್ ರಂಗಮಂಡಪೇ ॥೧೭॥
ಋಷೀಣಾಂ ಮಹತಾಂ ತತ್ರ ಯತೀನಾಮೂರ್ಧ್ವರೇತಸಾಮ್ ।
ಜ್ಞಾನಿನಾಂ ಚ ಸಮಾಜೋಽಭೂತ್ಸಾರಾಸಾರವಿವೇಕಿನಾಮ್ ॥೧೮॥
ವಿದ್ಯುನ್ಮಾಲ್ಯಾದಯಸ್ತೇಽಪಿ ಪೂರ್ವೋಕ್ತಾ ಅಸುರೋತ್ತಮಾಃ ।
ತೇಷಾಂ ತತ್ರೋಪವಿಷ್ಟಾನಾಂ ಶುಶ್ರೂಷೂಣಾಂ ಚ ಭಕ್ತಿತಃ ॥೧೯॥
ತಸ್ಮಿನ್ ಸಮಾಜೇ ವಿಪ್ರೋಽಭೂತ್ ಸುಮೇಧಾ ನಾಮ ನಾಮತಃ ।
ಸ ವಾಮದೇವಂ ಪಪ್ರಚ್ಛ ವಿನಯಾವನತಃ ಸುಧೀಃ ॥೨೦॥

**ಸುಮೇಧಾ ಉವಾಚ –**

ಭಗವನ್ ಸತ್ಯಮಾಚಾರಂ ವಕ್ತುಮರ್ಹಸಿ ಸತ್ತಮ! ।
ಆಚಾರಃ ಪ್ರಥಮೋ ಧರ್ಮೋ ಧರ್ಮ ಆಚಾರಲಕ್ಷಣಃ ॥೨೧॥
ಆಚಾರಹೀನಂ ನ ಪುನಂತಿ ವೇದಾ
ಯದ್ಯಪ್ಯಧೀತಾಃ ಕುಶಲಾಃ ಸಹರ್ಷಯಃ
ಛಂದಾಂಸ್ಯೇನಂ ಪ್ರಜಹತ್ಯಂತಕಾಲೇ ।
ನೀಡಂ ಶಕುಂತಾ ಇವ ಜಾತಪಕ್ಷಾಃ ॥೨೨॥
ಇತಿ ಪೃಷ್ಟೋ ವಾಮದೇವಸ್ತೇನ ತತ್ರ ಸುಮೇಧಸಾ ॥
ಪ್ರತಿನಂದ್ಯ ವಚಸ್ತಸ್ಯ ವಕ್ತುಂ ಸಮುಪಚಕ್ರಮೇ ॥೨೩॥

**ವಾಮದೇವ ಉವಾಚ –**

ಆಚಾರಸ್ತೇಜ ಆಧತ್ತೇ ಆಚಾರೋ ಹಂತ್ಯಲಕ್ಷಣಮ್ ।
ಆಚಾರಸ್ತನುತೇ ಕೀರ್ತಿಮಾಚಾರಾತ್ ಕಿಂ ನ ಲಭ್ಯತೇ ॥೨೪॥
ಆಚಾರಹೀನಃ ಪುರುಷಃ ಸತ್ಸು ಮಾನಂ ನ ವಿಂದತೇ ।
ನಾಸ್ಯ ಶ್ರದ್ದಧತೇ ವಾಚಂ ಜನಾ ಧರ್ಮಪರಾಯಣಾಃ ॥೨೫॥

ಸ್ಥಾವರ ಜಂಗಮಾತ್ಮಕವಾದ ಈ ಜಗತ್ತನ್ನು ತನ್ನ ಮಾಯೆಯಿಂದ ಸೃಷ್ಟಿಸಿ ಸರ್ವೇಶ್ವರನಾದ ಪರಶಿವನು ವಿವಿಧರೂಪಧಾರಿಯಾಗಿ ಈ ಜಗತ್ತಿನಲ್ಲಿ ವಿಹರಿಸುವನು.॥೧೪॥

ಸರ್ವಾಂತರ್ಯಾಮಿಯಾದ ಆತನನ್ನು ಮೂಢರು ಕಾಣುವದಿಲ್ಲ. ಆದರೆ ಸಮದರ್ಶಿಗಳಾದ ಜ್ಞಾನಿಗಳು ಎಲ್ಲೆಲ್ಲಿಯೂ ಆ ಪರಮಾತ್ಮನನ್ನೇ ಕಾಣುತ್ತಾರೆ. ॥೧೫॥

ಮಹಾಯೋಗಿಯಾದ ವಾಮದೇವ ಮುನಿಗಳು ಮಾಯಾಮಯವಾದ ಈ ಜಗತ್ತನ್ನು ನೋಡುತ್ತ ಇದರಲ್ಲಿ (ವಾಯುವಿನಂತೆ) ಅನಾಸಕ್ತರಾಗಿ ಸಂಚರಿಸುತ್ತ ಕ್ರತುಪುರಕ್ಕಾಗಮಿಸಿದರು ॥೧೬॥

ತ್ರಿಕೂಟೇಶ್ವರನನ್ನು ನೋಡಿ ಮೂರು ಬಾರಿ ''ಹುಂ''ಕಾರಮಾಡಿ (ಹುಂ ಕಾರವು ಡಮರು ಶಬ್ದಾನುಕೃತಿ ಆಗಿದೆ) ಪ್ರಸನ್ನ ಮನಸ್ಕರಾದ ವಾಮದೇವಮುನಿಗಳು ಆ ದೇವಾಲಯದ ರಂಗಮಂಟಪದಲ್ಲಿ ಕುಳಿತರು ॥೧೭॥

ಅಲ್ಲಿ ಊರ್ಧ್ವರೇತಸ್ಕರೂ, ನಿಯಮಿಗಳೂ, ಜ್ಞಾನಿಗಳೂ, ಸಾರಾ ಸಾರಪರಿತಪರೂ ಆದ ಮಹರ್ಷಿಗಳ ಸಮೂಹವೇ ನೆರೆಯಿತು ॥೧೮॥

ಭಕ್ತಿಯಿಂದ ಕೇಳಲು ಕುಳಿತಿದ್ದ ಅವರಲ್ಲಿ ಹಿಂದೆ ತಿಳಿಸಿದ ವಿದ್ಯುನ್ಮಾಲೀ ಮೇಘಮಾಲೀ ಹೇಮಮಾಲೀ ಎಂಬ ಅಸುರೋತ್ತಮರೂ ಇದ್ದರು ॥೧೯॥

ಆ ಸಮೂಹದಲ್ಲಿ ಸುಮೇಧನೆಂಬ ಬಲ್ಲಿದನಾದ ಬ್ರಾಹ್ಮಣನಿದ್ದನು. ಆ ವಿಪ್ರನು ವಿನಯದಿಂದ ತಲೆಬಾಗಿ ವಾಮದೇವ ಮಹರ್ಷಿಗಳನ್ನು ಪ್ರಶ್ನಿಸಿದನು ॥೨೦॥

**ಸುಮೇಧನು ಹೇಳಿದನು –**

ಭಗವನ್ ಮಹಾಮುನಿಯೇ! ಆಚಾರವೇ ಮೊದಲನಯ ಧರ್ಮ. ಧರ್ಮದ ಲಕ್ಷಣವೇ ಆಚಾರ. ಈ ವಿಚಾರವಾಗಿ ನಮ್ಮೆಲ್ಲರಿಗೂ ತಿಳಿಸಿಕೊಡು. ॥೨೧॥

ಸಾಂಗವಾಗಿ ವೇದಾಧ್ಯಯನ ಮಾಡಿದ ಮಹರ್ಷಿಗಳೂ ಸಹ ಆಚಾರವನ್ನೇ ನಡೆಸದಿದ್ದರೆ ಅವರನ್ನು ವೇದವೂ ಶುದ್ಧಗೊಳಿಸುವದಿಲ್ಲ. ರೆಕ್ಕೆಗಳು ಬಲಿತ ಮೇಲ ಪಕ್ಷಿ ಗಳು ಗೂಡನ್ನು ಬಿಡುವಂತೆ ಅಂತ್ಯಕಾಲದಲ್ಲಿ ಆಚಾರಹೀನನನ್ನು ವೇದಗಳು ಕೈಬಿಡುತ್ತವ

ತಮ್ಮನ್ನು ಪ್ರಶ್ನಿಸಿದ ಸುಮೇಧನನ್ನು ಅಭಿನಂದಿಸಿ ವಾಮದೇವರು ಉತ್ತರ ಹೇಳಲಾರಂಭಿಸಿದರು

**ವಾಮದೇವರೆಂದರು –**

ಆಚಾರವು (ಧರ್ಮಾಚರಣೆ–ಅನುಷ್ಠಾನ ಮುಂತಾದವು) ತೇಜಸ್ಸನ್ನು ಕೊಡುವದು ಮತ್ತು ಅಪಕೀರ್ತಿಯನ್ನು ನಾಶಗೊಳಿಸಿ ಕೀರ್ತಿಯನ್ನು ಹೆಚ್ಚಿಸುವದು ಆದ್ದರಿಂದ ಆಚಾರದಿಂದ ಏನು ಸಿದ್ಧಿಸುವುದಿಲ್ಲ? (ಎಲ್ಲವೂ ಸಿದ್ಧಿಸುವುದು)

ಆಚಾರವಿಲ್ಲದ ಮಾನವನು ಮಾನ್ಯತೆಯನ್ನು ಹೊಂದುವುದಿಲ್ಲ. ಈತನ ಮಾತಿನಲ್ಲಿ ಧಾರ್ಮಿಕ ಜನತೆ ವಿಶ್ವಾಸ ತೋರಿಸುವದಿಲ್ಲ. ॥೨೫॥

ದೇಶಾಚಾರಾಃ ಕುಲಾಚಾರಾ ಯೇ ಮಹದ್ಭಿರುಪಾಸಿತಾಃ ।
ತೇ ಹ್ಯವಶ್ಯಮನುಷ್ಠೇಯಾ ಯಥಾದೇಶಂ ಯಥಾಕುಲಮ್ ॥೨೬॥
ಅತ್ಯಾಚಾರೋ ನ ಕರ್ತವ್ಯಸ್ತ್ವನಾಚಾರೋ ನ ಕರ್ಹಿಚಿತ್ ।
ಶ್ರೇಷ್ಠೈರಾಚರ್ಯತೇ ಯದ್ಯತ್ತದಾಚರ್ಯಂ ಬುಭೂಷತಾ ॥೨೭॥
ಬಾಹ್ಯಮಾಭ್ಯಂತರಂ ಶೌಚಂ ದ್ವಿವಿಧಂ ಪರಿಕೀರ್ತಿತಮ್ ।
ಮೃಜಜ್ಜಲಾಭ್ಯಾಂ ಭವೇದ್ಬಾಹ್ಯಂ ಭಾವಶುದ್ಧ್ಯಾ ತಥಾಂತರಮ್ ॥೨೮॥
ಉಡ್ಡೀಯಂತೇ ಯಥಾಽಽಕಾಶೇ ಪಕ್ಷಾಭ್ಯಾಮೇವ ಪಕ್ಷಿಣಃ ।
ತಥಾ ದ್ವಾಭ್ಯಾಂ ಹಿ ಶೌಚಾಭ್ಯಾಂ ಗಾಹಂತೇ ಬ್ರಹ್ಮಣಿ ದ್ವಿಜಾಃ॥೨೯॥
ಸ್ನಾನಂ ಜಪಸ್ತಪೋ ಹೋಮ ಉಪವಾಸಃ ಶಿವಾರ್ಚನಮ್ ।
ಶೌಚಾಚಾರವಿಹೀನಸ್ಯ ಸಮಸ್ತಾ ನಿಷ್ಫಲಾಃ ಕ್ರಿಯಾಃ ॥೩೦॥
ಶೂದ್ರಾನ್ನಂ ಸೂತಕಾನ್ನಂ ಚ ಸಂಸ್ಕಾರಾನ್ನಂ ನ ಜಾತುಚಿತ್ ।
ಭುಂಜೀತ ಮತಿಮಾನ್ ತದ್ವದ್ದುರನ್ನಾನಿ ಚ ಸರ್ವಶಃ ॥೩೧॥
ಸದಾ ಪರಾನ್ನಭೋಜೀ ಯಸ್ತೇನ ಯದ್ಯತ್ಕೃತಂ ಭವೇತ್ ।
ತತ್ಸರ್ವಮನ್ನದಾತುಃ ಸ್ಯಾತ್ ಸುಕೃತಂ ನಾತ್ರ ಸಂಶಯಃ ॥೩೨॥
ಪಂಚಯಜ್ಞಾನಕೃತ್ವಾ ಯೋ ಭುಂಕ್ತೇಽನ್ನಮುದರಂಭರಿಃ ।
ಕಿಂ ತೇನ ನ ಕೃತಂ ಪಾಪಂ ಚೋರೇಣ ಮಖಲೋಪಿನಾ ॥೩೩॥
ವಿಧಾಯ ಪಂಚಯಜ್ಞಾನ್ ಯೋ ವಿಘಸಾಶೀ ಭವೇದ್ದ್ವಿಜಃ ।
ತಸ್ಮೈ ದೇವಾಃ ಪ್ರಸೀದಂತಿ ದದತ್ಯನ್ನಂ ಚತುಷ್ಫಲಮ್ ॥೩೪॥
ನಾನ್ನದಾನಾತ್ಪರಂ ದಾನಂ ನ ಗಾಯತ್ರ್ಯಾಃ ಪರೋ ಮನುಃ ।
ನಾಽಹಿಂಸಾಯಾಃ ಪರೋ ಧರ್ಮೋ ನಾಽ ಸ್ಯತಾತ್ಪಾತಕಂ ಪರಮ್॥೩೫॥
ಅಸತ್ಯಂ ಸಾಹಸಂ ದ್ವೇಷಂ ಮಾತ್ಸರ್ಯಂ ಪರಪೀಡನಮ್ ।
ಧರ್ಮಧ್ವಜಿತ್ವಂ ಶಾಠ್ಯಂ ಚ ದೂರತಃ ಪರಿವರ್ಜಯೇತ್ ॥೩೬॥
ಪೈಶೂನ್ಯಂ ಪಾರದಾರ್ಯಂಚ ಚೌರ್ಯಂ ದೌಃಶೀಲ್ಯಮುಗ್ರತಾಮ್ ।
ದೇಹಾಭಿಮಾನಂ ನಿಂದಾಂ ಚ ಪರೇಷಾಂ ಪರಿವರ್ಜಯೇತ್ ॥೩೭॥
ದುರ್ವಿವಾದಂ ದುರಾಚಾರಂ ದುರನ್ನಂ ದುಷ್ಕೃತಿಗ್ರಹಮ್ ।
ದುರಾಗ್ರಹಂ ಚ ದುಃಸಂಗಂ ದೂರತಃ ಪರಿವರ್ಜಯೇತ್ ॥೩೮॥
ನ ಸ್ಯಾಜ್ಜಾತ್ವಭಿನಿರ್ಮುಕ್ತೋ ನ ಸ್ಯಾದಭ್ಯುದಿತಃ ಸದಾ ।
ಪ್ರಾತಃಸಂಧ್ಯಾಪರೋ ನಿತ್ಯಂ ಸ ಏವ ಬ್ರಾಹ್ಮಣಃ ಸ್ಮೃತಃ ॥೩೯॥

ಮಹಾತ್ಮರು ಮೊದಲಿನಿಂದ ನಡೆಸಿಕೊಂಡು ಬಂದ ದೇಶಾಚಾರ ಕುಲಾಚಾರ ಗಳನ್ನು ಅವಶ್ಯವಾಗಿ ದೇಶಕಾಲಾನುಸಾರ ಮುನ್ನಡೆಸಿಕೊಂಡು ಬರಬೇಕು ॥೨೬॥

ಅನಾಚಾರವನ್ನೂ, ಅತಿಯಾದ ಆಚಾರವನ್ನೂ ಮಾಡಬಾರದು ಉತ್ತಮರು ಮಾಡಿದ ಎಲ್ಲಾ ಆಚಾರಗಳನ್ನೂ ಮಾನವಂತರು ಆಚರಿಸಬೇಕು. ॥೨೭॥

'ಬಾಹ್ಯ – ಅಭ್ಯಂತರ'ವೆಂದು ಶೌಚವು ಎರಡು ವಿದವಾಗಿದೆ ಮೃತ್ತಿಕಾ ಜಲಗಳಿಂದ ಆಚರಿಸುವುದು ಬಾಹ್ಯಶೌಚ. ಭಾವಶುದ್ಧಿ ರೂಪವಾದದ್ದೇ ಅಭ್ಯಂತರ ಶೌಚ ॥೨೮॥

ಪಕ್ಷಿಗಳು ತಮ್ಮ ಎರಡು ರೆಕ್ಕೆಗಳಿಂದಲೇ ಆಕಾಶದಲ್ಲಿ ಹಾರುವಂತೆ ವಿಪ್ರರು ಎರಡು ವಿಧವಾಗಿರುವ ಈ ಶೌಚಾಚಾರಗಳಿಂದ ಬ್ರಹ್ಮವಿಚಾರದಲ್ಲಿ ಆಸಕ್ತರಾಗುತ್ತಾರೆ ॥೨೯॥

ಸ್ನಾನ–ಜಪ–ತಪಸ್ಸು–ಹೋಮ–ಉಪವಾಸ–ಶಿವಪೂಜನ ಇವುಗಳೆಲ್ಲಾ ಶೌಚಾಚಾರ ವನ್ನು ಪಾಲಿಸದವನ ಪಾಲಿಗೆ ನಿರುಪಯೋಗಿ ಕೆಲಸಗಳಂತಾಗುತ್ತವೆ. ॥೩೦॥

ಶೂದ್ರಾನ್ನ, ಆಶೌಚವಿದ್ದವರ ಅನ್ನ, ಸಂಸ್ಕಾರಾನ್ನ, (ಬ್ರಹ್ಮೌದನ ಸೀಮಂತೋನ್ನಯನ ಇತ್ಯಾದಿ) ದೂಷಿತವಾದ ಅನ್ನ ಇವುಗಳನ್ನು ಯಾವಾಗಲೂ ಸೇವಿಸಬಾರದು

ಸರ್ವದಾ ಪರಾನ್ನವನ್ನೇ ಉಂಡು ಬದುಕುವವನು ಮಾಡಿದ ಕರ್ಮಫಲ ವೆಲ್ಲವೂ ಅನ್ನದಾತೃವಿಗೇ ಸಲ್ಲುವದರಲ್ಲಿ ಸಂಶಯವಿಲ್ಲ ॥ ೩೨ ॥

ಪಂಚಯಜ್ಞಗಳನ್ನಾಚರಿಸದೇ ಕೇವಲ ಹೊಟ್ಟೆ ತುಂಬಲು ಉಣ್ಣುವವನು ಯಜ್ಞಘಾತುಕ, ಚೋರನಾಗಿ ಆತ ಪಾಪ ಮಾಡಿದಂತಾಗುವದಿಲ್ಲವೇ? ದ್ವಿಜನು ಪಂಚ ಮಹಾಯಜ್ಞಗಳನ್ನಾಚರಿಸಿ ಅತಿಥಿ ಸತ್ಕಾರಾದಿಗಳನ್ನು ಮಾಡಿ ಉಳಿಯುವ ಅನ್ನವನ್ನು ಸ್ವೀಕರಿಸುತ್ತ ಹೋದರೆ ದೇವತೆಗಳು ಸಂಪ್ರೀತರಾಗಿ ಅವನಿಗೆ ಸಾಕಷ್ಟು ಅನ್ನವನ್ನು, ಅಷ್ಟೇ ಏಕೆ ಚತುರ್ವಿಧ ಪುರುಷಾರ್ಥಗಳನ್ನೂ ಕೊಡುವರು. ॥೩೩–೩೪॥

ಅನ್ನದಾನಕ್ಕಿಂತ ಶ್ರೇಷ್ಠದಾನ ಬೇರೊಂದಿಲ್ಲ. ಗಾಯತ್ರೀ ಮಂತ್ರಕ್ಕಿಂತಲೂ ಉತ್ತಮ ಮಂತ್ರ ಇನ್ನೊಂದಿಲ್ಲ ಅಹಿಂಸೆಗಿಂತಲೂ ಮಿಗಿಲಾದ ಧರ್ಮ ಮತ್ತೊಂದಿಲ್ಲ ಅಸತ್ಯವನ್ನು ಮೀರಿಸಿದ ಪಾಪವಿನ್ನೊಂದಿಲ್ಲ. ॥೩೫॥

ಅಸತ್ಯ, (ದುಃ) ಸಾಹಸ, ದ್ವೇಷ, ಮಾತ್ಸರ್ಯ, ಪರಪೀಡನೆ, ಧರ್ಮವಿರೋಧ, ಹರಮಾರಿತನ ಇವುಗಳನ್ನು ಹತ್ತಿರ ಸೇರಿಸಬಾರದು ॥೩೬॥

ಜಿಪುಣತನ, ಪರಸ್ತ್ರೀಗಮನ, ಕಳವು, ಕೆಟ್ಟನಡತೆ, ಕಠೋರ ಸ್ವಭಾವ, ದೇಹಾಭಿಮಾನ, ಪರನಿಂದೆ, ಇವುಗಳನ್ನು ತ್ಯಜಿಸಬೇಕು. ॥೩೭॥

ಕೆಟ್ಟವಾರ್ತಾಲಾಪ, ದುರಾಚಾರ, ದೂಷಿತವಾದ ಅನ್ನ (ಕದನ್ನ), ದುರ್ದಾನ, (ಕುರಿ, ಎಮ್ಮೆ ಇತ್ಯಾದಿ ಪರಿಗ್ರಹ) ದುರಾಗ್ರಹ, ಕೆಟ್ಟವರ ಸಹವಾಸ, ಇವನ್ನು ಯಾವಾಗಲೂ ಬಿಡಬೇಕು. ॥೩೮॥

ಸೂರ್ಯೋದಯ – ಸೂರ್ಯಾಸ್ತ ಕಾಲಗಳಲ್ಲಿ ನಿದ್ರಿಸದೆ ನಿತ್ಯ ಸಂಧ್ಯಾವಂದ ನಾದಿಗಳನ್ನು ನಡೆಸುವವನೇ ಬ್ರಾಹ್ಮಣನೆನಿಸುತ್ತಾನೆ. ॥ ೩೯ ॥

ಪ್ರಾತಃ ಸ್ನಾನೇ ಹ್ಯಶಕ್ತಶ್ಚೇತ್ ಮಂತ್ರಸ್ನಾನಂ ಸಮಾಚರೇತ್ ।
ತದ್ವಿಧಿಂ ಶೃಣು ವಕ್ಷ್ಯಾಮಿ ಯೇನ ಶುದ್ಧೋ ಭವೇದ್ದ್ವಿಜಃ ॥೪೦॥

ವಿಸೃಜ್ಯ ಮಲಮೂತ್ರಂ ಚ ತ್ರಿರ್ಮೃದಾ ಶೋಧಯೇದ್ಗುದಮ್ ।
ಸಕೃದೇವ ಮೃದಾ ವಾಪಿ ಕುರ್ಯಾಚ್ಛೌಚಮತಂದ್ರಿತಃ ॥೪೧॥

ಸಪ್ತವಾರಂ ಮೃದಾ ವಾಮಪಾಣಿಂ ಪ್ರಕ್ಷಾಲ್ಯ ಪಾದಯೋಃ ।
ತ್ರಿವಾರಂ ಮೃತ್ತಿಕಾಶೌಚಂ ಕುರ್ಯಾತ್ಪಾಣ್ಯೋಸ್ತಥಾ ಪುನಃ ॥೪೨॥

ಏವಂ ಶೌಚಂ ವಿಧಾಯಾಽಥ ದಂತಧಾವನಮಾಚರೇತ್ ।
ಮುಖಂ ಪ್ರಕ್ಷಾಲ್ಯ ಗಾತ್ರಾಣಿ ಪ್ರಮೃಜ್ಯಾರ್ದ್ರೇಣ ವಾಸಸಾ ॥೪೩॥

ಧೌತವಾಸಃ ಪರೀಧಾಯ ತತ ಆಚಮ್ಯ ವಾಗ್ಯತಃ ।
ಆಪೋಹಿಷ್ಠೇತಿಸೂಕ್ತೇನ ಮಂತ್ರಸ್ನಾನಂ ಸಮಾಚರೇತ್ ॥೪೪॥

ಪಾದಯೋರ್ಮೂರ್ಧ್ನಿ ಹೃದಯೇ ಮಸ್ತಕೇ ಹೃದಿಪಾದಯೋಃ ।
ಹೃದಯೇ ಪಾದಯೋರ್ಮೂರ್ಧ್ನಿ ಹೃದ್ಯಂಘ್ರ್ಯೋರ್ಮೂರ್ಧ್ನಿ ಮಾರ್ಜನಮ್ ॥೪೫॥

ಮಸ್ತಕೇ ಹೃದಯೇಽಂಘ್ರ್ಯೋಶ್ಚ ಹೃದ್ಯಂಘ್ರ್ಯೋರ್ಮೂರ್ಧ್ನಿ ಮಾರ್ಜನಮ್ ।
ಇದಮರ್ಧರ್ಚಶಃ ಪ್ರೋಕ್ತಂ ದೇಹಪಾವಿತ್ರ್ಯಕಾರಕಮ್ ॥೪೬॥

ಹೃದಯೇ ಪಾದಯೋರ್ಮೂರ್ಧ್ನಿ ಋಕ್ಶೋ ಮಾರ್ಜನಮೀರಿತಮ್ ।
ಉಕ್ತೇಷು ಮಾರ್ಜನೇಷ್ವೇಷು ಪಠೇದೋಂಕಾರಮಾದಿತಃ ॥೪೭॥

ಗಾಯತ್ರ್ಯಾ ದಶಕೃತ್ವಾಽಂಬು ಪ್ರಾಶ್ನೀಯಾದಭಿಮಂತ್ರಿತಮ್ ।
ದ್ವಿರಾಚಾಮೇತ್ತತೋ ಮಂತ್ರಸ್ನಾನಮೇತದುದೀರಿತಮ್ ॥೪೮॥

ಸ್ನಾನಮೇತದಶಕ್ತಸ್ತು ಕೃತ್ವಾ ಸಂಧ್ಯಾಂ ಸಮಾಚರೇತ್ ।
ಶಕ್ತಸ್ತು ವಾರುಣಂ ಸ್ನಾನಂ ಕುರ್ಯಾದೇವ ನ ಸಂಶಯಃ ॥೪೯॥

ಪೂರ್ವೋಕ್ತವಿಧಿನಾ ಸ್ನಾತ್ವಾ ಬಹಿರಾಗತ್ಯ ಶುದ್ಧಧೀಃ ।
ಸುಧೌತಂ ಸದಶಂ ಶ್ವೇತಂ ಪರಿದಧ್ಯಾತ್ಸದಂಶುಕಮ್ ॥೫೦॥

ಆಸನೇ ಚೋಪವಿಶ್ಯಾಥ ಪ್ರಾಙ್ಮುಖೋ ವಾಪ್ಯುದಙ್ಮುಖಃ ।
ಅಂತರ್ಜಾನುಕರೋ ಭೂತ್ವಾ ದ್ವಿರಾಚಮನಮಾಚರೇತ್ ॥೫೧॥

ಶುದ್ಧಂ ಭಸ್ಮ ಸಮಾದಾಯ ಸದ್ಯೋಜಾತಾದಿಪಂಚಭಿಃ ।
ಅಗ್ನಿರಿತ್ಯಾದಿಭಿರ್ಮಂತ್ರೈಃ ಸಮ್ಯಕ್ತದಭಿಮಂತ್ರಯೇತ್ ॥೫೨॥

ಮಾನಸ್ತೋಕೇನ ಚ ಜಲಂ ದತ್ವಾ ಸಂಮರ್ದಯೇತ್ತತಃ ।
ತ್ರಿಯಂಬಕೇತಿಮಂತ್ರೇಣ ಶಿರೋ ಲಿಂಪೇದತಂದ್ರಿತಃ ॥೫೩॥

ಪ್ರಾತಃ ಸ್ನಾನ ಮಾಡಲು ಅಶಕ್ತನಾಗಿದ್ದರೆ ಮಂತ್ರಸ್ನಾನವನ್ನು ಮಾಡಬೇಕು ಅದರಿಂದ ವಿಪ್ರನು ಪರಿಶುದ್ಧನಾಗುವನು ಸುಮೇಧ! ಅದರ ವಿಧಾನವನ್ನು ಹೇಳುವೆ ಕೇಳು ॥೪೦॥

ಮಲ–ಮೂತ್ರ ವಿಸರ್ಜಿಸಿದ ನಂತರ ಮೂರು ಸಾರಿ ಮಣ್ಣಿನಿಂದ ಗುದವನ್ನು ಶೋಧಿಸಬೇಕು ಅಥವಾ ಒಂದು ಸಾರಿಯಾದರೂ ಮಣ್ಣಿನಿಂದ ಶೋಧಿನಬೇಕು ॥೪೧॥

ಮೃತ್ತಿಕೆಯಿಂದ ಏಳುಸಲ ಎಡಗೈಯನ್ನೂ, ಎರಡು ಪಾದಗಳನ್ನೂ ಪ್ರಕ್ಷಾಲಿಸಿ ಪುನಃ ಎರಡೂ ಕೈಗಳನ್ನು ಮೂರು ಸಲ ಮೃತ್ತಿಕೆಯಿಂದ ಪ್ರಕ್ಷಾಲಿಸಬೇಕು ॥೪೨॥

ಈ ರೀತಿ ಶೌಚವನ್ನಾಚರಿಸಿದ ನಂತರ ದಂತಧಾವನ ಮಾಡಬೇಕು ಮುಖವನ್ನು ತೊಳೆದು ಒದ್ದೆಯಾದ ಬಟ್ಟೆಯಿಂದ ದೇಹವನ್ನೆಲ್ಲ ಒರೆಸಿ ಬಿಳಿಯಾದ ಬಟ್ಟೆಯನ್ನುಟ್ಟು, ಆಚಮನ ಮಾಡಿ 'ಆಪೋಹಿಷ್ಠಾ' ಎಂಬ ಸೂಕ್ತದಿಂದ ಮಂತ್ರಸ್ನಾನವನ್ನು ಮಾಡಬೇಕು. ॥೪೩–೪೪॥

ಪಾದಗಳಿಗೆ, ಶಿರಸ್ಸಿಗೆ, ಹೃದಯಕ್ಕೆ, ಮಸ್ತಕಕ್ಕೆ, ಪುನಃ ಹೃದಯ ಪಾದಗಳಿಗೆ, ಪುನಃ ಹೃದಯಪಾದ ಶಿರಸ್ಸುಗಳಿಗೆ ಅದೇ ರೀತಿ ಪುನಃ ಮಾರ್ಜನೆ ಮಾಡಬೇಕು ನಂತರ ಮಸ್ತಕ, ಹೃದಯ, ಪಾದಗಳಿಗೆ, ಪುನಃ ಹೃದಯಪಾದ ಶಿರಸ್ಸುಗಳಿಗೆ ಮಾರ್ಜನೆ ಮಾಡಬೇಕು ಪಾದಶಃ ಪ್ರೋಕ್ತವಾದ ಈ ಮಂತ್ರಸ್ನಾನವು ದೇಹವನ್ನು ಪವಿತ್ರಗೊಳಿಸುವುದು ॥೪೫–೪೭॥

ಪ್ರತಿಯೊಂದು ಋಕ್ಕಿನಿಂದ ಹೃದಯಪಾದಶಿರಸ್ಸುಗಳಿಗೆ ಮಾರ್ಜನ ವಿಧಿಯನ್ನು ಹೇಳಲಾಗಿದೆ. ಹೀಗೆ ಹೇಳಿದ ಮಾರ್ಜನೆಗಳ ಮೊದಲು 'ಓಂಕಾರ'ವನ್ನು ಹೇಳಬೇಕು.॥೪೭॥

ಹತ್ತುಸಲ ಗಾಯತ್ರಿಮಂತ್ರದಿಂದ ಅಭಿಮಂತ್ರಿಸಿದ ಜಲವನ್ನು ಪ್ರಾಶನಮಾಡಿದ ನಂತರ ಎರಡು ಸಲ ಆಚಮನ ಮಾಡಬೇಕು. ಇದುವೇ ಮಂತ್ರಸ್ನಾನವಾಗಿದೆ. ॥೪೮॥

ಕೇವಲ ಅಶಕ್ತನು ಈ ಮಂತ್ರಸ್ನಾನವನ್ನು ಮಾಡಿ ಸಂಧ್ಯಾದಿಗಳನ್ನು ಆಚರಿಸಬೇಕು ಶಕ್ತನಾದವನು ಜಲಸ್ನಾನವನ್ನು ಮಾಡಲೇಬೇಕು. ಇದರಲ್ಲಾವ ಸಂಶಯವೂ ಇಲ್ಲ. ॥೪೯॥

ಹಿಂದೆ ಹೇಳಿದ ವಿಧಾನದಿಂದ ಸ್ನಾನ ಮಾಡಿ ಹೊರಬಂದು ಅಂಚು ಇರುವ ಒಗೆದ ಬಿಳಿಬಟ್ಟೆಯನ್ನು ಅಂದರೆ ಧೋತರವನ್ನು ಧರಿಸಬೇಕು ॥೫೦॥

ಯಥಾನುಕೂಲ ಆಸನದಲ್ಲಿ ಪೂರ್ವ ಅಥವಾ ಉತ್ತರ ದಿಕ್ಕಿಗೆ ಅಭಿಮುಖವಾಗಿ ಕುಳಿತು ಕೈಗಳೆರಡನ್ನೂ ಮಂಡಿಯೊಳಗೇ ಇಟ್ಟುಕೊಂಡು ಎರಡು ಸಲ ಆಚಮನ ಮಾಡಬೇಕು ॥೫೧॥

ನಂತರ ಶುದ್ಧವಾದ ಭಸ್ಮವನ್ನು ತೆಗೆದುಕೊಂಡು ಸದ್ಯೋಜಾತವೇ ಮೊದಲಾದ ಪಂಚಮಂತ್ರಗಳಿಂದ ಹಾಗೂ 'ಅಗ್ನಿರ್ಮೂರ್ಧಾ' ಮೊದಲಾದ ಮಂತ್ರಗಳಿಂದ ಸರಿಯಾಗಿ ಆ ಭಸ್ಮವನ್ನು ಅಭಿಮಂತ್ರಿಸಿ 'ಮಾನಸ್ತೋಕೇ' ಎಂಬ ಮಂತ್ರವನ್ನುಚ್ಚರಿಸಿ ಜಲದೊಂದಿಗೆ ಕಲಸಿ 'ತ್ರ್ಯಂಬಕಂ ಯಜಾಮಹೇ' ಎಂಬ ಮಂತ್ರದಿಂದ ಶಿರಸ್ಸಿನಲ್ಲಿ ಲೇಪಿಸಬೇಕು ॥೫೨–೫೩॥

ತ್ರಿಯಾಂಯುಷಾದಿಭಿರ್ಮಂತ್ರೈರ್ಲಲಾಟೇ ಚ ಭುಜದ್ವಯೇ ।
ಸ್ಕಂಧೇ ಗಲೇ ಚ ಹೃದಯೇ ನಾಭೌ ಕೂರ್ಪರಯೋಸ್ತಥಾ ॥೫೪॥

ಮಣಿಬಂಧೇ ಚ ಪೃಷ್ಠೇ ಚ ಕರ್ಣಯೋರನುಲಿಂಪಯೇತ್ ।
ಸರ್ವಾಂಗೋದ್ಧೂಲನಂ ಪ್ರೋಕ್ತಂ ಯತೀನಾಂ ಚ ವಿರಾಗಿಣಾಮ್॥೫೫॥

ಪ್ರದೇಶಿನ್ಯಾದಿತಿಸೃಭಿರಂಗುಲೀಭಿರ್ವಿಲೇಪಯೇತ್ ।
ತಿಸ್ರೋ ರೇಖಾ ಭವಂತ್ಯೇಷು ಸ್ಥಾನೇಷು ಮುನಿಪುಂಗವಾಃ ॥೫೬॥

ಮಧ್ಯಮಾನಾಮಿಕಾಭ್ಯಾಂ ದ್ವೇ ಮಧ್ಯೇ ಚ ಪ್ರತಿಲೋಮತಃ ।
ಅಂಗುಷ್ಠೇನ ತೃತೀಯಾ ಸ್ಯಾತ್ ತ್ರಿಪುಂಡ್ರಃ ಸೋಽಭಿಧೀಯತೇ ॥೫೭॥

ತಿಸೃಣಾಂ ಮಂತ್ರರೇಖಾಣಾಂ ಪ್ರತ್ಯೇಕಂ ನವದೇವತಾಃ ।
ಅಕಾರೋ ಗಾರ್ಹಪತ್ಯಾಗ್ನಿರ್ಭೂರ್ಮಿಶ್ಚಾತ್ಮರಜೋಗುಣಃ ॥೫೮॥

ಋಗ್ವೇದಶ್ಚ ಕ್ರಿಯಾಶಕ್ತಿಃ ಪ್ರಾತಃಸವನಮೇವ ಚ ।
ಮಹಾದೇವಶ್ಚ ರೇಖಾಯಾಃ ಪ್ರಥಮಾಯಾಶ್ಚ ದೇವತಾಃ ॥೫೯॥

ಉಕಾರೋ ದಕ್ಷಿಣಾಗ್ನಿಶ್ಚ ನಭಃ ಸತ್ತ್ವಂಯಜುಸ್ತಥಾ ।
ಮಧ್ಯಂದಿನಂ ಚ ಸವನಮಿಚ್ಛಾಶಕ್ತ್ಯಂತರಾತ್ಮಕೌ ॥೬೦॥

ಮಹೇಶ್ವರಶ್ಚ ರೇಖಾಯಾ ದ್ವಿತೀಯಾಯಾಶ್ಚ ದೇವತಾಃ ।
ಮಕಾರಾಹವನೀಯೌ ಚ ಪರಮಾತ್ಮಾ ತಮೋದಿವೌ ॥೬೧॥

ಜ್ಞಾನಶಕ್ತಿಃ ಸಾಮವೇದಸ್ತೃತೀಯಂ ಸವನಂ ತಥಾ ।
ಶಿವಶ್ಚೇತಿ ತೃತೀಯಾಯಾ ರೇಖಾಯಾಶ್ಚಾಧಿದೇವತಾಃ ॥೬೨॥

ಆದಾವೇತಾ ದೇವತಾಸ್ತು ಸ್ಮೃತ್ವಾ ನತ್ವಾ ಚ ಭಕ್ತಿತಃ ।
ತ್ರಿಪುಂಡ್ರಂ ಧಾರಯೇದ್ಯಸ್ತು ಸ ಸಾಕ್ಷಾಚ್ಛಿವ ಉಚ್ಯತೇ ॥೬೩॥

ತ್ರಿಪುಂಡ್ರಧಾರಣಂ ವಿಪ್ರಾಃ ಪ್ರಾಣಮಂತ್ರೈರ್ಯಥಾವಿಧಿ ।
ತ್ರೈವರ್ಣಿಕಾನಾಂ ನಿಯತಮನ್ಯೇಷಾಂ ತದಮಂತ್ರಕಮ್ ॥೬೪॥

ತ್ರಿಪುಂಡ್ರಂ ಕುರುತೇ ಯಸ್ತು ಭಸ್ಮನಾ ವಿಧಿಪೂರ್ವಕಮ್ ।
ಬ್ರಹ್ಮಚಾರೀ, ಗೃಹಸ್ಥೋ, ವಾನಪ್ರಸ್ಥೋ, ಯತಿರೇವ ಚ ॥೬೫॥

ಮಹಾಪಾತಕಸಂಘಾತೈರ್ಮುಚ್ಯತೇ ಚೋಪಪಾತಕೈಃ ।
ಗ್ರಹಾಸ್ತಂ ನೋಪಸರ್ಪಂತಿ ನ ಪಿಶಾಚಾ ನ ರಾಕ್ಷಸಾಃ ॥೬೬॥

'ತ್ರಿಯಾಯುಷ' ಮೊದಲಾದ ಮಂತ್ರಗಳಿಂದ ಲಲಾಟ, ಎರಡುಭುಜಗಳು, ಹೆಗಲುಗಳು, ಕಂಠ, ಹೃದಯ, ನಾಭಿ, ಮೊಣಕೈ ಕೀಲುಗಳಿಗೆ ಲೇಪಿಸಬೇಕು ।।೫೪।।

ಮುಂಗೈಗೆ (ಮಣಿಬಂಧ) ಬೆನ್ನಿಗೆ, ಕಿವಿಗಳಿಗೆ, ಹಚ್ಚಬೇಕು. ಯತಿಗಳಿಗೆ ಹಾಗೂ ವಿರಾಗಿಗಳಿಗೆ ಸರ್ವಾಂಗ ಭಸ್ಮಲೇಪನ ವಿಧಿಯನ್ನು ಹೇಳಲಾಗಿದೆ ।।೫೫।।

ತರ್ಜನೀ ಮಧ್ಯಮ ಅನಾಮಿಕವೆಂಬ ಈ ಮೂರು ಬೆರಳುಗಳಿಂದ ಭಸ್ಮವನ್ನು ಧರಿಸಬೇಕು ಮುನಿಗಳೇ! ಈ ಮೂರು ಬೆರಳುಗಳಿಂದ ಹಿಂದೆ ಹೇಳಿದ ಸ್ಥಾನಗಳಲ್ಲಿ ಹಚ್ಚಲು ಮೂರುರೇಖೆಗಳು ಉಂಟಾಗುತ್ತವೆ ಮಧ್ಯಮಾನಾಮಿಕಾಂಗುಷ್ಠಗಳೆಂಬ ಈ ಮೂರು ಬೆರಳುಗಳಿಂದ ಭಸ್ಮ ಧರಿಸಿದರೆ ಅದನ್ನು ತ್ರಿಪುಂಡ್ರವೆನ್ನುತ್ತಾರೆ ಈ ಮೂರು ರೇಖೆಗಳಿಗೂ ಪ್ರತ್ಯೇಕವಾಗಿ ಒಂಬತ್ತು ದೇವತೆಗಳಿರುತ್ತಾರೆ ।।೫೬-೫೮।।

ಮೂರು ರೇಖಾತ್ಮಕವಾದ ತ್ರಿಪುಂಡ್ರ ಭಸ್ಮದಲ್ಲಿಯ ಮೊದಲನೆಯ ರೇಖೆಯು – ಋಗ್ವೇದ, ಕ್ರಿಯಾಶಕ್ತಿ, ಪ್ರಾತಃಸವನ, ಅಕಾರ, ಪೃಥ್ವೀತತ್ತ್ವ, ಗಾರ್ಹಪತ್ಯ, ರಜೋಗುಣ, ಮನಸ್ಸು– ಇವುಗಳ ಸ್ವರೂಪವಾಗಿದ್ದು ಇದಕ್ಕೆ ಮಹಾದೇವನು ದೇವತೆಯಾಗಿದ್ದಾನೆ ।।೫೯।।

ಎರಡನೆಯ ರೇಖೆಯು – ದಕ್ಷಿಣಾಗ್ನಿ, ಉಕಾರ, ಆಕಾಶತತ್ತ್ವ, ಯಜುರ್ವೇದ, ಮಾಧ್ಯಂದಿನ ಸವನ, ಇಚ್ಛಾಶಕ್ತಿ, ಸತ್ತ್ವ, ಅಂತರಾತ್ಮ ಇವುಗಳ ಸ್ವರೂಪವಾಗಿದ್ದು ಇದರ ದೇವತೆ ಮಹೇಶ್ವರನಾಗಿದ್ದಾನೆ. ।।೬೦।।

ಮೂರನೆಯ ರೇಖೆಯು – ಸಾಮವೇದ, ಜ್ಞಾನಶಕ್ತಿ, ಸಾಯಂಸವನ, ಆಹವನೀಯ, ಮಕಾರ, ಪರಮಾತ್ಮ, ತಮೋಗುಣ, ಹಗಲು, ಇವುಗಳ ಸ್ವರೂಪವಾಗಿದ್ದು, ಶಿವನು ದೇವತೆಯಾಗಿದ್ದಾನೆ (ಉಳಿದ ಎಂಟು ಪದಾರ್ಥಗಳು ಅಧಿದೇವತೆಗಳಾಗಿವೆ ) ।।೬೧-೬೨।।

ಮೊದಲು ಆ ದೇವತೆಗಳನ್ನು ನೆನೆದು ಭಕ್ತಿಯಿಂದ ನಮಿಸಿ ತ್ರಿಪುಂಡ್ರವನ್ನು ಧರಿಸಿದರೆ ಆತನು ಶಿವನೆಂದೇ ಕರೆಯಲ್ಪಡುವನು ।।೬೩।।

ದ್ವಿಜರೇ! ಮೂರು ವರ್ಣದವರಿಗೆ ಮಾತ್ರ ಈ ತ್ರಿಪುಂಡ್ರಧಾರಣೆಯನ್ನು ಯಥಾವಿಧಿ ಹೇಳಲಾಗಿದೆ ಇತರರಿಗೆ ಮಂತ್ರವಿಲ್ಲದೇ ಕೇವಲ ಧಾರಣೆಯನ್ನು ವಿಧಿಸಲಾಗಿದೆ. ।।೬೪।।

ಭಸ್ಮದಿಂದ ವಿಧಿವತ್ತಾಗಿ ತ್ರಿಪುಂಡ್ರವನ್ನು ಧರಿಸುವವನು ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ, ಯಾರಾದರೂ ಆಗಿರಲಿ ಆತನಿಗೆ ಮಹಾಪಾತಕ, ಉಪಪಾತಕ ಗಳಾವುವೂ ತಟ್ಟುವುದಿಲ್ಲ. ದುಷ್ಟಗ್ರಹಗಳ ಪೀಡೆಯಿರುವುದಿಲ್ಲ ಪಿಶಾಚ ರಾಕ್ಷಸರ ಉಪಟಳವಿರದು. ।।೬೫-೬೬।।

ಸರ್ವದೇವಮಯಿೂ ತಸ್ಯ ಸರ್ವತೀರ್ಥಮಯೀ ತನುಃ ।
ಭಸಿತಂ ಯಸ್ಯಭಾಲೇಽಸ್ತಿ ಮೋಕ್ಷಶ್ರೀಹಸಿತಂ ಹಿತಮ್ ॥೬೭॥

ಊರ್ಧ್ವಪುಂಡ್ರಂ ತ್ರಿಪುಂಡ್ರಂ ಚ ಯೋ ಭಾಲೇ ಧಾರಯೇದ್ದ್ವಿಜಃ ।
ಮುನೇ ಸ ಏವ ವಿಜ್ಞೇಯೋ ಹರಿಶ್ಚ ಹರ ಏವ ಚ ॥ ॥೬೮॥

ತ್ರಿಪುಂಡ್ರಧಾರಣಂ ದೃಷ್ಟ್ವಾ ಜ್ವಲಿತಂ ಯಸ್ಯ ಮಾನಸಮ್ ।
ಸ ಮುನೇ! ನರಕಂ ಯಾತಿ ದಶಪೂರ್ವೈರ್ದಶಾಪರೈಃ ॥೬೯॥

ಭಾಲಂ ತ್ರಿಪುಂಡ್ರಧವಲಂ ರುದ್ರಾಕ್ಷಂ ಯಸ್ಯ ಕಂಕಣಃ ।
ಹೃದಿ ಶಂಭುರ್ಮುಖೇ ನಾಮ ನ ಸಾಕ್ಷಾಚ್ಛಿವ ಉಚ್ಯತೇ ॥೭೦॥

ಯಸ್ಯೋರ್ಧ್ವಪುಂಡ್ರಯುಗ್ಭಾಲಂ ಕಮಲಾಕ್ಷ ಉರಸ್ಥಲೇ ।
ಹೃದಿ ವಿಷ್ಣುರ್ಮುಖೇ ನಾಮ ನ ಸಾಕ್ಷಾದ್ಧರಿರೇವ ಹಿ ॥೭೧॥

ತುಲಸೀಕಾಷ್ಠಮಾಲಾ ಚ ತುಲಸೀದಲಭಕ್ಷಣಮ್ ।
ಶೂದ್ರಾದೀನಾಮಯಂ ಧರ್ಮಸ್ತಪ್ತಮುದ್ರಾಂಕನಂ ತಥಾ ॥೭೨॥

ಗಂಗಾಯಮುನಯೋ ರೋಧಾವನ್ಯೋಽನ್ಯಂ ಮಿಲಿತೌ ಯಥಾ ।
ತಥಾ ಯಾವೈಕಮತ್ಯಾ ತೌ ಜ್ಞೇಯೌ ಶ್ರೀಶೈವವೈಷ್ಣವೌ ॥೭೩॥

ಆಖುಮಾರ್ಜಾರವದ್ಯತ್ರ ದ್ವೇಷಿಣೌ ಶೈವವೈಷ್ಣವೌ ।
ತದ್ರಾಷ್ಟ್ರಂ ನಾಶಮಾಪ್ನೋತಿ ತಾವುಭಾವಪಿ ನಶ್ಯತಃ ॥೭೪॥

ತಯೋಃ ಸಂದರ್ಶನಾದನ್ಯೇ ಪಾಪಿನೋಽಪಿ ಪುನಂತಿ ಹಿ ।
ತದ್ರಾಷ್ಟ್ರಂ ಕ್ಷೇಮಮಾಪ್ನೋತಿ ಯತ್ರ ಸಚ್ಛೈವವೈಷ್ಣವೌ ॥೭೫॥

ಹರಿಂ ಹರಂ ವಿಧಾತಾರಂ ಯಃ ಪಶ್ಯೇದೇಕರೂಪಿಣಮ್ ।
ನ ಏವ ಶಾಸ್ತ್ರಂ ಜಾನಾತಿ ಭೇದದೃಗ್ ಯಃ ಸ ಪಾಮರಃ ॥೭೬॥

ಸರ್ವೋತ್ತಮೋ ನೇಶ ಈಶ ಈಶಃ ಶ್ರೇಷ್ಠೋ ನ ಮಾಧವಃ ।
ಇತಿ ಚಿಂತಯತೋರ್ನೈವ ಪಾಪಿನೋರಸ್ತಿ ಸದ್ಗತಿಃ ॥೭೭॥

ಸಗುಣಾಲಂಬನಂ ಕಾರ್ಯಂ ಮನಃಸ್ಥೈರ್ಯಾಯ ಸಾಧಕೈಃ ।
ವೈಷ್ಣವಂ ವಾಽಸ್ತು ಶೈವಂ ವಾ ಕೋಽಟಿರ್ನಾತ್ರ ದುರಾಗ್ರಹಃ ॥೭೮॥

ಇತ್ಯೇತತ್ಕಥಿತಂ ತುಭ್ಯಂ ರಹಸ್ಯಂ ವೈದಿಕಂ ಮಯಾ ।
ಅಯಮೇವ ಸದಾಚಾರೋ ದುರಾಚಾರೋ ಹ್ಯತೋಽನ್ಯಥಾ ॥೭೯॥

ಲಲಾಟದಲ್ಲಿ ಭಸ್ಮ ಧ ಿಸವನ ದೇಹವು ಸರ್ವದೇವಮಯವೂ, ಸರ್ವ ತೀರ್ಥಮಯವೂ ಆಗುವುದು ಆತನಿಗ ಮೋಕ್ಷಾನುಭವವುಂಟಾಗುವುದು ।।೬೭।।

ಸುಮೇಧ! ಲಲಾಟದಲ್ಲಿ ತ್ರಿಪುಂಡ್ರವನ್ನು ಮತ್ತು ಊರ್ಧ್ವಪುಂಡ್ರವನ್ನು ಧರಿಸಿದವನು ಹರ ಅಥವಾ ಹರಿ ಎಂದೇ ಕೀರ್ತಿತನಾಗುತ್ತಾನ ।।೬೮।।

ಭಸ್ಮತ್ರಿಪುಂಡ್ರಧಾರಿಯನ್ನು ನೋಡಿ ದ್ವೇಷದಿಂದ ಮನಸ್ಸು ಕುದಿಯುವವನಿಗೆ ನರಕವೇ ಗತಿ ಆತನ ಹಿಂದಿನ ಹತ್ತು ನಂತರದ ಹತ್ತು ತಲಮಾರುಗಳೂ ನರಕ ಹೊಂದುವರು ಹಣೆಯಲ್ಲಿ ಭಸ್ಮತ್ರಿಪುಂಡ್ರ, ಕರಗಳಲ್ಲಿ ರುದ್ರಾಕ್ಷಿಯ ಕಡಗ, ಹೃದಯದಲ್ಲಿ ಪರಶಿವನ ಸ್ವರೂಪ, ಮುಖದಲ್ಲಿ ಆತನ ನಾಮ, ಇವುಗಳಿರುವವನು ಸಾಕ್ಷಾತ್ ಪರಮೇಶ್ವರನೆಂದೇ ಕರೆಯಲ್ಪಡುತ್ತಾನ. ।।೬೯–೭೦।।

ಲಲಾಟದಲ್ಲಿ ಊರ್ಧ್ವಪುಂಡ್ರ, ಕೊರಳೊಳು ಕಮಲಾಕ್ಷಮಾಲ, ಹೃದಯದಲ್ಲಿ ಶ್ರೀಹರಿಯ ದಿವ್ಯರೂಪ, ಮುಖದಲ್ಲಿ ಶ್ರೀಹರಿಯ ನಾಮ, ಇವುಗಳಿರುವವನು ಸಾಕ್ಷಾತ್ ಶ್ರೀಹರಿಯೆನಿಸುತ್ತಾನೆ. ।।೭೧।।

ತುಲಸೀ ಕಟ್ಟಿಗೆಯಿಂದ ಮಾಡಿದ ಮಣಿ ಸರವನ್ನು ಧರಿಸುವದು, ತುಳಸೀ ದಳವನ್ನು ಭಕ್ಷಿಸುವದು, ತಪ್ತಮುದ್ರೆಯನ್ನು ಧರಿಸುವುದು, ಇವುಗಳು ಏಕಜಾತಿಯವರ ಧರ್ಮವಾಗಿದೆ ।।೭೨।।

ಗಂಗಾಯಮುನಾ ನದಿಗಳ ತೀರಗಳು ಪರಸ್ಪರ ಮಿಲಿತವಾಗಿರುವಂತ ಅನ್ಯೋನ್ಯ ವಾಗಿ ಏಕಮತದಿಂದ ಇರುವವರ ನಿಜವಾದ ಶೈವ ವೈಷ್ಣವರು ।।೭೩।।

ಇಲಿ ಬೆಕ್ಕುಗಳಂತೆ ಪರಸ್ಪರ ಕಚ್ಚಾಡುವ ಶೈವ ವೈಷ್ಣವರು ನಾಶವಾಗುತ್ತಾರ ಅವರಿಂದಾಗಿ ಅವರು ವಾಸಿಸುವ ನಗರವೂ ಹಾಳಾಗುತ್ತದೆ ।।೭೪।।

ಪಾರಮಾರ್ಥಿಕ ಶೈವ ವೈಷ್ಣವರ ದರ್ಶನದಿಂದ ಇತರರ ಪಾಪಗಳು ಪರಿಹಾರಗೊಳ್ಳುವವು. ಅವರಿರುವ ದೇಶವು ಸುಭಿಕ್ಷವಾಗಿರುತ್ತದೆ ।।೭೫।।

ಶಾಸ್ತ್ರಪರಿತ ಜ್ಞಾನಿಯು ಹರಿಹರ ಬ್ರಹ್ಮರನ್ನು ಸಮಾನವಾಗಿ ಕಾಣುತ್ತಾನ ಅವರನ್ನು ಪರಸ್ಪರ ಭೇದ ಬುದ್ಧಿಯಿಂದ ನೋಡುವವನು ಪಾಮರನು ।।೭೬।।

ಹರನಿಗಿಂತ ಹರಿಯೆ ಸರ್ವೋತ್ತಮನು ಅಥವಾ ಹರಿಗಿಂತ ಹರನೇ ಸರ್ವೋತ್ತಮ ನೆಂದು ಪರಸ್ಪರ ವಿರುದ್ಧ ಚಿಂತಿಸುವ ಪಾಪಿಗಳಿಗ ಸದ್ಗತಿಯೇ ಇಲ್ಲ ।।೭೭।।

ಮಾನಸಿಕ ಸ್ಥೈರ್ಯವನ್ನು ಗಳಿಸಲು ಸಾಧಕನು ಮೊದಲು ಸಗುಣೋಪಾಸನ ಯನ್ನು ಮಾಡಬೇಕು ಶ್ರೀಹರಿಯ ಅಥವಾ ಶಂಕರನ ಉಪಾಸನಯನ್ನಾದರೂ ಮಾಡಬಹುದು ಇದರಲ್ಲಾವ ದುರಾಗ್ರಹವೂ ಇಲ್ಲ ಸುಮೇಧ! ಈ ರೀತಿಯಿರುವ ವೈದಿಕ ರಹಸ್ಯವನ್ನು ನಿನಗೆ ಹೇಳಿದ. ಇದೇ ಸದಾಚಾರ ದುರಾಚಾರವು ಇದರ ವಿರುದ್ಧವಾಗಿರುತ್ತದೆ. ।।೭೮–೭೯।।

ವಾಮದೇವ ಉವಾಚ –

ಕಚ್ಚಿದೇತಚ್ಛ್ರುತಂ ದೈತ್ಯಾ ಯುಷ್ಮಾಭಿರ್ಮುಕ್ತಿಮೀಪ್ಸುಭಿಃ ।
ಕಚ್ಚಿದಜ್ಞಾನಸಂಮೋಹಃ ಪ್ರಣಷ್ಟೋ ವಶ್ಚಿರಾಶ್ರಿತಃ ॥೮೦॥

ದೈತ್ಯಾ ಊಚುಃ –

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಹಾಮುನೇ ।
ಸ್ಥಿತಾಃ ಸ್ಮೋ ಗತಸಂದೇಹಾಃ ಕರಿಷ್ಯಾಮೋ ವಚಸ್ತವ ॥೮೧॥

ವಾಮದೇವ ಉವಾಚ –

ಮುನೇ! ಸುಮೇಧ ಏತತ್ತೇ ಕಥಿತಂ ಧರ್ಮಲಕ್ಷಣಮ್ ।
ರಹಸ್ಯಂ ಸರ್ವಶಾಸ್ತ್ರಾಣಾಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೮೨॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ
ಕ್ರತುಪುರಮಾಹಾತ್ಮ್ಯೇ
ಧರ್ಮಲಕ್ಷಣಕಥನಂ ನಾಮ ತ್ರಯೋದಶೋಽಧ್ಯಾಯಃ

ವಾಮದೇವರೆಂದರು –

ದೈತ್ಯರೇ ! ಮುಕ್ತಿಯನ್ನಿಚ್ಛಿಸುವ ನೀವು ಈಗ ಹೇಳಿದ್ದನ್ನು ಕೇಳಿದಿರೇನು? ಬಹಳ ಕಾಲದಿಂದ ನಿಮ್ಮಲ್ಲಿದ್ದ ಅಜ್ಞಾನ ಮೋಹವು ತೊಲಗಿತಷ್ಟೇ? ।।೮೦।।

ದೈತ್ಯರು ಹೇಳಿದರು –

ಮಹರ್ಷಿಗಳೇ! ನಿಮ್ಮ ಅನುಗ್ರಹದಿಂದ ಮೋಹವಳಿದು ಜ್ಞಾನಿಗಳಾದೆವು. ಇದೀಗ ನಾವು ಸಂಶಯರಹಿತರಾಗಿದ್ದೇವೆ ನಿಮ್ಮ ಮಾತನ್ನು ಪಾಲಿಸುತ್ತೇವೆ. ।।೮೧।।

ವಾಮದೇವರೆಂದರು –

ಸುಮೇಧ ಮುನಿಯೇ! ಸಕಲ ಶಾಸ್ತ್ರಗಳ ರಹಸ್ಯವಾದ ಈ ಧರ್ಮಲಕ್ಷಣ ವನ್ನು ಹೇಳಿದ್ದೇನೆ. ಮತ್ತೆ ಕೇಳಲಿಚ್ಛಿಸುವಿರೇನು? ।।೮೨।।

ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ
ಕ್ರತುಪುರಮಾಹಾತ್ಮ್ಯೆಯಲ್ಲಿ
ಧರ್ಮಲಕ್ಷಣಕಥನವೆಂಬ ಹದಿಮೂರನೆಯ ಅಧ್ಯಾಯವು ಮುಗಿಯಿತು.

# ಅಥ ಚತುರ್ದಶೋಽಧ್ಯಾಯಃ

**ಸುಮೇಧಾ ಉವಾಚ –**

ಶ್ರುತಮೇತತ್ತ್ವಯಾ ಪ್ರೋಕ್ತಂ ಸದಾಚಾರಸ್ಯ ಲಕ್ಷಣಮ್ ।
ಇದಾನೀಂ ಶ್ರೋತುಮಿಚ್ಛಾಮಿ ತತ್ತ್ವಜ್ಞಾನಂ ಪ್ರಶಾಧಿ ಮಾಮ್ ॥೧॥

**ವಾಮದೇವ ಉವಾಚ –**

ಮುನೇ ಸುಮೇಧಃ ಪೃಷ್ಟಂ ತೇ ಯದೇತಜ್ ಜ್ಞಾನಮುತ್ತಮಮ್ ।
ಶ್ರೋತವ್ಯಸ್ಯ ಸಮಗ್ರಸ್ಯ ಸಮಾಪ್ತಿರ್ಯತ್ರ ಜಾಯತೇ ॥೨॥

ತತ್ತುಭ್ಯಂ ಸಂಪ್ರವಕ್ಷ್ಯಾಮಿ ಸಮಾಹಿತಮನಾಃ ಶೃಣು ।
ಏತಸ್ಯ ವತ್ಸ! ಜ್ಞಾನಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥೩॥

ಬಹೂನಾಂ ಜನ್ಮನಾಂ ವಿಪ್ರ! ಸಾಧನಾಭ್ಯಾಸಪಾಕತಃ ।
ಅಂತೇ ವಿವಿದಿಷಾ ಜ್ಞಾನೇ ಜಾಯತೇ ಸುವಿರಾಗತಃ ॥೪॥

ಮಯಾಽನುಭೂತಾ ಆಯುಸ್ಯ ಕೋಟಿಶೋ ಹಿ ಪುರಃ ಪುರಾ।
ನಾನಾವಿಧಾ ದುರ್ವಿಭೇಧ್ಯಾ ದುರ್ಜೇಯಾ ಅಕೃತಾತ್ಮಭಿಃ ॥೫॥

ಮನುರಾಸಂ ಸೂರ್ಯ ಆಸಂ ಕಕ್ಷೀವಾನಭವಂ ಮುನಿಃ ।
ನಾನಾವಿಧಾನಾಂ ದೇವಾನಾಂ ಜನ್ಮಾನ್ಯದ್ರಾಕ್ಷಮಪ್ಯಹಮ್ ॥೬॥

ಏಕೇನಾನುಗೃಹೀತೋಽಹಂ ಕೇನಚಿತ್ಸುಮಹಾತ್ಮನಾ ।
ಪ್ರತಿಬುದ್ಧಃ ಪ್ರಪಶ್ಯಾಮಿ ವಿಶ್ವಂ ಮಯ್ಯೇವ ಕಲ್ಪಿತಮ್ ॥೭॥

ಸ್ಮಾರಂ ಸ್ಮಾರಮಹಂ ತಾನಿ ದುಃಸ್ವಪ್ನರಚಿತಾನಿ ತು ।
ಜನ್ಮಾನಿ ವಿಸ್ಮಯಂ ಯಾಮಿ ಸಮಾಧೇರುತ್ಥಿತಃ ಕ್ಷಣಮ್ ॥೮॥

**ಸುಮೇಧಾ ಉವಾಚ –**

ಭಗವನ್ನವಧಾರ್ಯೇದಂ ತವ ವಾಕ್ಯಂ ಮಹಾರ್ಥವತ್ ।
ತತ್ತ್ವಜ್ಞಾನೇ ನಿರಾಶೋಽಸ್ಮಿ ಮಾದೃಶಸ್ತತ್ರ ಕಾ ಗತಿಃ ॥೯॥

ಯಥಾ ವ್ಯೋಮ್ನಿ ನ ಗಾಹೇತ ಸರ್ವಥಾಽ ಜಾತಪಕ್ಷಕಃ ।
ತಥಾ ಬ್ರಹ್ಮಣ್ಯನಿರ್ದೇಶ್ಯೇ ಸಂಸಾರೀ ಮಾದೃಶಃ ಕ್ವಚಿತ್ ॥೧೦॥

ಯಶ್ಚ ಮೂಢತಮೋ ಲೋಕೇ ಯಶ್ಚ ಬುದ್ಧೇಃ ಪರಂಗತಃ ।
ದ್ವಾವೇತೌ ಸುಖಮೇಧೇತೇ ಕ್ಲಿಶ್ಯತ್ಯಂತರಿತೋ ಜನಃ ॥೧೧॥

# ಹದಿನಾಲ್ಕನೆಯ ಅಧ್ಯಾಯ

**ಸುಮೇಧನು ಹೇಳಿದನು –**

ಮಹರ್ಷಿಗಳೇ! ತಾವು ತಿಳಿಸಿದ ಸದಾಚಾರ ಲಕ್ಷಣವನ್ನರಿತೆನು ಇದೀಗ ತತ್ತ್ವಜ್ಞಾನವರಿಯಲು ಉತ್ಸುಕನಾಗಿದ್ದೇನೆ ಅದನ್ನು ದಯಮಾಡಿ ತಿಳಿಸಿರಿ ।।೧।।

**ವಾಮದೇವರು ಹೇಳಿದರು –**

ಸುಮೇಧ! ಸಮಗ್ರ ಪ್ರಶ್ನೆಗಳಿಗೆ ಉತ್ತರ ದೊರಕುವುದೇ ಈ ತತ್ತ್ವಜ್ಞಾನದಲ್ಲಿ ಅದನ್ನೇ ನೀನೀಗ ಕೇಳಿರುವಿ. ।।೨।।

ಸುಮೇಧ! ಆ ಜ್ಞಾನವನ್ನು ನಿನಗೀಗ ಬೋಧಿಸುವೆ ಸಾವಧಾನದಿಂದ ಕೇಳು. ಈ ಜ್ಞಾನವನ್ನು ಕೇಳುವವರೂ, ಬೋಧಿಸುವವರೂ ಬಹಳ ವಿರಳ ।।೩।।

ವಿಪ್ರ! ಅನೇಕ ಜನ್ಮಗಳ ಸಾಧನೆ, ಅಭ್ಯಾಸ, ವೈರಾಗ್ಯ, ಇವುಗಳಿಂದ ತತ್ತ್ವ ವರಿಯಬೇಕೆಂಬ ಜಿಜ್ಞಾಸೆಯು ಉದ್ಭವಿಸುವುದು. ।।೪।।

ಈ ಹಿಂದೆ ಅಜ್ಞಾನಿಗಳಿಂದ ಗೆಲ್ಲಲು ಅಶಕ್ಯವಾದ ಮತ್ತು ಅವುಗಳ ರಹಸ್ಯವನ್ನು ತಿಳಿಯಲು ಅಸಾಧ್ಯವಾದ ಕೋಟಿಗಟ್ಟಲೇ ಶರೀರಗಳನ್ನು ನಾನು ಅನುಭವಿಸಿರುವೆನು ।।೫।।

ನಾನು ಮನುವಾಗಿದ್ದೆ ನಾನೇ ಸೂರ್ಯ, ಕಕ್ಷೀವಂತ ಆಗಿದ್ದೆ ನಾನು ವಿವಿಧ ದೇವತೆಗಳ ಜನ್ಮಗಳನ್ನು ಕಂಡಿರುವೆ. ।।೬।।

ಮಹಾತ್ಮರೋರ್ವರ ವರಮಾನುಗ್ರಹದಿಂದ, ಬೋಧನೆಯಿಂದ, ಈ ವಿಶ್ವವು ನನ್ನಲ್ಲಿಯೇ ಕಲ್ಪಿತವಾಗಿದೆಯೆಂದು ತಿಳಿದಿದ್ದೇನೆ ।।೭।।

ಸಮಾಧಿಯಿಂದ ಬಹಿರ್ಮುಖನಾದ ಕೆಲಸಮಯ ದುಃಸ್ವಪ್ನ ರಚಿತವಾದಂತೆ ಇರುವ ಈ ಜನ್ಮಗಳನ್ನು ನೆನೆನೆನೆದು ವಿಸ್ಮಯಗೊಳ್ಳುತ್ತೇನ ।।೮।।

**ಸುಮೇಧ ಹೇಳಿದನು –**

ಮಹರ್ಷಿಗಳೇ ! ಅರ್ಥಗರ್ಭಿತವಾದ ನಿಮ್ಮ ಈ ಮಾತನ್ನು ಕೇಳಿ ತತ್ತ್ವಜ್ಞಾನ ಪ್ರಾಪ್ತಿಯಾಗುವುದಿಲ್ಲವೆಂದು ನಿರಾಶೆಗೊಂಡಿದ್ದೇನೆ. ನನ್ನಂತಹವರು ಈ ಜ್ಞಾನಮಾರ್ಗದಲ್ಲಿ ಹೇಗೆ ಮುಂದುವರೆಯಬಲ್ಲರು? ।।೯।।

ರೆಕ್ಕೆಗಳೇ ಹುಟ್ಟದ ಹಕ್ಕಿಗಳಿಗೆ ಗಗನದಲ್ಲಿ ಹಾರಲು ಬಾರದ ಹಾಗೆ ಸಂಸಾರಿಯಾದ ನನ್ನಂತಹವರಿಗೆ ಬೇರಾರೂ ತಿಳಿಸದೇ ಬ್ರಹ್ಮವಿಚಾರ ಮಾಡಲು ಹೇಗ ಬರುತ್ತದೆ? ಲೋಕದಲ್ಲಿ ಅತಿಮೂಢರು ಹಾಗೂ ವಿದ್ಯಾಪಾರಂಗತರಾದ ಪಂಡಿತರು ಈ ಇಬ್ಬರೇ ಸುಖವನ್ನು ಹೊಂದುವರು ಆದರೆ ಇವರ ನಡುವೆ ಇರುವ ಸಾಮಾನ್ಯರು ಕಷ್ಟ ಪಡುತ್ತಾರೆ ।।೧೦–೧೧।।

ದಯಾಂ ಕುರು ಮಹಾಭಾಗ ತ್ವಾಮಹಂ ಶರಣಂ ಗತಃ ।
ಸಂಸಾರದುಃಖಜಲಧೇರ್ಮಾಮುದ್ಧರ್ತುಂ ತ್ವಮರ್ಹಸಿ ॥೧೨॥

ವಾಮದೇವ ಉವಾಚ –

ಅಧಿಕಾರ್ಯಸಿ ಮಾ ಭೈಷೀರ್ನಿರ್ವಿಣ್ಣೋಽಸಿ ಮಹಾಮತೇ ।
ಉಪದೇಕ್ಷ್ಯಾಮಿ ತೇ ಜ್ಞಾನಂ ಯೇನ ಪ್ರಾಪ್ಸ್ಯಸಿ ನಿರ್ವೃತಿಮ್ ॥೧೩॥

ಆತ್ಮಾಽವ್ಯಯಃ ಸ್ವತಃಸಿದ್ಧಃ ಶುದ್ಧೋ ಬುದ್ಧಃ ಸನಾತನಃ ।
ನಿರಂಜನೋ ನಿರ್ವಿಕಲ್ಪಃ ಸಚ್ಚಿದಾನಂದಲಕ್ಷಣಃ ॥೧೪॥

ಅನಾದಿಮಾಯಾಕಾರ್ಯಸ್ಯ ಜಗತೋಽಸ್ಯಾಶ್ರಯಃ ಪರಃ ।
ದೇಶಕಾಲಾನವಚ್ಛಿನ್ನೋ ಹೀನಃ ಸ್ವಗತಭೇದತಃ ॥೧೫॥

ಮಾಯಯೇಶ್ವರತಾಂ ಪ್ರಾಪ್ತೋಽವಿದ್ಯಯಾ ಜೀವತಾಂ ಗತಃ ।
ತೂಲಾವಿದ್ಯಾಬಹುತ್ವೇನ ಜೀವಾಶ್ಚ ಬಹವೋಽಭವನ್ ॥೧೬॥

ಪ್ರವಾಹೋಽಯಮನಾದಿಸ್ತು ನ ಕದಾಚಿದನೀದೃಶಃ ।
ಊರ್ಧ್ವಮೂಲಮಧಃ ಶಾಖಮಿತೀದಂಪ್ರಭುರವ್ಯಯಃ ॥೧೭॥

ಮಹತ್ತತ್ವಮಹಂಕಾರೋ ಮಹಾಭೂತಾನಿ ಷೋಡಶ ।
ಏವಂ ಹ್ಯಮೀ ವಿಕಾರಾಶ್ಚ ಲಿಂಗಮೇತತ್ಕೃತಂ ವಪುಃ ॥೧೮॥

ಏತೈರೇವ ವಪುಃ ಸ್ಥೂಲಂ ಪಂಚೀಕರಣತಾಂ ಗತೈಃ ।
ಜಾಯತೇ ವಿವಿಧಂ ತಚ್ಚ ಷಡ್ವಿಕಾರಿ ಷಡೂರ್ಮಿ ತತ್ ॥೧೯॥

ಆಮೋಕ್ಷವ್ಯಾಪಿ ಲಿಂಗಾಖ್ಯಂ ವಪುಸ್ತದ್ವಾಸನಾಮಯಮ್ ।
ಜೀವೋಪಾಧಿರಿತಿ ಪ್ರೋಕ್ತಂ ತದ್ಭಂಗೋ ಮೋಕ್ಷ ಉಚ್ಯತೇ ॥೨೦॥

ಅನಾದಿಲಿಂಗದೇಹಾನಿ ತಸ್ಮಾಜ್ಜೀವಾ ಅನಾದಯಃ ।
ಮಾಯಾಽನಾದಿರ್ಯತಸ್ತಸ್ಮಾದನಾದಿಃ ಪರಮೇಶ್ವರಃ ॥೨೧॥

ಕಾರ್ಯೋಪಾಧಿರಯಂ ಜೀವಃ ಕಾರಣೋಪಾಧಿರೀಶ್ವರಃ ।
ಅವಿದ್ಯಾಯಾಸ್ತು ಕಾರ್ಯತ್ವಂ ಗೌಣಮಿತ್ಯೇವ ನಿರ್ಣಯಃ ॥೨೨॥

ಲಿಂಗದೇಹಾಭಿಮಾನೋ ಯಃ ಸೋಽವಿದ್ಯಾಗ್ರಂಥಿರುಚ್ಯತೇ ।
ಲಿಂಗದೇಹಾಭಿಮಾನೇನ ಜೀವೋ ದುಃಖಾನ್ಯುಪಾಶ್ನುತೇ ॥೨೩॥

ಮಹಾನುಭಾವ! ವಾಮದೇವ! ನಿಮ್ಮನ್ನೇ ಶರಣು ಹೊಂದಿದ್ದೇನೆ ದಯೆತೋರಿರಿ. ಸಂಸಾರದುಃಖವೆಂಬ ಸಾಗರದಿಂದ ಉದ್ಧರಿಸಲು ನೀವೇ ಸಮರ್ಥರಿರುವಿರಿ ||೧೨||

**ವಾಮದೇವರೆಂದರು –**

ಸುಮೇಧ! ಹೆದರದಿರು ಜ್ಞಾನವನ್ನು ಪಡೆಯಲ್ಲು ನೀನು ಅರ್ಹನಿರುತ್ತಿ, ವಿಷಾದಿಸದಿರು ಮೋಕ್ಷಸಾಧನವಾದ ಜ್ಞಾನವನ್ನು ನಿನಗೆ ಬೋಧಿಸುತ್ತೇನೆ. ||೧೩||

ಅವಿನಾಶಿಯಾದ ಆತ್ಮನು ಸ್ವತಃ ಸಿದ್ಧನಾಗಿದ್ದಾನೆ ಶುದ್ಧ ಬುದ್ಧ ಸ್ವರೂಪ ನಾದ ಆತನಿಗೆ ಯಾವ ವಿಕಾರವೂ ಇಲ್ಲದೇ ನಿರಂಜನ ಸಚ್ಚಿದಾನಂದ ಸ್ವರೂಪಿ ಯಾಗಿದ್ದಾನೆ. ||೧೪||

ಅನಾದಿಯಾದ ಅವಿದ್ಯೆಯಿಂದ ಜನ್ಯವಾದ ಈ ಜಗತ್ತಿಗೆ ಆತ ಆಶ್ರಯನಾಗಿದ್ದಾನೆ ದೇಶ ಕಾಲಗಳಿಂದ ಹೊರತಾದ ಆತನಿಗೆ ತನ್ನಲ್ಲಿ ಯಾವ ಭೇದವೂ ಇಲ್ಲ ||೧೫||

ಈ ಆತ್ಮನೇ ಮಾಯೆಯಿಂದ ಈಶ್ವರನಾದರೆ ಅವಿದ್ಯೆಯಿಂದ ಜೀವನಾಗಿದ್ದಾನೆ. ತೂಲಾವಿದ್ಯೆಗಳು ಬಹಳವಿರುವ ಕಾರಣ ಜೀವರೂ ಅನೇಕರಿದ್ದಾರೆ ||೧೬||

ಈ ಪ್ರವಾಹವು ಅನಾದಿಯಿಂದಲೇ ಬಂದಿದೆ ಈ ಸಂಸಾರವೃಕ್ಷದ ಬೇರುಗಳು ಮೇಲ್ಮುಖವಾಗಿದ್ದರೆ ಅದರ ಶಾಖೆಗಳು ಕೆಳಗಿವೆ ಈ ರೀತಿಯ ಸಂಸಾರ ವೃಕ್ಷಕ್ಕೆ ಆತ್ಮನೇ ಪ್ರಭುವಾಗಿದ್ದಾನೆ ||೧೭||

ಮಹತ್ತತ್ತ್ವ–ಅಹಂಕಾರ–ಪಂಚಮಹಾಭೂತಗಳು ಮತ್ತು ಅನೇಕ ವಿಕಾರಗಳು ಇವುಗಳ ಮಿಶ್ರಣವೇ ಈ ಲಿಂಗಶರೀರವಾಗಿದೆ ||೧೮||

ಪಂಚೀಕರಣ ಹೊಂದಿದ ಈ ಮಹಾಭೂತಗಳಿಂದಲೇ ನಾನಾ ಬಗೆಯ ಸ್ಥೂಲದೇಹ ಹಾಗೂ ಷಡ್ವಿಕಾರ ಷಡೂರ್ಮಿಗಳು ಆಗುತ್ತವೆ ||೧೯||

ವಾಸನಾಪ್ರಚುರವಾದ ಈ ಲಿಂಗದೇಹವು ಅನಾದಿಯಾಗಿದ್ದು ಮೋಕ್ಷವಾದ ಕೂಡಲೇ ಇದರ ನಾಶವಾಗುತ್ತದೆ ||೨೦||

ಲಿಂಗದೇಹಗಳಿಗೆ ಆದಿಯೆಂಬುದೇ ಇಲ್ಲ. ಆದ್ದರಿಂದ ಜೀವರೂ ಅನಾದಿಗಳೇ ಆಗಿದ್ದಾರೆ. ಮಾಯೆಯೂ ಅನಾದಿಯಾದ ಕಾರಣ ಪರಮೇಶ್ವರನೂ ಆದಿರಹಿತ ನಾಗಿದ್ದಾನೆ. ||೨೧||

ಜೀವರಿಗೆ ತೂಲಾವಿದ್ಯೆಗಳೇ ಉಪಾದಿಗಳು ಮೂಲಾವಿದ್ಯೆಯು ಈಶ್ವರನ ಉಪಾಧಿಯಾಗಿದೆ ಕಾರ್ಯಗಳಿಗೆ ಜೀವನೂ, ಕಾರಣಗಳಿಗೆ ಪರಮೇಶ್ವರನೂ ಆಶ್ರಯ ರಾಗಿದ್ದಾರೆ. ಅವಿದ್ಯೆಗೆ ಕಾರ್ಯತ್ವವು ಗೌಣವಾಗಿದೆಯೆಂದು ಸಿದ್ಧಾಂತವಾಗಿದೆ ||೨೨||

ಲಿಂಗದೇಹಾಭಿಮಾನವನ್ನು ಅವಿದ್ಯಾಗ್ರಂಥಿಯೆಂದು ಹೇಳಲಾಗಿದೆ. ಈ ಲಿಂಗ ದೇಹಾಭಿಮಾನದಿಂದ ಜೀವನು ನಾನಾ ದುಃಖಗಳನ್ನು ಅನುಭೋಗಿಸು ತ್ತಾನೆ ||೨೩||

ಜೀವೇ ಹ್ಯಬ್ರಹ್ಮತಾಭ್ರಾಂತಿರ್ಬ್ರಹ್ಮಣ್ಯಾರೋಕ್ಷ್ಯವಿಭ್ರಮಃ ।
ನಿವಾರಯತಿ ಶಾಸ್ತ್ರೇಣ ಗುರುರೇತದ್ಭ್ರಮದ್ವಯಮ್ ॥೨೪॥

ಏತದ್ಭ್ರಮದ್ವಯಂ ಯಾವತ್ತಾವಜ್ಜೀವಸ್ಯ ಜೀವತಾ ।
ಯಾವಜ್ಜೀವಸ್ಯ ಜೀವತ್ವಂ ತಾವತ್ಸಂಸಾರಬಂಧನಮ್ ॥೨೫॥

ಆಕಾಶಸ್ಯ ಯಥಾಭೇದಸ್ತ್ರಿವಿಧೋ ದೃಶ್ಯತೇ ಜನೈಃ ।
ಮಹಾಕಾಶೋ, ಮಠಾಕಾಶೋ, ಘಟಾಕಾಶ, ಇತಿ ಸ್ಮೃತಃ ॥೨೬॥

ಏವಂ ವಿಶುದ್ಧಚೈತನ್ಯಮೀಶೋ ಜೀವ ಇತಿ ತ್ರಿಧಾ ।
ಬ್ರಹ್ಮಣೋ ದೃಶ್ಯತೇ ಭೇದ ಉಪಾಧಿಃ ಪರಿಕಲ್ಪಿತಃ ॥೨೭॥

ಯಥೈಕಸ್ಮಿನ್ ಮಠಾಕಾಶೇ ಘಟಾಕಾಶಾ ಅನೇಕಶಃ ।
ಮಠಾಕಾಶೋ ಘಟಾಕಾಶಾಂಸ್ತಾನ್ ಸರ್ವಾನ್ ವ್ಯಾಪ್ಯ ತಿಷ್ಠತಿ ॥೨೮॥

ತಾಂಶ್ಚ ಸರ್ವಾನ್ ಘಟಾಕಾಶಾನ್ ಮಠಾಕಾಶಂ ಚ ತಂ ಯಥಾ ।
ಅಭಿವ್ಯಾಪ್ಯ ಮಹಾಕಾಶೋಽನವಚ್ಛಿನ್ನೋ ಹಿ ತಿಷ್ಠತಿ ॥೨೯॥

ಏವಂ ಜೀವಾನಭಿವ್ಯಾಪ್ಯ ವರ್ತತೇ ಪರಮೇಶ್ವರಃ ।
ತಮೀಶ್ವರಮಭಿವ್ಯಾಪ್ಯ ವರ್ತತೇ ಬ್ರಹ್ಮ ನಿಷ್ಕಲಮ್ ॥೩೦॥

ಅಥೈಕಸ್ಮಿನ್ ಘಟೇ ನಷ್ಟೇ ನಷ್ಟಮಾಕಾಶಯೋರ್ದ್ವಯಮ್ ।
ಅನವಚ್ಛಿನ್ನ ಆಕಾಶಃ ಪೂರ್ಣ ಏವಾವಶಿಷ್ಯತೇ ॥೩೧॥

ಅನ್ಯೇ ತಥೈವ ತಿಷ್ಠಂತಿ ಜೀವಾ ಲಿಂಗವಶಾನುಗಾಃ ।
ಮಠಾಕಾಶೇ ಘಟಾಕಾಶಾ ಯಥಾ ತಿಷ್ಠಂತಿ ಚಾಽಪರೇ ॥೩೨॥

ಯಥಾ ಸ್ವಲಿಂಗಭಂಗೇಷು ಭಗ್ನೌ ಜೀವೇಶ್ವರಾವುಭೌ ।
ಏಕಮೇವಾಽದ್ವಿತೀಯಂ ಯತ್ತದ್ಬ್ರಹ್ಮೈವಾವಶಿಷ್ಯತೇ ॥೩೩॥

ನಿಃಶೇಷವಾಸನಾಹಾನಿರ್ಲಿಂಗಭಂಗಃ ಸ ಉಚ್ಯತೇ ।
ಧ್ಯಾನಮೇವ ಸದಾ ಕಾರ್ಯಂ ಲಿಂಗಭಂಗಮಭೀಪ್ಸುನಾ ॥೩೪॥

ವಿರೋಧಿನೀನಾಂ ವೃತ್ತೀನಾಂ ಕೃತ್ವಾ ನಿಃಶೇಷತಃ ಕ್ಷಯಮ್ ।
ಬ್ರಹ್ಮೈಕಾಕಾರವೃತ್ತಿರ್ಯಾ ಧಾರಣಾ ಧ್ಯಾನಶುದ್ಧಿತಃ ॥೩೫॥

ಧ್ಯಾನಂ ತು ಪಕ್ವತಾಂ ಪ್ರಾಪ್ತಂ ಸಮಾಧಿರಭಿಧೀಯತೇ ।
ಸವಿಕಲ್ಪವಿಕಲ್ಪಾಭ್ಯಾಂ ಸ ದ್ವಿಧಾ ಪರಿಕೀರ್ತಿತಃ ॥೩೬॥

ಧ್ಯಾತಾ ಧ್ಯೇಯಂ ತಥಾ ಧ್ಯಾನಂ ಯತ್ರೇದಂ ತ್ರಿತಯಂ ಸ್ಫುರೇತ್ ।
ಸ ವಿಕಲ್ಪಃ ಸವಿಜ್ಞೇಯಸ್ತನ್ನಾಶೇ ನಿರ್ವಿಕಲ್ಪಕಃ ॥೩೭॥

ಜೀವನಲ್ಲಿ ಅಬ್ರಹ್ಮತ್ವವಿರುತ್ತದೆಯೆಂದೂ, ಬ್ರಹ್ಮವು ಪ್ರತ್ಯಕ್ಷಕ್ಕೆ ಅಗೋಚರ ವೆಂದೂ ಎರಡು ಭ್ರಮೆಗಳಿರುತ್ತವೆ. ಈ ಭ್ರಮೆಗಳನ್ನು ಗುರುವು ಶಾಸ್ತ್ರ ಪ್ರಮಾಣಗಳಿಂದ ಹಾಗೂ ಉಪದೇಶದಿಂದ ನಿವಾರಿಸುತ್ತಾನೆ ।।೨೪।।

ಈ ಎರಡು ಭ್ರಮೆಗಳು ಜೀವನಲ್ಲಿರುವವರೆಗೆ ಜೀವತ್ವವಿರುತ್ತದೆ ಜೀವತ್ವವಿರುವವರೆಗೆ ಸಂಸಾರ ಬಂಧನವು ತಪ್ಪದು ।।೨೫।।

ಆಕಾಶವು ಏಕವಾಗಿದ್ದರೂ ಉಪಾಧಿ ಆಶ್ರಯ ಭೇದದಿಂದ 'ಮಹಾಕಾಶ, ಘಟಾಕಾಶ, ಮಠಾಕಾಶ ಎಂದು ಬೇರೆ ಬೇರೆಯಾಗಿ ವ್ಯವಹರಿಸುವಂತೆ ಪರಬ್ರಹ್ಮವು ಒಂದೇ ಆಗಿದ್ದರೂ ನಿತ್ಯಶುದ್ಧವಾದ ಚೈತನ್ಯ, ಈಶ್ವರ, ಜೀವ ಎಂದು ಉಪಾಧಿಗಳಿಂದಾಗಿ ಬೇರೆ ಬೇರೆಯಾಗಿ ತೋರುತ್ತದೆ ।।೨೬–೨೭।।

ಒಂದು ಮಠಾಕಾಶದಲ್ಲಿ ಅನೇಕ ಘಟಾಕಾಶಗಳಿರುತ್ತವೆ ಆ ಘಟಾಕಾಶ ಗಳನ್ನೆಲ್ಲ ಮಠಾಕಾಶವು ವ್ಯಾಪಿಸಿಕೊಂಡಿರುತ್ತದೆ ।।೨೮।।

ಈ ಘಟಾಕಾಶ ಮಠಾಕಾಶಗಳೆಲ್ಲವನ್ನೂ ಮಹಾಕಾಶವು ಏಕವಾಗಿ ವ್ಯಾಪಿಸಿ ಕೊಂಡಿರುತ್ತದೆ ।।೨೯।।

ಇದೇರೀತಿ ಪರಮೇಶ್ವರನು ಈ ಜೀವರನ್ನೆಲ್ಲ ಆವರಿಸಿಕೊಂಡಿರುತ್ತಾನ ಆ ಈಶ್ವರನನ್ನೂ ನಿರ್ಗುಣ ಬ್ರಹ್ಮವು ಆವರಿಸಿಕೊಂಡಿರುತ್ತದೆ ।।೩೦।।

ಒಂದು ಘಟವು ನಾಶ ಹೊಂದಿದರೆ ಅದರೊಂದಿಗೆ ಆಕಾಶ ಭೇದವೂ ಹೋಗಿ ಆಕಾಶವೊಂದೇ ಪರಿಪೂರ್ಣವಾಗಿ ಉಳಿಯುತ್ತದ ।।೩೧।।

ಅದೇ ರೀತಿ ಒಂದು ಲಿಂಗ ಭಂಗವಾದರೆ ಆ ಲಿಂಗೋಪಾಧಿಕ ಜೀವನು ಪರಬ್ರಹ್ಮನಲ್ಲಿ ಲೀನವಾದರೂ ಇತರ ಲಿಂಗೋಪಾಧಿಕ ಜೀವರು ಹಾಗೆಯೇ ಉಳಿಯುತ್ತಾರೆ. ।।೩೨।।

ಲಿಂಗದೇಹವು ನಷ್ಟಗೊಂಡೊಡನೆಯೇ ಆ ಜೀವನ ದೃಷ್ಟಿಯಿಂದ ಜೀವೇಶ್ವರರೂ ಲಯ ಹೊಂದುವರು. ಆಗ ಅದ್ವಿತೀಯವಾದ ಪರಬ್ರಹ್ಮ ವಸ್ತುವೊಂದೇ ಉಳಿಯುತ್ತದೆ. ಸಕಲವಾಸನೆಗಳೂ ಕ್ಷಯ ಹೊಂದುವುದನ್ನೇ 'ಲಿಂಗಭಂಗ'ವೆನ್ನಲಾಗಿದೆ. ಈ ಲಿಂಗಭಂಗ ವನ್ನು ಸಾಧಿಸ ಬೇಕೆನ್ನುವವರು ಅನವರತ ಧ್ಯಾನ ತತ್ಪರರಾಗಿರಬೇಕು ।।೩೩–೩೪।।

ವಿರುದ್ಧವಾದ ಮನೋವೃತ್ತಿಗಳನ್ನೆಲ್ಲ ಸಂಪೂರ್ಣವಾಗಿ ಕ್ಷಯಗೊಳಿಸಿ ಧ್ಯಾನ ಶುದ್ಧಿಯಿಂದ ಬ್ರಹ್ಮೈಕಾಕಾರ ವೃತ್ತಿಯನ್ನು ತಾಳುವುದೇ ಧಾರಣಾ ।।೩೫।।

ಧ್ಯಾನವು ಪರಿಪಕ್ವವಾದರೆ ಅದನ್ನು ಸಮಾಧಿಯೆನ್ನುವರು ಈ ಸಮಾಧಿಯು ಸವಿಕಲ್ಪಕ–ನಿರ್ವಿಕಲ್ಪಕ ಎಂದು ಎರಡು ವಿಧವಾಗಿದೆ ।।೩೬।।

ಧ್ಯಾನ, ಧ್ಯೇಯವಾದ ವಸ್ತು, ಧ್ಯಾನ ಮಾಡುವವನು, ಈ ಮೂರೂ ಇರುವುದೇ ಸವಿಕಲ್ಪಕ ಸಮಾಧಿ. ಇವುಗಳೆಲ್ಲ ಅಳಿದರೆ ನಿರ್ವಿಕಲ್ಪ ಸಮಾಧಿ ಎಂದು ತಿಳಿಯಬೇಕು ।।೩೭।।

ವಿವಿಕ್ತಭಾಙ್ಮಿತಾಹಾರೀ ಜಿತಸರ್ವೇಂದ್ರಿಯಾಸನಃ ।
ಧ್ಯಾಯೇದ್ಬ್ರಹ್ಮಾಹಮಸ್ಮೀತಿ ಪಂಚಕೋಶಾತಿಗೋ ಮುನಿಃ ॥೩೮॥
ಅಯಮನ್ನಮಯಃ ಕೋಶೋ ಜಡೋ ದೃಶ್ಯೋ ವಿಕಾರವಾನ್ ।
ನಾಹಂ ಯತೋಽಸ್ಯ ಸಾಕ್ಷೀಶೋ ನಿರ್ವಿಕಾರೋಽಸ್ಮಿ ಚೇತನಃ ॥೩೯॥
ಕೋಶಃ ಪ್ರಾಣಮಯೋ ನಾಹಂ ವಾಯುಭೇದೋ ವಿಕಾರವಾನ್ ।
ಪ್ರಾಣೋ ಮದೀಯ ಇತ್ಯಸ್ಯ ಸಾಕ್ಷಿತ್ವೇನ ವ್ಯವಸ್ಥಿತಃ ॥೪೦॥
ಮನೋಮಯೋಽಪಿ ಕೋಶೋ ಯಃ ಕಾಮಕ್ರೋಧಾದಿಮಾಂಶ್ಚಲಃ ।
ಶೋಕಮೋಹಾದಿಮಾಂಸ್ತಸ್ಯ ಸಾಕ್ಷೀ ನಾಹಂ ತದಾತ್ಮಕಃ ॥೪೧॥
ಯಸ್ಯ ತಾದಾತ್ಮ್ಯಮಾಪನ್ನಃ ಕರ್ಮಾಣಿ ತನುಯಾಮಹಮ್ ।
ಸ ವಿಜ್ಞಾನಮಯಃ ಕೋಶೋ ನಾಹಂ ಸಾಕ್ಷೀ ಯತಃ ಪೃಥಕ್ ॥೪೨॥
ಅಂತಃಕರಣವೃತ್ತ್ಯಾತ್ಮಾ ಯೋಽಹಂಕಾರಃ ಸುಷುಪ್ತಿಗಃ ।
ಸ ಆನಂದಮಯಃ ಕೋಶೋ ನಾಹಂ ಸಾಕ್ಷೀ ಯತಃ ಪೃಥಕ್ ॥೪೩॥
ಅಮೀಷಾಂ ಪಂಚಕೋಶಾನಾಮಧಿಷ್ಠಾನಮಬಾಧಿತಮ್ ।
ಯದ್ಬ್ರಹ್ಮಪುಚ್ಛಮಿತ್ಯುಕ್ತಂ ಪರಿಪೂರ್ಣಂ ತದಸ್ಮ್ಯಹಮ್ ॥೪೪॥
ಇದಂ ಪ್ರಪಂಚವೈಚಿತ್ರ್ಯಂ ನ ಮಾಂ ಮೋಹಯಿತುಂ ಕ್ಷಮಮ್।
ಸರ್ವಂ ಮಾಯಾಮಯಂ ತುಚ್ಛಮಿತ್ಯವೇತ್ಯ ಗತಸ್ಮಯಮ್ ॥೪೫॥
ನಷ್ಟೋ ಮಾಯಾಮಯಃ ಸ್ವಪ್ನೋ ಯೇನಾಽಹಂ ಜೀವತಾಮಗಾಮ್।
ಅಧುನಾಽಹಂ ಪ್ರಪಶ್ಯಾಮಿ ಮಾಂ ಚಿದಾನಂದವಿಗ್ರಹಮ್ ॥೪೬॥
ಮಯ್ಯೇವಾನಂದಜಲಧಾವೇತೇ ಬ್ರಹ್ಮಾಂಡಬುದ್ಬುದಾಃ ।
ಉದ್ಭವಂತಿ ಲಯಂ ಯಾಂತಿ ನಿರ್ವಿಕಾರೋಽಹಮನ್ವಹಮ್ ॥೪೭॥
ನಿತ್ಯೋಽಹಂ ನಿರ್ವಿಕಾರೋಽಹಂ ನಿಃಸಂಗೋಽಹಂ ನಿರಾಶ್ರಯಃ ।
ಪೂರ್ಣೋಽಹಂ ಬೋಧರೂಪೋಽಹಂ ಸ್ವಪ್ರಕಾಶೋಽಹಮೀಶ್ವರಃ ॥೪೮॥
ಮದೀಯಮಿದಮಿತ್ಯೇವಂ ಯಾವತ್ಪಶ್ಯಾಮ್ಯಹಂ ಜಗತ್ ।
ತಾವನ್ಮಯ್ಯೇವ ಮಾಮೇವ ಪಶ್ಯಾಮ್ಯಾತ್ಮಾನಮದ್ವಯಮ್ ॥೪೯॥
ಯಃ ಸಹಸ್ರಂ ಸಹಸ್ರಾಣಾಂ ಪಕ್ಷಾನಾಹೃತ್ಯ ಸಂಪತೇತ್ ।
ನಾಂತಂ ಗಚ್ಛೇತ್ಕಾರಣಸ್ಯ ಯಸ್ಯ ಸಾಕ್ಷಾತ್ತದಸ್ಮ್ಯಹಮ್ ॥೫೦॥
ಗತಂ ಮೇ ಜೀವತಾರೂಪಂ ದಾರಿದ್ರ್ಯಂ ದುಃಖಭಾಜನಮ್ ।
ಸಂಪ್ರಾಪ್ತಂ ನಿಜಸಾಮ್ರಾಜ್ಯಂ ಚಿರಂಗುಪ್ತಮಿವಸ್ಥಿತಮ್ ॥೫೧॥

ಪಂಚಕೋಶಗಳನ್ನು ದಾಟಿದ ಸಕಲೇಂದ್ರಿಯಗಳನ್ನು ನಿಯಂತ್ರಿಸಿದ, ಆಸನ ಸಿದ್ಧಿಹೊಂದಿದ ಮುನಿಯು ಏಕಾಂತವಾದ ಸ್ಥಳದಲ್ಲಿ, ಮಿತಾಹಾರ ಸೇವಿಸುತ್ತ ನಾನು ಪರಬ್ರಹ್ಮ ಸ್ವರೂಪನಿದ್ದೇನೆಂದು ಧ್ಯಾನಿಸಬೇಕು ॥೩೮॥

ಈ ಅನ್ನಮಯಕೋಶವು (ಸ್ಥೂಲದೇಹವು) ಜಡವೂ, ವಿಕಾರಿಯೂ, ದೃಶ್ಯವೂ ಆಗಿದೆ. ಚೇತನ ನಿರ್ವಿಕಾರ ಅದೃಶ್ಯನಾದ ನಾನು ಅಂತಹ ಅನ್ನಮಯ ಕೋಶದ ಸಾಕ್ಷಿಯೇ ಹೊರತು ಆ ಕೋಶನಲ್ಲ. ॥೩೯॥

ವಾಯುಪ್ರಭೇದವಾದ ವಿಕಾರಿಯಾದ ಪ್ರಾಣಮಯ ಕೋಶವೂ ನಾನಲ್ಲ ಪ್ರಾಣವು ನನ್ನದೇ ಎಂಬುದಕ್ಕೆ ಸಾಕ್ಷಿಯಾಗಿ ನಾನಿದ್ದೇನೆ ॥೪೦॥

ಕಾಮ–ಕ್ರೋಧಾದಿಗಳಿಂದ ವ್ಯಾಪ್ತನಾದ, ಚಂಚಲವಾದ, ಶೋಕ ಮೋಹಯುತವಾದ ಮನೋಮಯ ಕೋಶವೂ ನಾನಲ್ಲ ಏಕೆಂದರೆ ಇದಕ್ಕೂ ನಾನೇ ಸಾಕ್ಷಿ(ದ್ರಷ್ಟಾ)ಯೇ ಆಗಿದ್ದೇನೆ ।೪೧।

ನಾನು ಯಾವದರ ತಾದಾತ್ಮ್ಯ ಹೊಂದಿ ಕರ್ಮಗಳನ್ನು ಮಾಡುವೆನೋ ಅಂತಹ ವಿಜ್ಞಾನಮಯ ಕೋಶವೂ ನಾನಲ್ಲ. ನಾನು ಆದಕ್ಕಿಂತಲೂ ಭಿನ್ನನಾದ ಸಾಕ್ಷಿಯಾಗಿದ್ದೇನೆ.॥೪೨॥

ಸುಷುಪ್ತಿಯಲ್ಲಿಯ ಅಹಂಕಾರ ವೃತ್ತಿರೂಪವಾದ ಆನಂದಮಯ ಕೋಶವೂ ನಾನಲ್ಲ ಅದಕ್ಕೆ ಭಿನ್ನನಾಗಿ ನಾನು ಸಾಕ್ಷೀಭೂತನಾಗಿದ್ದೇನೆ ॥೪೩॥

ಈ ಪಂಚಕೋಶಗಳ ಅಬಾಧಿತವಾದ ಅಧಿಷ್ಠಾನವನ್ನೇ ಬ್ರಹ್ಮಪುಚ್ಛವೆಂದು ಕರೆಯಲಾಗಿದೆ ಆ ಪರಿಪೂರ್ಣ ಬ್ರಹ್ಮಸ್ವರೂಪನೇ ನಾನಾಗಿದ್ದೇನೆ ॥೪೪॥

ಈ ಪ್ರಪಂಚ ವೈಚಿತ್ರ್ಯವು ನನ್ನನ್ನು ಮೋಹಗೊಳಿಸಲು ಸಾಧ್ಯವಾಗದು. ಕ್ಷಣಿಕವಾದ ಈ ಎಲ್ಲವೂ ತುಚ್ಛವೂ ಮಾಯಾಮಯ ಆಗಿದೆ ಎಂದು ತಿಳಿದು ಅಹಂಕಾರರಹಿತನಾಗಿದ್ದೇನೆ. ನನ್ನ ಮಾಯಾಮಯ ಸ್ವಪ್ನವು ನಷ್ಟವಾಯಿತು ಈ ಸ್ವಪ್ನದಿಂದ ನಾನು ಜೀವತ್ವ ಹೊಂದಿದ್ದೆ. ಚಿದಾನಂದ ಸ್ವರೂಪವೆಂದೇ ನನ್ನನ್ನು ನಾನೀಗ ನೋಡುತ್ತಿದ್ದೇನೆ. ॥೪೫–೪೬॥

ಆನಂದಸಾಗರನಾದ ನನ್ನಲ್ಲಿಯೇ ಈ ಬ್ರಹ್ಮಾಂಡವೆಂಬ ನಿರ್ಗುಳ್ಳೆಗಳು ಹುಟ್ಟುತ್ತವೆ, ನಾಶವಾಗುತ್ತವೆ ನಾನು ಮಾತ್ರ ಸರ್ವದಾ ನಿರ್ವಿಕಾರಿಯಾಗಿದ್ದೇನೆ.॥೪೭॥

ನಿತ್ಯನಾದ ನಿಃಸಂಗನಾದ ನಾನು ನಿರಾಶ್ರಯನಿದ್ದೇನೆ. ನನಗೆ ಮತ್ತೊಂದು ಆಶ್ರಯಬೇಡ. ಪರಿಪೂರ್ಣನಾದ ಜ್ಞಾನ ಸ್ವರೂಪನಾದ ನಾನು ಸ್ವಯಂ ಪ್ರಕಾಶನಾದ ಪರಮಾತ್ಮ ಸ್ವರೂಪನೇ ಇದ್ದೇನೆ ॥೪೮॥।

ನಾನು ಈವರೆಗೆ (ಸಂಸಾರ ದಶೆಯಲ್ಲಿ) ಈ ಜಗತ್ತು ನನ್ನದು. ಅಂದರ ನನ್ನಿಂದ ಭಿನ್ನವಾದುದು ಎಂದು ತಿಳಿಯುತ್ತಿದ್ದೆನು. ಶಾಸ್ತ್ರಜ್ಞಾನ ಗುರೂಪದೇಶಗಳಿಂದ ಈ ಜಗತ್ತು ನನ್ನಲ್ಲಿಯೇ ಕಲ್ಪಿತವಾಗಿದೆಯೆಂದು ಅರಿವು ಉಂಟಾಯಿತು. ಈಗ ಜಗತ್ತಿನ ಅರಿವು ಬಾರದೇ ನನ್ನನ್ನು ಮಾತ್ರ ನೋಡುತ್ತಲಿದ್ದೇನೆ ॥೪೯॥

ಸಾವಿರಾರು ರೆಕ್ಕೆಗಳನ್ನು ಹಚ್ಚಿಕೊಂಡು ಹಾರಿದರೂ ಯಾವನ ಮೂಲ ರೂಪವು ಗೊತ್ತಾಗುವುದಿಲ್ಲವೋ ಅಂತಹ ಪರಬ್ರಹ್ಮನ ಸ್ವರೂಪನಾಗಿದ್ದೇನೆ. ದಾರಿದ್ರ್ಯ ದುಃಖಗಳಿಗೆ ಕಾರಣವಾದ ಜೀವಭಾವವು ನಷ್ಟವಾಗಿದೆ. ಅನಾದಿ ಕಾಲದಿಂದ ನಮ್ಮದಾಗಿದ್ದರೂ ಈ ವರೆಗೆ ಅರಿವೆಗೆ ಬಾರದ ಸ್ವಾನಂದ ಸಾಮ್ರಾಜ್ಯವು ದೊರೆತಿದೆ. ॥೫೦–೫೧॥

ನಿವೃತ್ತಸ್ಯೈವ ಮೋಹಸ್ಯ ನಿವೃತ್ತಿರ್ಗುರುಣಾ ಕೃತಾ ।
ಪ್ರಾಪ್ತಸ್ಯೈವ ಚ ಮೇ ಪ್ರಾಪ್ತಿರಹೋ ಗುರುರಹೋ ಗುರುಃ ॥೫೨॥

ಗುರುಪ್ರಸಾದಾಜ್ಞಾತೋಽಸ್ಮಿ ಗುರೂಣಾಮಪ್ಯಹಂ ಗುರುಃ ।
ಯತ್ಪ್ರಾಪಣೀಯಂ ತತ್ಪ್ರಾಪ್ತಂ ಕೃತಕೃತ್ಯೋಽಸ್ಮಿ ನಿರ್ವೃತಃ ॥೫೩॥

ಇತಿ ಧ್ಯಾಯನ್ ಚಿರಂ ಬ್ರಹ್ಮನ್ ನಿಜಾನಂದಪರಿಪ್ಲುತಃ ।
ಸಮಾಧೇರುತ್ಥಿತೋ ಭೈಕ್ಷಂ ಚರೇತ್ಸಂಪಾಲಯನ್ ಮುಹುಃ ॥೫೪॥

ಯಥಾಂಡಜಾಃ ಕಣಲೋಭೇನ ಯಾಂತಿ
ಗೃಹಾಂಗಣಂ ಗೃಹಿಣಾಂ ಶಂಕಮಾನಾಃ
ಕಣಾನ್ ಲಬ್ಧ್ವಾ, ತ್ವರಯಾ ಸಂಪ್ರಯಾಂತಿ
ತಥಾ ಭೈಕ್ಷಂ ಯಶ್ಚರೇದಾತ್ಮವಿತ್ಸಃ ॥೫೫॥

ಮೌನಂ ಮಾನಪರಿತ್ಯಾಗೋ ವಿರಾಗ್ಯೈಕಾಂತಶೀಲನೇ ।
ಧ್ಯಾನಂ ಮಾಹಾತ್ಮ್ಯಗುಪ್ತಿಶ್ಚ ಷಡೇತೇ ಮೋಕ್ಷಹೇತವಃ ॥೫೬॥

ಜ್ಞಾನಾದ್ವಿನಶ್ಯತಃ ಕಾರ್ತ್ಸ್ನ್ಯಾತ್ ವಿಪ್ರ ಪೂರ್ವೋತ್ತರೇ ಅಘೇ ।
ಭೋಗೇನ ಕ್ಷಪಯಿತ್ವಾನ್ಯದ್ಬ್ರಹ್ಮಭೂಯಮವಾಪ್ನುಯಾತ್ ॥೫೭॥

ಆದೇಹಪಾತಮಾರಬ್ಧಂ ಕರ್ಮ ಜ್ಞಾನವತಾಮಪಿ ।
ಸ್ವಸ್ವಕಾಲೇ ದದಾತ್ಯೇವ ದುಃಖಾನಿ ಚ ಸುಖಾನಿ ಚ ॥೫೮॥

**ಸುಮೇಧಾ ಉವಾಚ –**

ಭಗವನ್ ವಿಶ್ವಮಧ್ಯಸ್ತಂ ಪರಬ್ರಹ್ಮಣಿ ತತ್ಕಥಮ್ ।
ಜಾಯತೇಽರ್ಥಕ್ರಿಯಾಕಾರಿ ಮಹ್ಯಮಾಚಕ್ಷ್ವ ಪೃಚ್ಛತೇ ॥೫೯॥

**ವಾಮದೇವ ಉವಾಚ –**

ರಜ್ಜುಸರ್ಪಾದಯೋ ಯದ್ವದಸಂತೋಽಪ್ಯರ್ಥಕಾರಿಣಃ ।
ಏವಂ ದೇಹಾದಯೋ ಭಾವಾ ಹ್ಯಸಂತೋಽಪ್ಯರ್ಥಕಾರಿಣಃ ॥೬೦॥

ತಾನ್ ವಿಜೇತುಂ ಸದಾ ಕಾರ್ಯಃ ಸಮಾಧಿರ್ಬ್ರಹ್ಮವಿತ್ತಮೈಃ ।
ವ್ಯುತ್ಥಾನೇ ದ್ವಂದ್ವಮಖಿಲಮಪನೇಯಾತ್ತಿತಿಕ್ಷಯಾ ॥೬೧॥

ದೃಷ್ಟೇಂದ್ರಜಾಲಾ ಜಾಯಂತೇ ಮೂಢಾ ಹಾಸ್ಯವಶಾ ಯಥಾ ।
ತಥಾ ಪ್ರಾಜ್ಞಾ ನ ಜಾಯಂತೇ ತಸ್ಯ ಮಿಥ್ಯಾತ್ವನಿಶ್ಚಯಾತ್ ॥೬೨॥

ಕಂಠಗತಚಾಮೀಕರ ನ್ಯಾಯದಂತೆ ತೊಲಗಿದ್ದ ಮೋಹವನ್ನೇ ಗುರುವು ತೊಲಗಿಸಿದನು. ನಾನಿದುವರೆಗೆ ಹೊಂದಿದ್ದನ್ನೇ ಗುರುವು ಹೊಂದಿಸಿಕೊಟ್ಟನು ಗುರು ಮಹಿಮೆಯು ಎಷ್ಟು ಅದ್ಭುತವಾಗಿದೆ? ।।೫೨।।

ಗುರುವಿನ ಅನುಗ್ರಹದಿಂದ ಮಾನವನಾಗಿದ್ದ ನಾನು ನಿಜವಾಗಿ ಬ್ರಹ್ಮಸ್ವರೂಪನಾಗಿ ಮಾರ್ಪಟ್ಟಿದ್ದೇನೆ ಅಂತೆಯೇ ಎಲ್ಲ ಗುರುಗಳಿಗೂ ನಾನೇ ಗುರು ಹೊಂದ ಬೇಕಾದದ್ದನ್ನು ಹೊಂದಿ ನಿರ್ವೃತನಾದ ನಾನು ಕೃತಕೃತ್ಯನಾಗಿದ್ದೇನೆ ।।೫೩।।

ಸುಮೇಧ! ಈ ರೀತಿ ಚಿರಕಾಲ ಧ್ಯಾನಿಸಿ ನಿಜಾನಂದ ಹೊಂದಿ ಸಮಾಧಿಯಿಂದ ಎಚ್ಚೆತ್ತಾಗ ಸನ್ಯಾಸಧರ್ಮಕ್ಕನುಸಾರವಾಗಿ ಪ್ರತಿಸಾರೆ ಭಿಕ್ಷೆ ಬೇಡಿ ಆಹಾರ ಸೇವಿಸಬೇಕು ।।೫೪।।

ಪಕ್ಷಿಗಳು ಧಾನ್ಯಕಣಗಳ ಆಶೆಯಿಂದ ಗೃಹಸ್ಥರ ಮನೆಯಂಗಳಕ್ಕೆ ಹೆದರುತ್ತ ಹೋಗಿ ಧಾನ್ಯಕಣಗಳನ್ನು ಆರಿಸಿಕೊಂಡು ಬೇಗನೇ ಹಿಂತಿರುಗುವಂತೆ ಆತ್ಮಜ್ಞಾನಿಯು ಅನಾಸಕ್ತನಾಗಿ ಲಗುಬಗೆಯಿಂದ ಭಿಕ್ಷೆಯನ್ನು ಸಂಗ್ರಹಿಸಿ ಸ್ವೀಕರಿಸಬೇಕು ।।೫೫।।

ಮೌನ, ಅಭಿಮಾನತ್ಯಾಗ, ವೈರಾಗ್ಯ, ಏಕಾಂತದಲ್ಲಿ ಆತ್ಮಾನುಸಂಧಾನ, ಧ್ಯಾನ, ತನ್ನ ಮಹಿಮೆಯನ್ನು ಪ್ರಕಾಶಗೊಳಿಸದಿರುವುದು ಈ ಆರು ಪದಾರ್ಥಗಳು ಮೋಕ್ಷಕ್ಕೆ ಕಾರಣವಾಗುತ್ತವೆ. ।।೫೬।।

ಜ್ಞಾನಪ್ರಾಪ್ತಿಯಾದ ಮೇಲೆ ಎಲ್ಲ ಪೂರ್ವ ಜನ್ಮಗಳ ಕರ್ಮವು ಅಂದರೆ ಸಂಚಿತವು ನಾಶ ಹೊಂದುತ್ತದೆ. ಮತ್ತು ಆಗಾಮಿ ಕರ್ಮವು ಜ್ಞಾನಿಗೆ ಅಂಟಿಕೊಳ್ಳುವುದಿಲ್ಲ ಪ್ರಾರಬ್ಧವನ್ನು ಅನುಭವಿಸಿದ ಮೇಲೆ ಅವನು ವಿದೇಹ ಮುಕ್ತಿಯನ್ನು ಹೊಂದುವನು ।।೫೭।।

ದೇಹವು ಬೀಳುವವರೆಗೆ ಜ್ಞಾನಿಗಳಿಗೂ ಸಹ ಪ್ರಾರಬ್ಧಕರ್ಮವು ಆಗಾಗ ಸುಖ ದುಃಖಗಳನ್ನು ಕೊಡುತ್ತಿರುತ್ತದೆ ಆದರೆ ಅವರಿಗೆ ಅದು ಬಾಧಿಸುವುದಿಲ್ಲ. ।।೫೮।।

**ಸುಮೇಧನು ಪ್ರಶ್ನಿಸಿದನು –**

ಭಗವನ್! ವಾಮದೇವರೇ! ಪರಬ್ರಹ್ಮನಲ್ಲಿ ಜಗತ್ತು ಹೇಗೆ ಅಧ್ಯಸ್ತವಾಗಿದೆ?. ಮತ್ತು ಮನುಷ್ಯನ ವ್ಯವಹಾರಕ್ಕೆ ಜಗತ್ತು ಹೇಗೆ ಉಪಯೋಗವಾಗಿದೆ? ।।೫೯।।

**ವಾಮದೇವರು ಹೇಳಿದರು –**

ಸ್ವಪ್ನದಲ್ಲಿ ತೋರುವ ಸರ್ಪವು ಪ್ರಾತಿಭಾಸಿಕವಾದರೂ ಹೇಗೆ ಭಯಕಂಪಾದಿ ಗಳಿಗೆ ಕಾರಣವಾಗುತ್ತದೆಯೋ ಹಾಗೆಯೇ ದೇಹಾದಿಗಳು ಅಪಾರಮಾರ್ಥಿಕವಾಗಿದ್ದರೂ ವ್ಯಾವಹಾರಿಕ ಹಾಗೂ ಪಾರಮಾರ್ಥಿಕ ಪ್ರಯೋಜನಗಳಿಗೆ ಕಾರಣವಾಗುವವು. ।।೬೦।।

ಇವನ್ನು ಗೆಲ್ಲಲು ಬ್ರಹ್ಮವೇತ್ತನು ಸರ್ವದಾ ಸಮಾಧಿಯನ್ನಾಶ್ರಯಿಸಬೇಕು. ಎಚ್ಚೆತ್ತಾಗ ಈ ಎಲ್ಲ ದ್ವಂದ್ವಗಳನ್ನು (ಸಹಿಸಿ) ಹಚ್ಚಿಕೊಳ್ಳಬಾರದು. ।।೬೧।।

ಇಂದ್ರಜಾಲವನ್ನು ನೋಡಿ ಮೂಢರು ಹೇಗೆ ಮೋಹಗೊಳ್ಳುವರೋ ಹಾಗೆ – ಅದು ''ಮಿಥ್ಯೆ'' ಎಂದು ಕಂಡುಕೊಂಡ (ಪ್ರಾಜ್ಞರು) ಜಾಣರು ಜಗತ್ತಿನಲ್ಲಿ ಮೋಹಗೊಳ್ಳುವುದಿಲ್ಲ ।।೬೨।।

ಅಜ್ಞೋ ದೇಹಾಭಿಮಾನೇನ ಮನ್ವಾನೋ ವಿಶ್ವಸತ್ಯತಾಮ್ ।
ಯಥಾ ಕ್ಲೇಶಾನವಾಪ್ನೋತಿ ನ ತಥಾ ಪರಮಾರ್ಥದೃಕ್ ॥೬೩॥

ತಸ್ಮಾದ್ದೇಹಾದ್ವಯಾಧ್ಯಾಸಂ ಪ್ರಜಹೀಹಿ ಮಹಾಮತೇ ॥
ಚಿಂತಯಾತ್ಮಾನಮದ್ವೈತಂ ಭೂಯಃ ಕಲ್ಪಯಸೇಽಧ್ವನೇ ॥೬೪॥

ಮಾ ಕಾಂಕ್ಷೀರ್ಮರಣಂ ವಿಪ್ರ ಕಾಂಕ್ಷೀಸ್ತ್ವಂ ಮಾ ಚ ಜೀವಿತಮ್ ।
ತದ್ದ್ವಯಂ ಯಸ್ಯ ತನ್ಮಿಧ್ಯಾತ್ವಂ ಭವಾವ್ಯಯ ವರ್ಜಿತಃ ॥೬೫॥

ಇಮಾನಿ ಸರ್ವಭೂತಾನಿ ಜಿಹ್ವೋಪಸ್ಥವಶಾನಿ ಹಿ ।
ತಯೋರ್ವಿರಕ್ತೋ ಯೋ ಧೀರಃ ನ ಏವ ಬ್ರಹ್ಮವಿತ್ತಮಃ ॥೬೬॥

ಶಾಸ್ತ್ರವಾದೇಷು ನಿಪುಣಃ ಪಾಂಡಿತ್ಯಾಭಿನಿವಿಷ್ಟಧೀಃ ।
ನ ಸ ಬ್ರಹ್ಮ ವಿಜಾನಾತಿ ದರ್ವೀ ಪಾಕರಸಂ ಯಥಾ ॥೬೭॥

ನಾನುಧ್ಯಾಯೇದ್ಬಹೂನ್‌ಚ್ಛಬ್ದಾನ್ವಾಚೋ ವಿಗ್ಲಪನಂ ಹಿ ತತ್ ।
ತಸ್ಮಾನ್ನಿರ್ವಿದ್ಯ ಪಾಂಡಿತ್ಯಂ ಬ್ರಹ್ಮಸಂಸ್ಥೋ ಭವೇನ್ಮುನಿಃ ॥೬೮॥

ಅಪಿ ಯಃ ಸಗುಣೋಪಾಸ್ತೌ ಭೇದದೃಕ್ ಸ ಪಶುಃ ಶ್ರುತಃ ।
ಕಿಂ ಪುನರ್ನಿರ್ಗುಣೇ ಬ್ರಹ್ಮಣ್ಯದ್ವಯೇ ಯಸ್ತು ಭೇದದೃಕ್ ॥೬೯॥

ಅದ್ವಿತೀಯಂ ಬ್ರಹ್ಮ ಸತ್ಯಂ ಜಗತ್ತತ್ರ ಮರೀಚಿಕಾ ।
''ಮಾಯಾಮಾತ್ರಮಿದಂ ದ್ವೈತ''ಮಿತ್ಯಾದಿಶ್ರುತಿಮಾನತಃ ॥೭೦॥

ಉದ್ಭವಂತಿ ವಿವೇಕೇನ ವಿಪ್ರ ವಿಪ್ರತಿಪತ್ತಯಃ ।
ಅತಸ್ತಾಸಾಂ ನಿರಾಸಾಯ ಜಾಯತೇ ಶಾಸ್ತ್ರವಿಸ್ತರಃ ॥೭೧॥

ಅನೇಕಜನ್ಮಸಿದ್ಧಾನಾಂ ಶುದ್ಧಾನಾಮಧಿಕಾರಿಣಾಮ್ ।
ಶ್ಲೋಕೇನ ಚ ತದರ್ಧೇನ ಸ್ವಾತ್ಮಬೋಧಃ ಪ್ರಜಾಯತೇ ॥೭೨॥

ಆಗೋಪಾಲಾವಿಪಾಲೇಭ್ಯಃ ಸರ್ವೇ ಭೇದೇಽಧಿಕಾರಿಣಃ ॥
ಅಭೇದೇ ತ್ವಧಿಕಾರೀ ತು ಸ ಮಹಾತ್ಮಾ ಸುದುರ್ಲಭಃ ॥೭೩॥

ಲೌಕಿಕೇನ ಪ್ರಮಾಣೇನ ಸಿದ್ಧಾಂ ತ್ಯಕ್ತ್ವಾಽಭಿಮಾನಿತಾಮ್ ।
ವೇದಾಂತೈರನುಭೂತ್ಯಾ ಚ ಸಿದ್ಧಮದ್ವೈತಮಾಶ್ರಯ॥೭೪॥

ಪಾಮರನು ದೇಹಾಭಿಮಾನದಿಂದ ಈ ಜಗತ್ತು ಸತ್ಯವೆಂದೇ ತಿಳಿದು ಕಷ್ಟಗಳನ್ನು ಹೊಂದುತ್ತಾನೆ. ಆದರೆ ಪರಮಾರ್ಥ ದೃಷ್ಟಿಯುಳ್ಳ ಜ್ಞಾನಿಯು ಹೊಂದುವದಿಲ್ಲ.।।೬೩।।

ಆದ್ದರಿಂದ ದೇಹ ಮತ್ತು ಆತ್ಮ ಇವು ಒಂದು ಎಂಬ ಅಜ್ಞಾನವನ್ನು ಬಿಡು ನಿನ್ನನ್ನು ಅದ್ವೈತಾತ್ಮ ಸ್ವರೂಪನನ್ನಾಗಿ ಚಿಂತಿಸು. ಹೀಗೆ ಮಾಡಿದರೆ ನಿನಗೆ ಮೋಕ್ಷ–ಮಾರ್ಗ ಸುಲಭವಾಗುವದು ।।೬೪।।

ನೀನು ಜನನ ಮರಣಗಳನ್ನು ಬಯಸಬೇಡ ಏಕೆಂದರೆ ಅವೆರಡೂ ಅಸತ್ಯವಾಗಿವೆ. ನೀನು ಅವುಗಳಿಂದ ರಹಿತನೇ ಆಗಿರುವೆ ।।೬೫।।

ಎಲ್ಲ ಪ್ರಾಣಿಗಳು, ಜಿಹ್ವಾ (ರುಚಿ)ಮತ್ತು ಜನನೇಂದ್ರಿಯ (ಭೋಗ) ಇವುಗಳ ಅಧೀನವಾಗಿವೆ. ಇವುಗಳಿಗೆ ಅಧೀನನಾಗದೇ ಇರುವವನೇ ಬ್ರಹ್ಮಜ್ಞಾನಿ ಎನಿಸುವನು.।।೬೬।।

ಶಾಸ್ತ್ರಾರ್ಥ ವಾದಗಳಲ್ಲಿ ಅತ್ಯಂತ ನಿಪುಣನಾದ ಪಂಡಿತನೆಂಬ ಅಭಿಮಾನವುಳ್ಳವನು ಅಡಿಗೆಯ ಸೌಟು ರುಚಿಯನ್ನು ತಿಳಿಯದಂತೆ ಬ್ರಹ್ಮವನ್ನು ತಿಳಿದುಕೊಳ್ಳಲಾರ ।।೬೭।।

ಬಹಳ ಶಬ್ದಗಳನ್ನು ಅಭ್ಯಸಿಸಬಾರದು. ಅದು ವೃಥಾ ವಾಣಿಗೆ ಶ್ರಮ ಕೊಟ್ಟಂತಾಗುವದು ಆದ್ದರಿಂದ ಪಾಂಡಿತ್ಯವನ್ನು ಕಡೆಗಣಿಸಿ ಶ್ರವಣ ಮನನಗಳನ್ನು ಮಾಡುತ್ತ ಮುನಿಯಾಗಿ ಬ್ರಹ್ಮತತ್ಪರನಾಗಬೇಕು ।।೬೮।।

ಸಗುಣೋಪಾಸನೆಯಲ್ಲಿ ಭೇದವನ್ನು ಕಾಣುವವನು ''ಪಶು'' ಎಂದು ಹೇಳಲ್ಪಡುವನು ಇನ್ನು ನಿರ್ಗುಣ ಬ್ರಹ್ಮನಲ್ಲಿ ಭೇದ ಮಾಡುವವನಂತೂ ಪಶುವಿಗಿಂತಲೂ ಕಡೆಯಾಗುವನು. ।।೬೯।।

ಅದ್ವಿತೀಯವಾದ ಬ್ರಹ್ಮವೊಂದೇ ಸತ್ಯ. ಅದರಲ್ಲಿ ಈ ಜಗತ್ತು ಬಿಸಿಲ್ಗುದುರೆಯಂತೆ ತೋರುವುದು 'ಮಾಯಾಮಾತ್ರಮಿದಂ ದ್ವೈತಂ' ಎಂಬ ವೇದವೂ ಸಹ ಈ ದ್ವೈತವು ಕೇವಲ ಮಾಯಾಮಯವೆಂದು ತಿಳಿಸುತ್ತಿದೆ. ಸುಮೇಧ! ಬೇದಬುದ್ಧಿಯಿಂದಾಗಿ ವಿಪ್ರತಿಪತ್ತಿಗಳು (ವಿರುದ್ಧ ವಾಕ್ಯ) ಹುಟ್ಟುತ್ತವೆ. ಅವುಗಳ ನಿರಾಸೋಪಾಯ ತಿಳಿಸಲು ಶಾಸ್ತ್ರಗಳು ಸಾಕಷ್ಟು ವಿಸ್ತೃತವಾಗಿವೆ. ।।೭೦–೭೧।।

ಬಹಳ ಜನ್ಮಗಳಿಂದ ಸಿದ್ಧರಾದ, ಪರಿಶುದ್ಧರಾದ ಸಾಧಕರಿಗೆ ಶಾಸ್ತ್ರದ ಶ್ಲೋಕದಿಂದ ಅಥವಾ ಅರ್ಧಶ್ಲೋಕದಿಂದ ಆತ್ಮಜ್ಞಾನವುಂಟಾಗುತ್ತದೆ. ।।೭೨।।

ಪಶುಗಳನ್ನು ಕಾಯುವಂತಹ ಅಜ್ಞಾನಿಗಳು ಭೇದದಲ್ಲಿ ಅಧಿಕಾರಿಗಳಾಗಿದ್ದಾರೆ ಅಭೇದದಲ್ಲಿ ಅಧಿಕಾರಿಗಳು ಮಾತ್ರ ಮಹಾತ್ಮರೆನಿಸಿ ದುರ್ಲಭರಾಗಿರುವರು ।।೭೩।।

''ಜೀವಬ್ರಹ್ಮರು ಭಿನ್ನರು'' ಎಂಬ ಜ್ಞಾನಕ್ಕೆ ಲೌಕಿಕವಾದ ಪ್ರತ್ಯಕ್ಷವು ಮಾತ್ರ ಪ್ರಮಾಣವಾದೀತೇ ಹೊರತು ಶಾಸ್ತ್ರವು ಸರ್ವಥಾ ಅಲ್ಲ ''ಅಭಿನ್ನರು ಎಂಬುವದಕ್ಕೆ ಸಕಲ ವೇದಾಂತಗಳು ಹಾಗೂ ವಿದ್ವದನುಭವವು ಪ್ರಮಾಣವಾಗಿವೆ. ಅಂತಹ ಅದ್ವೈತವನ್ನೇ ನೀನು ಅವಲಂಬಿಸು. ।।೭೪।।

ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ಬ್ರಹ್ಮೈಕ್ಯಭಾವನೋದ್ಭೂತಾಮನುಭೂತಿಂ ಸುಖಾತ್ಮಿಕಾಮ್ ॥೭೫॥

ಬಹಿರ್ಮುಖೇಷು ಮಾ ಸೌಮ್ಯ ಸರ್ವಥಾ ಪ್ರಕಟೀಕುರು ।
ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಮಿಥ್ಯಾ ಜೀವೇಶಯೋರ್ಭಿದಾ ॥೭೬॥

ಇತ್ಯೃಷಿರ್ವಾಮದೇವಸ್ತಮನುಶಾಸ್ಯ ಸುಮೇಧಸಮ್ ।
ತೇನ ಸಂಪೂಜಿತೋ ಭಕ್ತ್ಯಾ ತತ್ರೈವಾದೃಶ್ಯತಾಂ ಯಯೌ ॥೭೭॥

ಉಪಧಾರ್ಯಾತ್ಮವಿಜ್ಞಾನಂ ವಾಮದೇವಾನ್ಮಹಾಗುರೋಃ ।
ಸುಮೇಧಾಃ ಕೃತಕೃತ್ಯೋಽಭೂದ್ಬ್ರಹ್ಮಾಹಮಿತಿ ಭಾವಯನ್ ॥೭೮॥

**ಸೂತ ಉವಾಚ —**

ವಾಮದೇವೀಮಿಮಾಂ ಗೀತಾಂ ಯಃ ಪಠೇದ್ಭಕ್ತಿಮಾನ್ ಪುಮಾನ್ ।
ತದರ್ಥಂ ಭಾವಯೇನ್ನಿತ್ಯಂ ಸ ಮೋಕ್ಷಂ ಪ್ರಾಪ್ನುಯಾದ್ಧ್ರುವಮ್॥೭೯॥

ಇದಂ ವೋ ವಾಮದೇವೀಯಂ ಸದ್ಯಃ ಪ್ರತ್ಯಯಕಾರಕಮ್ ।
ಅಧ್ಯಾತ್ಮಶಾಸ್ತ್ರಂ ಕಥಿತಂ ಕಿಂ ಭೂಯಃ ಶ್ರೋತುಮಿಚ್ಛಥ ॥೮೦॥

**ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ**
**ಕ್ರತುಪುರಮಾಹಾತ್ಮ್ಯೇ**
**ವಾಮದೇವಗೀತಾನಾಮ ಚತುರ್ದಶೋಽಧ್ಯಾಯಃ**

ಎರಡೂ ಭುಜಗಳನ್ನೆತ್ತಿ ಪುನಃ ಪುನಃ ಸತ್ಯವನ್ನೇ ಹೇಳುತ್ತೇನೆ. ಜೀವ ಬ್ರಹ್ಮೈಕ್ಯ ಭಾವನೆಯಿಂದ ಉಂಟಾದ ಸುಖಸ್ವರೂಪವಾದ ಅನುಭವವನ್ನು ಸಂಸಾರಿಗಳಲ್ಲಿ ಸರ್ವಥಾ ಪ್ರಕಟಗೊಳಿಸದಿರು. ಬ್ರಹ್ಮವೊಂದೇ ಸತ್ಯ ಅದೇ ಜಗತ್ತಾಗಿ ತೋರುವುದರಿಂದ ಅದರ ಮೇಲಿನ ರೂಪ ಮಿಥ್ಯಾ ಜೀವಬ್ರಹ್ಮರಲ್ಲಿ ಭೇದವಿಲ್ಲ ||೭೫-೭೬||

ಈ ರೀತಿ ವಾಮದೇವ ಮಹರ್ಷಿಗಳು ಬೋಧಿಸಿದ್ದನ್ನು ಆಲಿಸಿದ ಸುಮೇಧನು ಭಕ್ತಿಗೌರವಗಳಿಂದ ಅವರನ್ನು ಪೂಜಿಸಿದನು. ನಂತರ ವಾಮದೇವರು ಅಲ್ಲಿಯೇ ಅದೃಶ್ಯರಾದರು ||೭೭||

ಗುರುವರ್ಯ ವಾಮದೇವರಿಂದ ಆತ್ಮಜ್ಞಾನವನ್ನು ಹೊಂದಿದ ಸುಮೇಧನು ನಾನು ಬ್ರಹ್ಮಸ್ವರೂಪನಿದ್ದೇನೆಂದು ಭಾವಿಸುತ್ತ ಧನ್ಯತೆ ಹೊಂದಿದನು ||೭೮||

**ಸೂತರು ಹೇಳಿದರು –**

ವಾಮದೇವ ಮಹರ್ಷಿಗಳ ಈ ಗೀತೆಯನ್ನು ಅರ್ಥಾನುಸಂಧಾನ ಪೂರ್ವಕ ಭಕ್ತಿಯಿಂದ ಪಠಿಸುವ ಮನುಜನು ನಿಶ್ಚಿತವಾಗಿ ಮೋಕ್ಷ ಹೊಂದುತ್ತಾನೆ. ಮುನಿಗಳೇ! ಕೂಡಲೇ ಜ್ಞಾನಕಾರಕವಾದ, ವಾಮದೇವರ ಆಧ್ಯಾತ್ಮಶಾಸ್ತ್ರವನ್ನು ಹೇಳಿದೆ ಇದಕ್ಕೂ ಹೆಚ್ಚು ಕೇಳಲಿಚ್ಛಿಸುವಿರಾ? ||೭೯-೮೦||

ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ
ಕ್ರತುಪುರಮಾಹಾತ್ಮ್ಯೆಯಲ್ಲಿ
ವಾಮದೇವಗೀತಾ ಎಂಬ ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು.

# ಅಥ ಪಂಚದಶೋಽಧ್ಯಾಯಃ

**ಋಷಯ ಊಚುಃ –**

ತಸ್ಮಿನ್ ಕ್ರತುಪುರೇ ಪುಣ್ಯೇ ಕಾನಿ ತೀರ್ಥಾನಿ ಸಂತಿ ವೈ ।
ತಾನಿ ನಃ ಸೂತ ಸರ್ವಾಣಿ ತ್ವಮಾಚಕ್ಷ್ವ ಮಹಾಮತೇ ॥೧॥

**ಸೂತ ಉವಾಚ –**

ಸ ಏಕದಾ ಬ್ರಹ್ಮಪುತ್ರಃ ಕ್ರತುಃ ಕ್ರತುಮತಾಂ ವರಃ ।
ಇಚ್ಛನ್ ಕ್ಷೇತ್ರಸ್ಯ ಮಾಹಾತ್ಮ್ಯಮಧಿಕಂ ತೀರ್ಥಯೋಗತಃ ॥೨॥

ಊರ್ಧ್ವಬಾಹುರ್ನಿರಾಹಾರಃ ಸ್ಥಾಣುಭೂತಃ ಸ್ಥಿತಃ ಸಮಾಃ
ಏಕಪಾದಃ ಸ್ಥಿತಸ್ತೇಪೇ ಸ ತಪಸ್ವತಾಂ ವರಃ ॥೩॥

ಅತಿಪ್ರವೃದ್ಧೇ ತಪಸಿ ತಸ್ಯೈಕಮನಸಃ ಕ್ರತೋಃ ।
ಆಗತಾಸ್ತತ್ರ ಸರ್ವೇಽಪಿ ದೇವಾ ಋಷಿಗಣೈಃ ಸಹ ॥೪॥

ಗಂಧರ್ವಾ ಉರಗಾಃ ಸಿದ್ಧಾಃ ಕಿಂನರಾ ಗುಹ್ಯಕಾಸ್ತಥಾ ।
ಯಕ್ಷಾ ವಿದ್ಯಾಧರಾಶ್ಚಾಽಪಿ ಸರ್ವಾ ಅಪ್ಸರಸೋಽಪಿ ಚ ॥೫॥

ಏವಂ ಸಮಾಜೇ ಸಂವೃತ್ತೇ ಬ್ರಹ್ಮಾ ಲೋಕಪಿತಾಮಹಃ ।
ಕ್ರತುಂ ಪ್ರಬೋಧಯಾಮಾಸ ಸಮಾಧಿಸ್ಥಂ ತಪೋನಿಧಿಮ್ ॥೬॥

ಚಿರಾದುನ್ಮೀಲ್ಯ ನಯನೇ ಯದಾ ಕ್ರತುರವೈಕ್ಷತ ।
ತದಾ ದದರ್ಶ ಬ್ರಹ್ಮಾಣಂ ಹರಿಂ ಚ ಗಿರಿಜಾಪತಿಮ್ ॥೭॥

ಭೃಗ್ವಾದೀನಾತ್ಮನೋ ಬಂಧೂನ್ ನನಾಮ ಭುವಿ ದಂಡವತ್ ।
ಕ್ರತೋ! ಶೀಘ್ರಂ ಸಮುತ್ತಿಷ್ಠೇತ್ಯಾಹ ಬ್ರಹ್ಮಾ ತ್ರಿರುಚ್ಚಕೈಃ ॥೮॥

ತದೋತ್ಥಾಯ ಕ್ರತುಃ ಪ್ರಹ್ವಸ್ತಸ್ಥಾವಗ್ರೇ ಕೃತಾಂಜಲಿಃ ।
ಕಮಲಾಸನಪಾದಾಬ್ಜಮಿಲಲ್ಲೋಚನಷಟ್ಪದಃ ॥೯॥

ತಂ ದೃಷ್ಟ್ವಾ ತಪಸಾ ಶ್ರಾಂತಂ ನಿಜಮಾತ್ಮಜಮಾತ್ಮಭೂಃ ।
ಉವಾಚ ವತ್ಸ! ಪ್ರೀತೋಽಸ್ಮಿ ವರಂ ವರಯ ಕಾಂಕ್ಷಿತಮ್ ॥೧೦॥

# ಹದಿನೈದನೆಯ ಅಧ್ಯಾಯ

**ಋಷಿಗಳು ಹೇಳಿದರು –**

ಬುದ್ಧಿವಂತನಾದ ಸೂತ! ಪಾವನವಾದ ಕ್ರತುಪುರದಲ್ಲಿ ಯಾವ ಯಾವ ತೀರ್ಥಗಳಿವೆ? ಅವೆಲ್ಲವನ್ನೂ ನಮಗೆ ತಿಳಿಸು ॥೧॥

**ಸೂತರು ಹೇಳಿದರು –**

ಮುನಿಗಳೇ! ಸರ್ವದಾ ಯಜ್ಞಕರ್ಮನಿರತನಾದ ಬ್ರಹ್ಮಪುತ್ರನಾದ ತಾಪಸಾಗ್ರಣಿ ಕ್ರತುಮಹರ್ಷಿಯು ಇಲ್ಲಿಗೆ ಬಂದು ಈ ಕ್ಷೇತ್ರದ ಹೆಚ್ಚಿನ ಮಾಹಾತ್ಮ್ಯೆಯು ಇನ್ನೂ ಹೆಚ್ಚಾಗಲೆಂದು ಬಯಸಿ ತನ್ನೆರಡು ಬಾಹುಗಳನ್ನು ಮೇಲಕ್ಕೆತ್ತಿ ಒಂದೇ ಕಾಲಿನಿಂದ ಅಚಲನಾಗಿ ನಿಂತು ಮಹಾತಪಸ್ಸನ್ನಾಚರಿಸಿದನು ॥೨–೩॥

ಏಕಾಗ್ರಚಿತ್ತನಾಗಿ ಕ್ರತುಮುನಿಯು ಆಚರಿಸಿದ ಮಹಾತಪಸ್ಸು ಪರಾಕಾಷ್ಠೆಯನ್ನು ತಲುಪುತ್ತಿರಲು ಎಲ್ಲ ದೇವತೆಗಳು ಋಷಿಗಣಗಳೊಂದಿಗೆ ಅಲ್ಲಿಗೆ ಆಗಮಿಸಿದರು ॥೪॥

ಅಲ್ಲಿ ಗಂಧರ್ವರು, ನಾಗರು, ಸಿದ್ಧರು, ಕಿಂನರರು, ಗುಹ್ಯಕರು, ಅದೇ ರೀತಿ ಯಕ್ಷರು, ವಿದ್ಯಾಧರರು, ಸಮಸ್ತ ಅಪ್ಸರಃಸ್ತ್ರೀಯರು, ಮೊದಲಾದವರು ಬಂದು ಸೇರಿದರು. ॥೫॥

ಹೀಗೆ ಅನೇಕರ ಸಮೂಹವೇ ನೆರೆದಾಗ ಲೋಕಪಿತಾಮಹನಾದ ಬ್ರಹ್ಮದೇವನು ಸಮಾಧಿ ಸ್ಥಿತಿಯಲ್ಲಿದ್ದ ತಪೋನಿಧಿಯಾದ ಕ್ರತುಮುನಿಯನ್ನು ಎಚ್ಚರಿಸಿದನು ॥೬॥

ಬಹುಕಾಲದ ನಂತರ ತನ್ನೆರಡು ಕಣ್ಣುಗಳನ್ನು ತೆರೆದ ಕ್ರತುಮುನಿಯು ತನ್ನೆದುರಿಗೆ ಬ್ರಹ್ಮ ವಿಷ್ಣು ಮಹೇಶ್ವರರನ್ನೂ, ಭೃಗು ಮೊದಲಾದ ತನ್ನ ಎಂಟು ಜನ ಸಹೋದರರನ್ನೂ ಕಂಡು ಭುವಿಯಲ್ಲಿ ಸಾಷ್ಟಾಂಗವೆರಗಿದನು. ಬ್ರಹ್ಮದೇವನು "ಮಗು, ಕ್ರತು! ಬೇಗನೇ ಮೇಲೇಳು" ಎಂದು ಮೂರು ಸಲ ಗಟ್ಟಿಯಾಗಿ ಹೇಳಿದನು ॥೭–೮॥

ಆಗ ಕ್ರತುಮುನಿಯು ಮೇಲೆದ್ದು ವಿನಯದಿಂದ ಬ್ರಹ್ಮದೇವರ ಪಾದಕಮಲಗಳನ್ನು ದಿಟ್ಟಿಸುತ್ತ ಬದ್ಧಾಂಜಲಿಯಾಗಿ ನಿಂತನು. ॥೯॥

ತಪಶ್ಚರ್ಯೆಯಿಂದ ಬಳಲಿದ ತನ್ನ ಪುತ್ರ ಕ್ರತುಮುನಿಯನ್ನು ಕಂಡು ಬ್ರಹ್ಮದೇವನು ಮಗು ಕ್ರತು! ನಾನು ಪರಮ ಸಂತುಷ್ಟನಾಗಿದ್ದೇನೆ. ನಿನಗಿಷ್ಟವಾದ ವರವನ್ನು ಬೇಡು ಎಂದನು. ॥೧೦॥

**ಕ್ರತುರುವಾಚ –**

ಅಧ್ಯುಷ್ಟಕೋಟಿತೀರ್ಥಾನಿ ಯಾನಿ ಸಂತಿ ಜಗತ್ತ್ರಯೇ ।
ತಾನ್ಯತ್ರಾಽಽಯಾಂತು ಸರ್ವಾಣಿ ಮಕರಸ್ಥೇ ದಿವಾಕರೇ ॥೧೧॥

ಯಾವನ್ಮಕರಗೋ ಭಾನು ಸ್ತಾವತ್ತಿಷ್ಠಂತು ತಾನ್ಯಜ ।
ಅಸ್ಮಿನ್ ಕ್ರತುಪುರೇ ಸ್ವಂ ಸ್ವಂ ಯಚ್ಛಂತು ಸ್ನಾನಜಂ ಫಲಮ್ ॥೧೨॥

ವೀರನಾರಾಯಣಸ್ಯಾಽಸ್ಯ ಸಮಂತಾತ್ಕ್ರೋಶಮಾತ್ರಕಮ್ ।
ವಸಂತು ಸರ್ವತೀರ್ಥಾನಿ ವಾಪೀಕೂಪಾದಿಷು ಪ್ರಭೋ! ॥೧೩॥

ಮಕರಸ್ಥೇ ರವೌ ಪ್ರಾಪ್ತೇ ಪ್ರಾಣಿನೋ ಯತ್ರ ಯತ್ರ ಹಿ ।
ಮಜ್ಜಂತಿ ಪ್ರಾಣಿನಾಂ ತೇಷಾಂ ನಶ್ಯಂತ್ವೇನಾಂಸಿ ಸರ್ವಶಃ ॥೧೪॥

ಯೇಽತ್ರ ಸ್ನಾನಂ ಚ ದಾನಂ ಚ ತರ್ಪಣಂ ವಿಪ್ರಭೋಜನಮ್ ।
ಜಪಹೋಮಾದಿಕಂ ಕುರ್ಯುಸ್ತದಕ್ಷಯ್ಯಂ ಭವತ್ವಜ ॥೧೫॥

ಏತಚ್ಛ್ರುತ್ವಾ ತು ವಚನಂ ಕ್ರತೋರ್ಲೋಕಹಿತೈಷಿಣಃ ।
ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ತಥಾಸ್ತ್ವಿತ್ಯಬ್ರುವಂಸ್ತ್ರಯಃ ॥೧೬॥

ಕ್ರತೋ ಧನ್ಯೋಽಸಿ ಧನ್ಯೋಽಸಿ ತ್ವಯಾ ಲೋಕಹಿತೇಪ್ಸುನಾ ।
ತಪಸ್ತಪ್ತಂ ವರೋ ಲಬ್ಧಃ ಕೃತಂ ಚ ಕ್ಷೇತ್ರಮುತ್ತಮಮ್ ॥೧೭॥

ತ ಏವ ಧನ್ಯಾ ಲೋಕಾ ಯೇ ಪರಾರ್ಥೈಕಪ್ರಯೋಜನಾಃ ।
ತೇ ಭೂಮೇರ್ಭಾರಭೂತಾ ಹಿ ಯೇ ಕುಕ್ಷಿಂಭರಯೋ ಜನಾಃ ॥೧೮॥

ಇತ್ಯುಕ್ತ್ವಾ ಕ್ರತುಮಾಮಂತ್ರ್ಯ ಬ್ರಹ್ಮವಿಷ್ಣುಶಿವಾದಯಃ ।
ಕ್ರತುಂ ಸ್ತುವಂತಃ ಪ್ರಯಯುಃ ಸ್ವಂ ಸ್ವಂ ಲೋಕಂ ದಿವೌಕಸಃ ॥೧೯॥

**ಸೂತ ಉವಾಚ –**

ಗತೇಷು ತೇಷು ದೇವೇಷು ಕ್ರತುಸ್ತೋಷಾನ್ನನರ್ತ ಹ ।
ವೀರನಾರಾಯಣಸ್ಯಾಽಯಂ ಮಹಿಮೇತಿ ಬ್ರುವನ್ ಮುಹುಃ ॥೨೦॥

ತಸ್ಮಿನ್ ಕ್ರತೌ ನೃತ್ಯತಿ ಪುಷ್ಪವೃಷ್ಟಿಃ
ಪಪಾತ ವಿದ್ಯಾಧರಹಸ್ತಮುಕ್ತಾ ।
ಉಚ್ಚೈರಭಾಣೀದಶರೀರವಾಣೀ
ಪ್ರೋಕ್ತಂ ತ್ವಯಾ ಸತ್ಯಮಿತಿ ತ್ರಿರುಚ್ಚೈಃ ॥೨೧॥

ಮಾಹಾತ್ಮ್ಯಮಾಕರ್ಣ್ಯ ಜನಾ ಜನೇಭ್ಯೋ ಜನಾಃ ಸಮಾಪೇತುರತೀವ ಹೃಷ್ಟಾಃ।
ಸಮಾಗತೇ ಮಾಕರಭಾಸ್ಕರೇ ತು ಬಭೂವ ಯಾತ್ರಾ ಮಹತೀ ಸುಪುಣ್ಯಾ ॥೨೨॥

**ಕ್ರತುವು ಹೇಳಿದನು –**

ಮೂರು ಲೋಕಗಳಲ್ಲಿರುವ ಎಲ್ಲ ಮೂರೂವರೆಕೋಟಿ ತೀರ್ಥಗಳೂ ಸೂರ್ಯನು ಮಕರರಾಶಿಯನ್ನು ಪ್ರವೇಶಿಸಿದ ದಿನ (ಮಕರ ಸಂಕ್ರಾಂತಿ) ಕ್ರತುಪುರಕ್ಕೆ ಆಗಮಿಸಲಿ.॥೧೧॥

ಬ್ರಹ್ಮದೇವ! ಸೂರ್ಯನು ಮಕರ ರಾಶಿಯಲ್ಲಿ ಇರುವವರೆಗೆ ಈ ಎಲ್ಲ ತೀರ್ಥಗಳೂ ಕ್ರತುಪುರದಲ್ಲಿಯೇ ನೆಲೆಸಲಿ ಸ್ನಾನ ಮಾಡಿದ ಭಕ್ತರಿಗೆ ತಮ್ಮ ತೀರ್ಥಸ್ನಾನ–ಫಲಗಳನ್ನೂ ಕೊಡಲಿ ॥೧೨॥

ಪಿತಾಮಹ! ಶ್ರೀ ವೀರನಾರಾಯಣನ ಸುತ್ತಮುತ್ತ ಕ್ರೋಶದಳತೆಯೊಳಗೆ (೨ ಮೈಲು) ಕೆರೆಭಾವಿಗಳಲ್ಲಿ ಈ ಎಲ್ಲ ತೀರ್ಥಗಳೂ ನೆಲೆಸಲಿ ॥೧೩॥

ಸೂರ್ಯನು ಮಕರರಾಶಿ ಪ್ರವೇಶಿಸಿದೊಡನೆ ಈ ಕ್ರತುಪುರದಲ್ಲಿಯ ಯಾವದೇ ಜಲಾಶಯದಲ್ಲಿ ಸ್ನಾನ ಮಾಡುವ ಸಮಸ್ತ ಜೀವಿಗಳ ಪಾಪಗಳು ಸಂಪೂರ್ಣವಾಗಿ ನಾಶವಾಗಲಿ. ॥೧೪॥

ದೇವ! ಆ ಸಮಯದಲ್ಲಿ ಮಾಡುವ ಸ್ನಾನ–ದಾನ–ತರ್ಪಣ ವಿಪ್ರಸಂತರ್ಪಣ ಜಪ–ಹೋಮಾದಿಗಳು ಅಕ್ಷಯ ಫಲವನ್ನು ಕೊಡಲಿ ॥೧೫॥

ಲೋಕಹಿತಕಾಮನಾದ ಕ್ರತುಮುನಿಯ ಈ ಮಾತನ್ನು ಕೇಳಿ ಬ್ರಹ್ಮವಿಷ್ಣು ಮಹೇಶ್ವರರು ಹಾಗೆಯೇ ಆಗಲೆಂದು ನುಡಿದರು. ॥೧೬॥

ಕ್ರತುಮುನಿಯೇ! ನೀನು ಧನ್ಯನಾದೆ. ಲೋಕಕ್ಷೇಮ ಚಿಂತಕನಾದ ನೀನು ತಪವನ್ನಾಚರಿಸಿ ವರಪಡೆದು ಈ ಕ್ರತುಪುರವನ್ನು ಉತ್ತಮಕ್ಷೇತ್ರವನ್ನಾಗಿ ಮಾಡಿದೆ ॥೧೭॥

ಪರೋಪಕಾರವೇ ಮುಖ್ಯ ಪ್ರಯೋಜನವೆಂದು ತಿಳಿದವರೇ ಧನ್ಯರು ಕೇವಲ ಉದರಭರಣವನ್ನೇ ಜೀವನದ ಗುರಿಯನ್ನಾಗಿಟ್ಟುಕೊಂಡವರು ಭೂಮಿಗೆ ಭಾರರೇ ಸರಿ ॥೧೮॥

ಕ್ರತುವನ್ನು ಸಮೀಪ ಕರೆದು ಇವೆಲ್ಲವನ್ನೂ ಹೇಳಿ ಬ್ರಹ್ಮ ವಿಷ್ಣು ಶಂಕರರೂ ಇತರ ದೇವತೆಗಳೂ ಕ್ರತುವನ್ನು ಕೊಂಡಾಡುತ್ತ ತಮ್ಮ ತಮ್ಮ ಲೋಕಗಳಿಗೆ ತೆರಳಿದರು.॥೧೯॥

**ಸೂತರು ಹೇಳಿದರು –**

ಆ ದೇವತೆಗಳೆಲ್ಲ ತೆರಳಿದ ನಂತರ ಕ್ರತುಮುನಿಯು ಅಹೋ! ಇದೆಲ್ಲವೂ ಶ್ರೀವೀರನಾರಾಯಣನ ಮಹಿಮೆ! ಎಂದು ಅಡಿಗಡಿಗೂ ಕೊಂಡಾಡುತ್ತ ಆನಂದದಿಂದ ಕುಣಿದಾಡಿದನು. ॥೨೦॥

ಕ್ರತುಮುನಿಯು ಹೀಗೆ ಕುಣಿದಾಡುತ್ತಿರುವಾಗ ಆತನ ಮೇಲೆ ವಿದ್ಯಾಧರರು ಪುಷ್ಪವೃಷ್ಟಿಗರೆದರು. ಅದೇ ಸಮಯ ಅಶರೀರವಾಣಿಯೊಂದು ಗಟ್ಟಿಯಾಗಿ "ಕ್ರತುಮುನಿಯೇ! ನೀನು ಸತ್ಯವನ್ನೇ ಹೇಳಿದಿ'' ಎಂದು ಮೂರುಸಲ ನುಡಿಯಿತು. ಜನರಿಂದ ಜನರಿಗೆ ಕರ್ಣಾಕರ್ಣಿಯಾಗಿ ಕ್ರತುಪುರ ಮಹಾತ್ಮೆಯು ಹರಡಿ ಅದನ್ನು ಕೇಳಿದ ಜನತೆ ಸಂತೋಷದಿಂದ ಕ್ರತುಪುರ ಬಂದಿತು. ಮಕರ ರಾಶಿಗೆ ಸೂರ್ಯನ ಪ್ರವೇಶವಾದೊಡನೇ ಪುಣ್ಯಕರವಾದ ಮಹತ್ತರವಾದ ಪವಿತ್ರ ಜಾತ್ರೆಯೇ ನಡೆಯಿತು. ॥೨೧–೨೨॥

ಕೋನೇರಿಕುಂಡಸ್ಯ ಸಮಂತತೋಽನ್ಯೇ ಕೇಚಿತ್ತ್ರಿಕೂಟೇಶ್ವರಸನ್ನಿಕರ್ಷೇ ।
ಯಥಾವಕಾಶಂ ನ್ಯವಸಂಶ್ಚ ಕೇಚಿತ್ಕೃತೋಃ ಪುರೇ ಪುಣ್ಯತಮೇ ಪೃಥಿವ್ಯಾಮ್॥೨೩॥

ಕೂಪಾನನೇಕಾನ್ ಪ್ರವಿಧಾಯ ತೇಷು
ಸಸ್ನುರ್ಜನಾಸ್ತೀರ್ಥಜಲೇಷು ಹೃಷ್ಟಾಃ ।
ಸಂತರ್ಪಯಂತಃ ಸ್ವಪಿತ್ರ್ಯಾನ್ ಸುರಾಂಶ್ಚ
ಯಾವದ್ದಿವಸ್ವಾನ್ ಮಕರೇ ಸ್ಥಿತೋಽಭೂತ್ ॥೨೪॥

ತೇ ಗುಪ್ತಗಾಮಿನ್ಯುಪಕಂಠಮೇತ್ಯ
ಚಕ್ರುರ್ಜನಾ ಅಂಘುಶತಂ ಹಿ ಕೇಚಿತ್ ।
ಸ್ನಾನಾನಿ ದಾನಾನಿ ಜಪಾಂಶ್ಚ ಹೋಮಾ-
ನಿಷ್ಟೀರಕುರ್ವಂಶ್ಚ ಯಥಾಧಿಕಾರಮ್ ॥೨೫॥

ಅಕುರ್ವತಾನ್ಯೇ ಬಹುದಕ್ಷಿಣಾನ್ಸಾನ್
ಯಜ್ಞಾನ್ ಯಥೋತ್ಸಾಹಮುದಾರಸತ್ತ್ವಾಃ ।
ರಥೋತ್ಸವಂ ಚಕ್ರುರಥಾಪರೇ ಜನಾಃ
ಶಿವಸ್ಯ ವಿಷ್ಣೋಃ ಪರಿತುಷ್ಟಯೇಽನ್ಯೇ ॥೨೬॥

ಧೇನೂರ್ದದುಃ ಕೇಚನ ವತ್ಸಯುಕ್ತಾಃ
ಸಕಾಂಸ್ಯದೋಹಾಃ ಸಸುವರ್ಣಶೃಂಗೀಃ ।
ಸತಾಮ್ರಪೃಷ್ಠಾಶ್ಚ ಖುರೋತ್ತತಾರಾಃ
ಸುವರ್ಣವಾಸೋಭಿರಲಂಕೃತಾಶ್ಚ ॥೨೭॥

ದ್ವಿಜೋತ್ತಮೇಭ್ಯಃ ಕುಲಶೀಲವದ್ಭ್ಯಃ
ಸೀದತ್ಕುಟುಂಬೇಭ್ಯ ಉಪಾಗತೇಭ್ಯಃ ।
ಸಂಪೂಜ್ಯ ಭಕ್ತ್ಯಾ ವಿಧಿವದ್ವಿಧಿಜ್ಞಾ
ದಾನೇನ ಚಾನೇನ ಹರಿಃ ಪ್ರಸೀದತು ॥೨೮॥

ಕೇಚಿತ್ತಿಲಾನ್ವ್ಯಾಹೃತಿಭಿರ್ವಿಧಿಜ್ಞಾಃ
ಕೃಪೀಟಯೋನೌ ಜುಹುವುಃ ಸಮಿದ್ಧೇ ।
ಉಪಾತ್ತನಾನಾಘನಿಬರ್ಹಣಾಯ
ಸ್ವಚಿತ್ತಶುದ್ಧ್ಯೈ ಶಿವತುಷ್ಟಯೇ ಚ ॥೨೯॥

ಕೇಚಿನ್ಮಹಾನ್ಯಾಸವಿಧಿಂ ವಿಧಾಯ ರುದ್ರಾಭಿಷೇಕಂ ವಿದಧುಃ ಶಿವಾಯ ।
ಚಕ್ರುರ್ಜನಾಃ ಕೇಚನ ರುದ್ರಜಾಪ್ಯಂ ಮಹಾಮನೂನ್ ಜೇಪುರಥೋ ಪರೇ ಚ॥೩೦॥

ಪಾವನ ಕ್ರತುಪುರದಲ್ಲಿ ಕೆಲಜನರು ಕೋನೇರಿಕುಂಡದ ಸಮೀಪ, ಇನ್ನು ಕೆಲವರು ತ್ರಿಕೂಟೇಶ್ವರನ ಸನ್ನಿಧಿಯಲ್ಲಿ ಹಾಗೂ ಅಲ್ಲಲ್ಲಿ ಅವಕಾಶ ಸಿಕ್ಕಂತೆ ವಾಸಿಸಿದರು ||೨೩||

ಆನಂದಿತರಾದ ಜನರು ಅಲ್ಲಲ್ಲಿ ಅನೇಕ ಕೆರೆಭಾವಿಗಳನ್ನು ನಿರ್ಮಿಸಿ ಸೂರ್ಯನು ಮಕರ ರಾಶಿಯಲ್ಲಿರುವವರೆಗೆ ಪ್ರತಿದಿನ ಸ್ನಾನ ಮಾಡಿ ದೇವತೆಗಳಿಗೂ, ತಮ್ಮ ಪಿತೃಗಳಿಗೂ ತರ್ಪಣವನ್ನು ಮಾಡಿದರು ||೨೪||

ಜನರೆಲ್ಲ ಗುಪ್ತಗಾಮಿನಿಯ ಸಮೀಪಕ್ಕೆ ಬಂದು ನೂರುಭಾವಿಗಳನ್ನು ತೋಡಿದರು ಕೆಲವರು ಸ್ನಾನ–ದಾನ–ಜಪ–ಹೋಮ–ಚಿಕ್ಕಪುಟ್ಟ ಯಜ್ಞ ಮೊದಲಾದವುಗಳನ್ನು ತಮ್ಮ ತಮ್ಮ ಯೋಗ್ಯತಾನುಸಾರ ಮಾಡಿದರು ||೨೫||

ಉದಾರ ಚರಿತರಾದ ಕೆಲಜನರು ಉತ್ಸಾಹದಿಂದ ಬಹುದಕ್ಷಿಣೆ ಅನ್ನದಾನ ಗಳುಳ್ಳ ದೊಡ್ಡ ದೊಡ್ಡ ಯಾಗಗಳನ್ನು ಮಾಡಿದರು ಕೆಲವರು ಶಿವನಾರಾಯಣರ ಪ್ರೀತ್ಯರ್ಥವಾಗಿ ರಥೋತ್ಸವವನ್ನು ನಡಸಿದರು ||೨೬||

ಕೆಲಜನರು ಹಾಲುಹಿಂಡುವ ಕಂಚಿನ ಪಾತ್ರೆ ಕರುಗಳೊಂದಿಗೆ ಗೋವುಗಳನ್ನು ದಾನವಾಗಿತ್ತರು ಆ ಗೋವುಗಳ ಶೃಂಗಗಳನ್ನು ಬಂಗಾರದಿಂದ ಹಾಗೂ ಖುರಗಳನ್ನು ಬೆಳ್ಳಿಯಿಂದ ಅಲಂಕರಿಸಿದ್ದರು ಅವುಗಳ ಬೆನ್ನುಗಳ ಮೇಲೆ ತಾಮ್ರ ಪತ್ರಗಳನ್ನು ಹೊದಿಸಿದ್ದರು. ಬಂಗಾರದ ಬಟ್ಟೆಗಳಿಂದ ಸಿಂಗರಿಸಿದ್ದರು. ||೨೭||

ಧರ್ಮ ವಿಧಾನಗಳನ್ನು ಬಲ್ಲ ಜನರು ಕ್ಷೇತ್ರಕ್ಕಾಗಮಿಸಿದ್ದ ಬ್ರಾಹ್ಮಣೋತ್ತಮ ರನ್ನು ಭಕ್ತಿಯಿಂದ ಪೂಜಿಸಿ ಈ ದಾನದಿಂದ ಶ್ರೀಹರಿಯು ಪ್ರೀತನಾಗಲೆಂದು ಆಶಿಸಿ ದಾನ ಮಾಡಿದರು ದಾನ ಸ್ವೀಕರಿಸಿದ ಬ್ರಾಹ್ಮಣರು ಕುಲೀನರೂ ಶೀಲಸಂಪನ್ನರೂ, ಬಡ ಕುಟುಂಬದವರೂ ಆಗಿದ್ದರು ||೨೮||

ಬೇರೆ ಕೆಲ ವೈದಿಕ ಜನರು ಸಂಚಿತ ಪಾಪ ಪರಿಹಾರಕ್ಕಾಗಿ ಚಿತ್ತಶುದ್ಧಿಗಾಗಿ, ಶಿವಪ್ರೀತಿಗಾಗಿ, ಪ್ರಜ್ವಲಿಸುತ್ತಿದ್ದ ಅಗ್ನಿಯಲ್ಲಿ ಮಂತ್ರಪೂರ್ವಕ ತಿಲಾಹುತಿಗಳನ್ನು ಸಮರ್ಪಿಸಿದರು. ||೨೯||

ಕೆಲವರು ಪರಶಿವನಿಗೆ ಮಹನ್ಯಾಸಪೂರ್ವಕ ರುದ್ರಾಭಿಷೇಕವನ್ನು ಮಾಡಿದರೆ ಇತರ ಕೆಲ ಜನರು ರುದ್ರಮಂತ್ರ ಹಾಗೂ ಶಿವಪಂಚಾಕ್ಷರ್ಯಾದಿ ಮಹಾಮಂತ್ರಗಳನ್ನು ಜಪಿಸಿದರು ||೩೦||

ಪಂಚಾಮೃತೈರಿಕ್ಷುರಸೈಃ ಸುಗಂಧಿ–
ತೋಯೈರಕುರ್ವನ್ ಸುಮಹಾಭಿಷೇಕಮ್ ।
ಶ್ರೀವೀರನಾರಾಯಣತೋಷಣಾಯ
ತದ್ದೇವತಾಕೈಃ ಪುರುಷಾದಿಸೂಕ್ತೈಃ ॥೩೧॥

ಆನರ್ಚುರೀಡ್ಯಂ ಪುರುಷಂ ಪುರಾಣಂ
ದಳೈಸ್ತುಲಸ್ಯಾ ವಿವಿಧೈಶ್ಚ ಪುಷ್ಪೈಃ ।
ಧೂಪೈಶ್ಚ ದೀಪೈಃ ನರಸೋಪಹಾರೈ–
ಸ್ತಾಂಬೂಲನಾನಾಫಲದಕ್ಷಿಣಾಭಿಃ ॥೩೨॥

ಪ್ರದಕ್ಷಿಣಾಭಿರ್ನತಿಭಿಃ ಸ್ತವೈಶ್ಚ
ಪ್ರಸಾದಯಾಮಾಸುರುದಾರಮೂರ್ತಿಮ್ ।
ಮಿಷ್ಟಾನ್ನದಾನೈರಪರೇ ದ್ವಿಜಾಗ್ರ್ಯಾನ್
ಸಂತರ್ಪಯಾಮಾಸುರುದಾರಸತ್ತ್ವಾಃ ॥೩೩॥

ಉಷಿತ್ವಾ ತತ್ರ ತಂ ಮಾಸಂ ಕೃತ್ವಾ ಯಾತ್ರಾಂ ಯಥಾವಿಧಿ ।
ಜನಾಃ ಸುಕೃತಿನೋ ದೇಶಂ ಸ್ವಂ ಸ್ವಂ ಜಗ್ಮುಸ್ತಪೋಧನಾಃ ॥೩೪॥

ಏವಂ ಪ್ರತ್ಯಬ್ದಮಾಜಗ್ಮುರ್ಜನಾಃ ಕ್ರತುಪುರಂ ಶುಭಮ್ ।
ಸಾ ಯಾತ್ರಾ ಮಾಕರೀ ವಿಪ್ರಾಃ ಪುಣ್ಯಾ ಸಾದ್ಯಾಪ್ಯುಪಾರಮತ್ ॥೩೫॥

ಅತಃಪರಂ ಕಲೌ ಪ್ರಾಪ್ತೇ ಪ್ರಾಯಶಃ ಪಾಪಿನೋ ಜನಾಃ ।
ಅವಜ್ಞಾಸ್ಯಂತಿ ತೀರ್ಥಾನಿ ಕ್ಷೇತ್ರಾಣಿ ಚ ಕುಬುದ್ಧಯಃ ॥೩೬॥

ತೀರ್ಥಾನಿ ದೂಷಯಿಷ್ಯಂತಿ ಲುಂಠಯಿಷ್ಯಂತಿ ಯಾತ್ರಿಕಾನ್ ।
ದೇವಬ್ರಾಹ್ಮಣವೃತ್ತೀನಾಂ ಕರಿಷ್ಯಂತಿ ವಿಲೋಪನಮ್ ॥೩೭॥

ಇತ್ಯಾದಯೋ ಧರ್ಮಲೋಪಾ ಭವಿಷ್ಯಂತಿ ಕಲೌಯುಗೇ ।
ಪಾಷಂಡಿನೋ ಭವಿಷ್ಯಂತಿ ಧರ್ಮಪ್ರಲಯಕಾರಿಣಃ ॥೩೮॥

ವಿರಲಾಸ್ತತ್ರ ಧರ್ಮಿಷ್ಠಾ ಭವಿಷ್ಯಂತಿ ಕ್ವಚಿತ್ ಕ್ವಚಿತ್ ।
ಸ್ಥಾಸ್ಯಂತಿ ತೇಷಾಂ ದೇಶೇಷು ದೇವಬ್ರಾಹ್ಮಣವೃತ್ತಯಃ ॥೩೯॥

ಯಥೋದಯತಿ ತಿಗ್ಮಾಂಶೌ ಸಮುಲ್ಲಸತಿ ಪಂಕಜಮ್ ।
ತಥೋಲ್ಲಸತಿ ಸದ್ಧರ್ಮೋ ಧರ್ಮಿಷ್ಠೇ ಸತಿ ರಾಜನಿ ॥೪೦॥

ಇದೇ ರೀತಿ ಕೆಲವರು ಪುರುಷ ಸೂಕ್ತ ಮೊದಲಾದವುಗಳನ್ನು ಪಠಿಸಿ ಪಂಚಾಮೃತಗಳಿಂದ, ಕಬ್ಬಿನ ಹಾಲಿನಿಂದ, ಸುಗಂಧ ಜಲದಿಂದ, ವೀರನಾರಾಯಣನಿಗೆ ಮಹಾಭಿಷೇಕವನ್ನು ಮಾಡಿದರು ।।೩೧।।

ಸ್ತುತ್ಯನಾದ ಪುರಾಣಪುರುಷ ಶ್ರೀ ವೀರನಾರಾಯಣನನ್ನು ತುಳಸೀ ದಳ ಗಳಿಂದ ವಿವಿಧ ಪುಷ್ಪಗಳಿಂದ ಪೂಜಿಸಿದರು ಧೂಪದೀಪಗಳನ್ನು ಬೆಳಗಿ ಷಡ್ರಸೋಪೇತ ವಾದ ಪಕ್ವಾನ್ನಗಳನ್ನು ನೈವೇದ್ಯ ಮಾಡಿ ಬಹುದಕ್ಷಿಣೆಯೊಂದಿಗೆ ತಾಂಬೂಲವನ್ನು ನಿವೇದಿಸಿದರು ।।೩೨।।

ಪ್ರದಕ್ಷಿಣೆ ನಮಸ್ಕಾರಗಳಿಂದ, ಸ್ತುತಿಗಳಿಂದ, ಉದಾರನಾದ ಪ್ರಭುವನ್ನು ಪ್ರಸನ್ನ ಗೊಳಿಸಿದರು ಉದಾರ ಬುದ್ಧಿಯ ಕೆಲ ಜನರು ಮೃಷ್ಟಾನ್ನ ಭೋಜನಗಳಿಂದ ವಿಪ್ರ ಸಂತರ್ಪಣೆಯನ್ನು ನೆರವೇರಿಸಿದರು ।।೩೩।।

ಹೀಗೆ ಮಕರ ಮಾಸವನ್ನು ಕ್ರತುಪುರದಲ್ಲಿಯೇ ಕಳೆದು ಯಥಾವಿಧಿ ಯಾತ್ರೆಯನ್ನು ನೆರವೇರಿಸಿ ಪುಣ್ಯವನ್ನು ಸಂಪಾದಿಸಿದ ಆ ತಪಸ್ವಿ ಜನರು ತಮ್ಮ ತಮ್ಮ ನಗರಗಳಿಗೆ ಹಿಂತಿರುಗಿದರು ।।೩೪।।

ವಿಪ್ರರೇ! ಇದೇ ರೀತಿ ಪ್ರತಿವರ್ಷವೂ ಜನರು ಕ್ರತುಪುರಕ್ಕೆ ಹೋಗ ಲಾರಂಭಿಸಿದರು ಪಾವನವಾದ ಮಕರ ಸಂಕ್ರಮಣದ ಯಾತ್ರೆಯು ಇಂದಿಗೂ ನಡೆದು ಕೊಂಡು ಬಂದಿದೆ ।।೩೫।।

ಮುಂದ ಕಲಿಯುಗ ಬಂದಾಗ ಬಹಳಷ್ಟು ಜನರು ದುರ್ಬುದ್ಧಿಗಳೂ ಪಾಪಿಷ್ಠರೂ ಆಗಿ ತೀರ್ಥಕ್ಷೇತ್ರಗಳನ್ನು ಕಡೆಗಣಿಸುತ್ತಾರೆ ।।೩೬।।

ತೀರ್ಥಕ್ಷೇತ್ರಗಳನ್ನು ದೂಷಿಸುತ್ತ, ಯಾತ್ರಿಕರನ್ನು ಸೂರೆಗೈಯುತ್ತ ದೇವ ಬ್ರಾಹ್ಮಣರ ಜೀವನೋಪಾಯ ವೃತ್ತಿಗಳನ್ನು ಹಾಳು ಮಾಡುತ್ತಾರ. ।।೩೭।।

ಇದೇ ರೀತಿಯ ಅನೇಕ ಧರ್ಮಲೋಪಗಳು ಕಲಿಯುಗದಲ್ಲಿ ಹೆಚ್ಚಾಗಿ ನಡೆಯುತ್ತವೆ. ಜನರು ಪಾಷಂಡಿಗಳಾಗಿ ಧರ್ಮವನ್ನು ಹಾಳು ಮಾಡುವರು ।।೩೮।।

ಕಲಿಯುಗದಲ್ಲಿ ಧಾರ್ಮಿಕ ರಾಜರು ಬಹಳ ವಿರಳವಾಗಿ ಅಲ್ಲಲ್ಲಿ ಕಾಣ ಸಿಗುತ್ತಾರೆ. ಅವರ ದೇಶಗಳಲ್ಲಿ ದೇವಬ್ರಾಹ್ಮಣ ವೃತ್ತಿಗಳು ಇರುತ್ತವೆ. ಪ್ರಭಾಕರನು ಉದಿಸಿದೊಡನೆ ಕಮಲವು ಅರಳುವಂತೆ ಧರ್ಮಿಷ್ಠನಾದ ರಾಜನಿದ್ದರೆ ಧರ್ಮವೂ ಸಹ ಬೆಳಗಿಕೊಂಡಿರುತ್ತದೆ. ।।೩೯–೪೦।।

ಪ್ರಚರಂತಿ ಯಥಾ ರಾತ್ರೌ ಪಿಶಾಚಾಃ ಪ್ರಾಣಿಹಿಂಸಕಾಃ ।
ಪ್ರಚರಂತಿ ದುರಾಚಾರಾಸ್ತಥಾ ಪಾಪಿನಿ ರಾಜನಿ ॥೪೧॥
ತೀರ್ಥಕ್ಷೇತ್ರಾದಿಮಾಹಾತ್ಮ್ಯಂ ಮಾಹಾತ್ಮ್ಯಂ ಶ್ರೌತಕರ್ಮಣಾಮ್ ।
ಮಾಹಾತ್ಮ್ಯಂ ಬ್ರಾಹ್ಮಣಾನಾಂ ಚ ಮಾಹಾತ್ಮ್ಯಂ ಚ ತಪಸ್ವಿನಾಮ್॥೪೨॥
ವೇದಶಾಸ್ತ್ರಾದಿವಿದ್ಯಾನಾಂ ದೇವತಾನಾಂ ತಥೈವ ಚ ।
ಪ್ರಕೃಷ್ಟಂ ಜಾಯತೇ ರಾಜ್ಞಿ ಧರ್ಮಿಷ್ಠೇ ಸತಿ ನಾನ್ಯಥಾ ॥೪೩॥
ಕೃತಪ್ರವರ್ತಕೋ ರಾಜಾ ರಾಜಾ ನೇತಾ ಕಲೇರಪಿ ।
ರಾಜನ್ವತಿ ಮಹಾದೇಶೇ ನಿವಸಂತಿ ತಪೋಧನಾಃ ॥೪೪॥
ಚಾತುರ್ವರ್ಣ್ಯಂ ಚ ತತ್ರೈವ ಸುವೃಷ್ಟಿಃ ಸಸ್ಯಸಂಪದಃ ।
ತತ್ರ ಕ್ಷೇತ್ರಾಣಿ ತೀರ್ಥಾನಿ ದೇವತಾಯತನಾನಿ ಚ ॥೪೫॥
ಧರ್ಮ್ಯಾ ವಿವಾಹಾಸ್ತತ್ರೈವ ಶ್ರೌತಸ್ಮಾರ್ತಾದಿಸತ್ಕ್ರಿಯಾಃ ।
ಮಾಹಾತ್ಮ್ಯಪ್ರಕಟೀಭಾವಾಃ ಸರ್ವೇಷಾಂ ತತ್ರ ಜಾಯತೇ ॥೪೬॥
ತತ್ಸರ್ವಂ ಲುಪ್ಯತೇ ತತ್ರ ಯತ್ರ ರಾಜಾ ನ ಧಾರ್ಮಿಕಃ ।
ಕಾಲೋ ವಾ ಕಾರಣಂ ರಾಜ್ಞೋ ರಾಜಾ ವಾ ಕಾಲಕಾರಣಮ್ ॥೪೭॥
ಸಿದ್ಧಾಂತಸ್ತತ್ರ ದೃಷ್ಟೋಽಸ್ತಿ ರಾಜಾ ಕಾಲಸ್ಯ ಕಾರಣಮ್ ।
ಕಲಾವಪಿ ಭವಿಷ್ಯಂತಿ ರಾಜಾನೋ ಯತ್ರ ಧಾರ್ಮಿಕಾಃ ॥೪೮॥
ತೀರ್ಥಕ್ಷೇತ್ರಾದಿಮಾಹಾತ್ಮ್ಯಂ ಸರ್ವಂ ತತ್ರ ಭವಿಷ್ಯತಿ ।
ಕೃತಾದಿಷು ಯುಗೇಷ್ವಾಸನ್ ನೃಪಾಃ ಕೇಚಿದಧಾರ್ಮಿಕಾಃ ॥೪೯॥
ಕಲಾವಪಿ ಭವಿಷ್ಯಂತಿ ನೃಪಾಃ ಕೇಚನ ಧಾರ್ಮಿಕಾಃ ।
ತಸ್ಮಾತ್ಕಲಿರಿತಿ ಪ್ರಾಜ್ಞಾ ಯತ್ರ ವಕ್ಷ್ಯಂತಿ ನೋ ನೃಪಾಃ ॥೫೦॥
ಧರ್ಮಃ ಸರ್ವಾತ್ಮಕಸ್ತತ್ರ ಸರ್ವಂ ಸಂಪತ್ಸ್ಯತೇ ಧ್ರುವಮ್ ।
ಅದೃಷ್ಟವಾದಂ ಸಂತ್ಯಜ್ಯ ಲೋಕಾ ಯತ್ನಂ ಪ್ರಕುರ್ವತೇ ॥೫೧॥
ಏವಂ ತ್ಯಕ್ತ್ವಾ ಕಾಲವಾದಂ ಧರ್ಮಂ ಕುರ್ಯಾದ್ವಿಚಕ್ಷಣಃ ॥೫೨॥
ನ ಜಾತು ಕಾಮಾನ್ನ ಭಯಾನ್ನ ಲೋಭಾ
ದ್ಧರ್ಮಂ ಜಹ್ಯಾಜ್ಜೀವಿತಸ್ಯಾಽಪಿ ಹೇತೋಃ ।
ತಸ್ಮಾದ್ಧರ್ಮಃ ಸೇವನೀಯಃ ಪ್ರಯತ್ನಾತ್
ಸತ್ಯಂ ಸತ್ಯಂ ಪ್ರತಿಜಾನಾಮಿ ಸತ್ಸು ॥೫೩॥

ರಾಜನು ಪಾಪಿಯಾಗಿದ್ದರೆ ರಾತ್ರಿಯ ವೇಳೆ ಉಪದ್ರವಕಾರಿಗಳಾದ ಪಿಶಾಚಗಳು ತಿರುಗಾಡುವಂತೆ ಪಾಪಿಜನರು ಸಂಚರಿಸುತ್ತಾರೆ ।।೪೧।।

ಮಹಾರಾಜನು ಧರ್ಮನಿಷ್ಠನಾಗಿದ್ದರೆ ಮಾತ್ರ ತೀರ್ಥಕ್ಷೇತ್ರಗಳ, ಶ್ರೌತ ಕರ್ಮಗಳ, ವಿಪ್ರರ, ತಪಸ್ವಿಗಳ ಮಹಾತ್ಮೆಯು ವಿಪುಲವಾಗುತ್ತವಲ್ಲದೇ ವೇದಶಾಸ್ತ್ರಾದಿ ವಿದ್ಯೆಗಳ ಹಾಗೂ ದೇವತೆಗಳ ವೈಭವವು ಹೆಚ್ಚಾಗುತ್ತದೆ. ಇಲ್ಲದಿದ್ದರೆ ಇಲ್ಲ ।।೪೨–೪೩।।

ಈ ಕಲಿಯುಗವನ್ನು ಕೂಡ ನಿಗ್ರಹಿಸುವ ಯೋಗ್ಯತೆಯುಳ್ಳ ಅರಸನು ಕಲಿಯುಗವನ್ನು ಸಹ ಕೃತಯುಗವನ್ನಾಗಿ ಮಾರ್ಪಡಿಸುತ್ತಾನೆ ಇಂತಹ ರಾಜನನ್ನು ಪಡೆದ ಶ್ರೇಷ್ಠ ದೇಶದಲ್ಲಿ ತಪಸ್ವಿ ಮೊದಲಾದವರು ನೆಲಸುತ್ತಾರೆ ।।೪೪।।

ಆತನ ದೇಶದಲ್ಲಿ ಚಾತುರ್ವರ್ಣ್ಯಗಳು ನೆಲೆಸಿ ಸುವೃಷ್ಟಿಯಾಗಿ ಸಸ್ಯಗಳೆಲ್ಲ ಸಮೃದ್ಧವಾಗುತ್ತವೆ ಆ ದೇಶದಲ್ಲಿ ತೀರ್ಥಕ್ಷೇತ್ರಗಳು, ದೇವಮಂದಿರಗಳು ನಿರ್ಮಾಣ ಗೊಳ್ಳುತ್ತವೆ. ವಿಧಿವತ್ತಾದ ಧರ್ಮವಿವಾಹಗಳು ಹಾಗೂ ಶ್ರೌತಸ್ಮಾರ್ತಕರ್ಮಗಳು ನಡೆಯುತ್ತವೆ ಈ ಎಲ್ಲವುಗಳ ಮಹಿಮೆಯು ಸರ್ವತ್ರ ಪ್ರಕಾಶಗೊಳ್ಳುತ್ತದೆ ।।೪೫–೪೬।।

ಆದರೆ ರಾಜನು ಅಧಾರ್ಮಿಕನಾಗಿದ್ದರೆ ಈ ಎಲ್ಲವೂ ನಾಶವಾಗುತ್ತವೆ ''ಕಾಲವು ರಾಜನನ್ನು ನಿಯಂತ್ರಿಸಬಲ್ಲದೋ ಅಥವಾ ರಾಜನೇ ಕಾಲವನ್ನೇ ನಿಯಂತ್ರಿಸ ಬಲ್ಲನೋ ಎಂಬ ವಿಚಾರವು ಪ್ರಸ್ತುತವಾದಾಗ ರಾಜನೇ ಕಾಲದ ನಿಯಂತ್ರಕನೆಂಬ ಸಿದ್ಧಾಂತವು ಶಾಸ್ತ್ರಾನುಭವ ಗೋಚರವಾಗಿದೆ. ಕಲಿಯುಗದಲ್ಲಿ ಸಹ ಧರ್ಮನಿಷ್ಠರಾದ ರಾಜ ಮಹಾರಾಜರು ಜನಿಸುವರು ಅವರ ದೇಶದಲ್ಲಿ ಪುಣ್ಯಕ್ಷೇತ್ರ ತೀರ್ಥಗಳ ಮಹಿಮೆಯು ಜಾಗೃತವಾಗಿರುತ್ತದೆ ಕೃತ–ದ್ವಾಪರಾದಿ ಯುಗಗಳಲ್ಲಿ ಕೂಡ ಕೆಲವು ಅಧಾರ್ಮಿಕ ರಾಜರು ಇದ್ದರು ।।೪೭–೪೯।।

ಹಾಗೆಯೇ ಕಲಿಯುಗದಲ್ಲಿಯೂ ಸಹ ಕೆಲವು ರಾಜರು ಧಾರ್ಮಿಕರಾಗುವರು ಇದನ್ನೆಲ್ಲ ಗಮನಿಸಿಯೇ ಅಭಿಜ್ಞರು ''ಯಾವ ಕಾಲದಲ್ಲಿ ಧಾರ್ಮಿಕ ಅರಸರು ಸರ್ವಥಾ ಇರುವದಿಲ್ಲವೋ ಅದೇ ಕಲಿಯುಗ'' ಎಂದು ಹೇಳುವರು ।।೫೦।।

ಧಾರ್ಮಿಕ ಅರಸನಿದ್ದ ಕಾಲದಲ್ಲಿಯೇ ಧರ್ಮವು ಎಲ್ಲ ರೀತಿಯಿಂದ ವೃದ್ಧಿಯನ್ನು ಹೊಂದಿ ಶ್ರೇಯಸ್ಸಿಗೆ ಕಾರಣವಾಗುತ್ತದ ಅಂತೆಯೇ ತಿಳಿದವರು ''ದೈವವಿದ್ದಂತೆ ಆಗಲಿ'' ಎಂಬ ಅಪಸಿದ್ಧಾಂತವನ್ನು ಸ್ವೀಕರಿಸದೇ ಪ್ರಯತ್ನ ಪರಾಯಣ ರಾಗುವರು ಆದ್ದರಿಂದ ಸಾರಾಸಾರ ವಿಚಾರಶೀಲರು ಕಾಲವಾದವನ್ನು ಧಿಕ್ಕರಿಸಿ ಧರ್ಮಾಚರಣೆಯನ್ನು ಮಾಡಬೇಕು. ಯಾವದೇ ವಿಷಯವಾಸನ, ಹದರಿಕ, ಆಶೆ, ತನ್ನ ಜೀವನವನ್ನು ಉಳಿಸಿಕೊಳ್ಳುವುದು ಈ ಯಾವ ಕಾರಣದಿಂದಲೂ ಎಂದೆಂದೂ ಧರ್ಮವನ್ನು ಬಿಡಬಾರದು ಅರ್ಥಾತ್ ಪ್ರಯತ್ನಪೂರ್ವಕವಾಗಿ ಧರ್ಮಾಚರಣ ಮಾಡಬೇಕೆಂಬ ಪರಮ ಸತ್ಯವನ್ನು ಸಜ್ಜನರಾದ ತಮ್ಮಲ್ಲಿ (ಶೌನಕಾದಿಗಳಲ್ಲಿ) ನಿವೇದಿಸುತ್ತೇನೆ ।।೫೧–೫೩।।

ಇದಂ ಕ್ರತುಪುರಾಖ್ಯಾನಂ ಸರ್ವಪಾಪಪ್ರಣಾಶನಮ್ ।
ಶ್ರದ್ಧಧಾನೈರ್ಧರ್ಮವರ್ಯೈಃ ಶ್ರೋತವ್ಯಂ ನಿತ್ಯಮಾಸ್ತಿಕೈಃ ॥೫೪॥

ಪುರಾಣೇಷ್ವರ್ಥವಾದತ್ವಂ ಯೇ ವದಿಷ್ಯಂತಿ ದುರ್ಬುಧಾಃ ।
ತೇಷಾಂ ಪುಣ್ಯಾನಿ ನಶ್ಯಂತಿ ಸಂಚಿತಾನಿ ಚ ತೈಃ ಪುರಾ ॥೫೫॥

ಅಶ್ರದ್ಧಯಾ ಪುರಾಣಾನಿ ಯೇ ಶೃಣ್ವಂತಿ ನರಾಧಮಾಃ ।
ಅಸತ್ಕೃತ್ಯಾನಮಸ್ಕೃತ್ಯ ತೇಷಾಂ ಪಾಪಂ ಪದೇ ಪದೇ ॥೫೬॥

ಯೇ ಶ್ರದ್ಧಯಾ ಚ ಭಕ್ತ್ಯಾ ಚ ತಥಾ ಸತ್ಕಾರವಂದನೈಃ ।
ಶ್ರೋಷ್ಯಂತಿ ಸಜ್ಜನಾ ನಿತ್ಯಂ ತೇಷಾಂ ಪುಣ್ಯಂ ಪದೇಪದೇ ॥೫೭॥

ಮುಹೂರ್ತಂ ವಾ ತದರ್ಧಂ ವಾ ಯೇ ಪುರಾಣಾನಿ ಶೃಣ್ವತೇ ।
ತ ಏವ ಮಾನವಾಃ ಸರ್ವೇ ಯಾಂತಿ ಬ್ರಹ್ಮ ಸನಾತನಮ್ ॥೫೮॥

ಪುರಾಣವಾಚಕಂ ಭಕ್ತ್ಯಾ ಪೂಜಯಂತಿ ಚ ಯೇ ನರಾಃ ।
ತ ಏವ ಕಥಿತಾಃ ಶಾಸ್ತ್ರೇ ಯಥೋಕ್ತಫಲಭಾಗಿನಃ ॥೫೯॥

ಯಃ ಶೈವೋ ವಿಷ್ಣುಮಾಹಾತ್ಮ್ಯಂ ಪುರಾಣೇಷು ವಿಲೋಪಯೇತ್ ।
ವೈಷ್ಣವೋ ವಾಪಿ ಮಾಹಾತ್ಮ್ಯಂ ಶೈವಂ ಸ ಬ್ರಹ್ಮಹಾ ಸ್ಮೃತಃ ॥೬೦॥

ಶೈವಾನಾಂ ವೈಷ್ಣವಾನಾಂ ವಾ ವಸ್ತ್ವಭೇದದೃಶಾಂ ಸತಾಮ್ ।
ಅಮತ್ಸರಾಣಾಂ ದಾಂತಾನಾಂ ಶಾಂತಾನಾಂ ವೀತರಾಗಿಣಾಮ್ ॥೬೧॥

ಸ್ವದಾರನಿರತಾನಾಂ ಚ ವಾಗ್ಮಿನಾಂ ಸಂಶಯಚ್ಛಿದಾಮ್ ।
ಪೌರಾಣಿಕಾನಾಂ ಶ್ರೋತವ್ಯಂ ಪುರಾಣಂ ಭಾವಪೂರ್ವಕಮ್ ॥೬೨॥

ಇತ್ಯೇತನ್ಮಹದಾಖ್ಯಾನಮಧಿಕೃತ್ಯ ಕ್ರತೋಃ ಪುರಮ್ ।
ವರ್ಣಿತಂ ಸರ್ವಪಾಪಘ್ನಂ ಭೂಯಃ ಕಿಂ ಶ್ರೋತುಮಿಚ್ಛಥ ॥೬೩॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ
ಕ್ರತುಪುರಮಾಹಾತ್ಮ್ಯೇ
ತೀರ್ಥಕ್ಷೇತ್ರವರ್ಣನಂ ನಾಮ ಪಂಚದಶೋಽಧ್ಯಾಯಃ

ಸಮಸ್ತ ಪಾಪ ಪರಿಹಾರಕವಾದ ಈ ಕ್ರತುಪುರ ಮಾಹಾತ್ಮೆಯನ್ನು ಧಾರ್ಮಿಕ ಜನರು ಶ್ರದ್ಧಾವಂತರಾಗಿ ಅನುದಿನವೂ ಕೇಳಬೇಕು. ।।೫೪।।

ಪುರಾಣಗಳೆಂದರೆ ಕೇವಲ ಅರ್ಥವಾದ (ಗೊಳ್ಳು ಪ್ರಶಂಸೆ) ಎಂದು ಹೇಳುವ ಮೂರ್ಖ ಪಂಡಿತರು ತಮ್ಮ ಪೂರ್ವಾರ್ಜಿತ ಸಕಲ ಪುಣ್ಯಗಳನ್ನು ಕಳೆದು ಕೊಳ್ಳುವರು ।।೫೫।।

ಯಾವ ವಿಧದ ಶ್ರದ್ಧೆಯೂ ಇಲ್ಲದೇ ಪುರಾಣವನ್ನು ಕೇಳುವ ನರಾದಮರು ಮತ್ತು ಪುರಾಣ ಹೇಳುವವರಿಗೆ ನಮಸ್ಕಾರ, ಸತ್ಕಾರ ಮಾಡದೇ ಇರುವವರು ಹೆಜ್ಜೆ ಹೆಜ್ಜೆಗೂ ಪಾಪವನ್ನು ಹೊಂದುವರು ।।೫೬।।

ಶ್ರದ್ಧಾ ಭಕ್ತಿಗಳಿಂದ, ಸತ್ಕಾರ ನಮನಗಳೊಂದಿಗೆ ಪುರಾಣವನ್ನು ಕೇಳುವ ಸಜ್ಜನರ ಪುಣ್ಯವು ಅನಂತವಾಗುತ್ತದೆ ।।೫೭।।

ಕೇವಲ ಮುಹೂರ್ತ (೪೮ ಮಿನಿಟು) ಅಥವಾ ಅರ್ಧ ಮುಹೂರ್ತದಷ್ಟು ಸಮಯ ಪುರಾಣವನ್ನು ಕೇಳುವ ಎಲ್ಲ ಮಾನವರೂ ಪರಮ ಪದವನ್ನೇ ಪಡೆಯುತ್ತಾರೆ ।।೫೮।।

ಪುರಾಣ ಹೇಳುವವರನ್ನು ಭಕ್ತಿಯಿಂದ ಪೂಜಿಸುವವರೇ ಹಿಂದೆ ಹೇಳಿದ ಫಲಗಳನ್ನು ಪಡೆಯುವರೆಂದು ಶಾಸ್ತ್ರದಲ್ಲಿ ಹೇಳಿದ್ದಾರೆ ।।೫೯।।

ಪುರಾಣ ಹೇಳುವಾಗ ವೈಷ್ಣವ ವಾಚಕರು ಅದರಲ್ಲಿದ್ದ ಶಿವಮಾಹಾತ್ಮ್ಯವನ್ನೂ, ಶೈವ ವಾಚಕರು ವಿಷ್ಣು ಮಾಹಾತ್ಮ್ಯವನ್ನೂ ಹೇಳದೇ ಇದ್ದರೆ ಆ ಉಭಯತರಿಗೆ ಬ್ರಹ್ಮಹತ್ಯಾ ದೋಷ ತಟ್ಟುವದು. ।।೬೦।।

ಪುರಾಣ ಹೇಳುವವರು ಶೈವರೇ ಆಗಿರಲಿ ವೈಷ್ಣವರೇ ಆಗಿರಲಿ, ಅವರು ಹರಿಹರರಲ್ಲಿ ಭೇದವನ್ನು ಕಾಣದೇ ಮಾತ್ಸರ್ಯವನ್ನುಬಿಟ್ಟು ಲೋಭಿಗಳಾಗದೇ ಶಾಂತರು ದಾಂತರೂ ಆಗಿರಬೇಕು ಮತ್ತು ಪರಸ್ತ್ರೀಯರಲ್ಲಿ ಮನಸ್ಸಿಡದೇ ವಾಗ್ಮಿಗಳಾಗಿ ಸಂಶಯ ನಿವಾರಿಸಲು ಸಮರ್ಥರಿರಬೇಕು. ಇಂತಹ ಪೌರಾಣಿಕರು ಹೇಳುವ ಪುರಾಣವನ್ನು ಶ್ರದ್ಧಯಿಂದ ಕೇಳಬೇಕು ।।೬೧-೬೨।।

ಋಷಿಗಳೇ! ಇಂತಹ ಉತ್ತಮವಾದ ಕ್ರತುಪುರ ಮಹಿಮೆಯನ್ನು ಹೇಳಿದೆ. ಇದು ಎಲ್ಲ ಪಾಪಗಳ ನಾಶಕವಾಗಿದ ಮತ್ತೆ ನೀವು ಏನು ಕೇಳಲಿಚ್ಛಿಸುವಿರಿ. ।।೬೩।।

ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ
ಕ್ರತುಪುರಮಾಹಾತ್ಮೆಯಲ್ಲಿ
ತೀರ್ಥಕ್ಷೇತ್ರ ವರ್ಣನೆ ಎಂಬ ಹದಿನೈದನೆಯ ಅಧ್ಯಾಯವು ಮುಗಿಯಿತು.

# ಅಥ ಷೋಡಶೋಽಧ್ಯಾಯಃ

**ಋಷಯ ಊಚುಃ –**

ತ್ವಯಾ ಕ್ರತುಪುರಂ ಕ್ಷೇತ್ರಂ ಸಮಂತಾದ್ಯೋಜನತ್ರಯಮ್ ।
ಸೂತೋಕ್ತಂ ಸಂತಿ ಕಾಸ್ತತ್ರ ದೇವತಾಃ ಶಂಸ ತಾ ಹಿ ನಃ ॥೧॥

**ಸೂತ ಉವಾಚ –**

ಪಶ್ಚಾತ್ಕ್ರತುಪುರಸ್ಯಾಽಸ್ತಿ ಕ್ಷೇತ್ರಮನ್ನಗಿರೀತಿ ಯತ್ ।
ತಸ್ಯ ವಕ್ಷ್ಯಾಮಿ ಮಾಹಾತ್ಮ್ಯಂ ಶೃಣುಧ್ವಂ ಸುಸಮಾಹಿತಾಃ ॥೨॥

ಪ್ರಧಾನಂ ತತ್ರ ಯತ್ ಕ್ಷೇತ್ರಂ ಯಾವದ್ಯೋಜನಮೀರಿತಮ್ ।
ತತ್ರಾಪ್ಯವಾಂತರಾಣಾಂ ಚ ಕ್ಷೇತ್ರಾಣಾಮಸ್ತಿ ಸಂಕರಃ ॥೩॥

ಇದಮನ್ನಗಿರಿಕ್ಷೇತ್ರಂ ಸಮಂತಾದ್ಯೋಜನಾನ್ವಿತಮ್ ।
ಪೂರ್ವಕ್ಷೇತ್ರೇಣ ಸಂಯುಕ್ತಮತೋಽಧಿಕಫಲಪ್ರದಮ್ ॥೪॥

ಪೂರ್ವಂ ತತ್ರಾಽಭವಲ್ಲಿಂಗಂ ಭೂಗರ್ಭಗತಮುತ್ತಮಮ್ ।
ಪ್ರಾತಃ ಪ್ರಾತಃ ಸಮಾಯಾಂತಿ ಪಂಚ ಕಾಮದುಘಾಃ ಸದಾ ॥೫॥

ಅಭಿಷಿಂಚಂತಿ ತಲ್ಲಿಂಗಂ ಮುಹೂರ್ತಮಮೃತೈಃ ಸ್ವಕೈಃ ।
ಭಕ್ತ್ಯಾಽಭಿಷಿಚ್ಯ ತಲ್ಲಿಂಗಂ ಪ್ರಯಾಂತಿ ತ್ರಿದಿವಂ ಪ್ರತಿ ॥೬॥

ಏವಂ ಗತೇಷು ವರ್ಷಾಣಾಂ ಸಹಸ್ರೈರ್ದೇವಮಾನತಃ ।
ಆಗಚ್ಛದ್ಧಂಸಯಾನೇನ ತತ್ರ ಬ್ರಹ್ಮಾ ಸುರೈಃ ಸಹ ॥೭॥

ತತ್ರಾಽಽಗತೇ ಸುರಶ್ರೇಷ್ಠೇ ಭುವಮುದ್ಭಿದ್ಯ ತತ್ಕ್ಷಣಾತ್ ।
ಲಿಂಗಂ ಪ್ರಾದುರಭೂದ್ದಿವ್ಯಂ ಸರ್ವಲಕ್ಷಣಲಕ್ಷಿತಮ್ ॥೮॥

ತದಾನೀಮೇವ ತಾ ಗಾವಃ ಪಂಚ ತತ್ರ ಸಮಾಗತಾಃ ।
ಊರ್ಧ್ವಗ್ರೀವೋಗ್ರಪುಚ್ಛಾಸ್ತಂ ಪ್ರಣಮ್ಯಾವಸ್ಥಿತಾಃ ಪುರಃ ॥೯॥

ಅಬ್ರವೀಚ್ಚ ಪ್ರಸನ್ನಾತ್ಮಾ ಬ್ರಹ್ಮಾ ಲೋಕಪಿತಾಮಹಃ ।
ಪ್ರಬ್ರೂತ ಯದಭೀಷ್ಟಂ ವಸ್ತತ್ಪ್ರಯಚ್ಛಾಮಿ ಧೇನವಃ' ॥೧೦॥

# ಹದಿನಾರನೆಯ ಅಧ್ಯಾಯ

**ಋಷಿಗಳು ಹೇಳಿದರು –**

ಸೂತ! ನೀನು ತಿಳಿಸಿದ ಕ್ರತುಪುರ ಕ್ಷೇತ್ರದ ಸುತ್ತಲೂ ಮೂರುಯೋಜನಗಳೊಳಗೆ ಯಾವ ಯಾವ ದೇವತೆಗಳಿದ್ದಾರೆ? ಆ ವಿಷಯವನ್ನೆಲ್ಲ ನಮಗೆ ತಿಳಿಸು (ಒಂದು ಯೋಜನವೆಂದರೆ ೧೨ ೮ ಕಿಲೋಮೀಟರ್) ||೧||

**ಸೂತರು ಹೇಳಿದರು –**

ಕ್ರತುಪುರದ ಪಶ್ಚಿಮಕ್ಕೆ 'ಅನ್ನಗಿರಿ' (ಅಣ್ಣಿಗೇರಿ) ಎಂಬ ಕ್ಷೇತ್ರವಿದೆ ನಾನೀಗ ಆ ಕ್ಷೇತ್ರ ಮಹಿಮೆಯನ್ನು ಹೇಳುತ್ತೇನೆ ಸಮಾಧಾನದಿಂದ ಕೇಳಿರಿ ||೨||

ಒಂದು ಯೋಜನದಷ್ಟು ವಿಸ್ತೃತವಾದ ಆ ಆ ಪ್ರಧಾನ ಕ್ಷೇತ್ರದಲ್ಲಿಯೂ ಸಹ ಅವಾಂತರ ಕ್ಷೇತ್ರಗಳು ಬಹಳ ಇವೆ ||೩||

ಈ ಅನ್ನಗಿರಿ ಕ್ಷೇತ್ರವು ಒಂದು ಯೋಜನ ವಿಸ್ತೃತವಾಗಿದೆ ಪೂರ್ವದಿಕ್ಕಿನಲ್ಲಿ ಇರುವ ಮುಖ್ಯ ಕ್ಷೇತ್ರವಾದ ಕ್ರತುಪುರದೊಂದಿಗೆ ಹೊಂದಿಕೊಂಡೇ ಇರುವದರಿಂದ ಅನಂತ ಪುಣ್ಯಫಲವನ್ನು ನೀಡುವುದು. ||೪||

ಬಹು ಹಿಂದೆ ಅನ್ನಗಿರಿಯಲ್ಲಿ ಭೂಗರ್ಭದಲ್ಲಿ ಉತ್ತಮವಾದ ಶಿವಲಿಂಗವೊಂದು ಇತ್ತು ಪ್ರತಿದಿನವೂ ಬೆಳಗ್ಗೆ ಐದು ಕಾಮಧೇನುಗಳು ಆಗಮಿಸಿ ಮುಹೂರ್ತ ಕಾಲ ತಮ್ಮ ಅಮೃತಧಾರೆಗಳಿಂದ ಆ ಶಿವಲಿಂಗಕ್ಕೆ ಅಭಿಷೇಕ ಮಾಡುತ್ತಿದ್ದವು. ಹೀಗೆ ಭಕ್ತಿಯಿಂದ ಶಿವಲಿಂಗಕ್ಕೆ ಅಭಿಷೇಕ ಮಾಡಿ ನಂತರ ಸ್ವರ್ಗಕ್ಕೆ ತೆರಳುತ್ತಿದ್ದವು. ||೫-೬||

ದೇವಮಾನದಿಂದ ಸಹಸ್ರವರ್ಷಗಳುರುಳಿದ ನಂತರ ಆ ಕ್ಷೇತ್ರಕ್ಕ ದೇವತೆಗಳೊಡನೆ ಬ್ರಹ್ಮದೇವನು ಹಂಸಯಾನದಿಂದ ಬಂದಿಳಿದನು. ||೭||

ಸುರಶ್ರೇಷ್ಠನಾದ ಬ್ರಹ್ಮದೇವನು ಅಣ್ಣೀಗೇರಿಗೆ ಬಂದೊಡನೆಯೇ ಭೂಮಿಯ ಬಸಿರನ್ನೊಡೆದು ಸರ್ವಲಕ್ಷಣಸಂಪನ್ನವಾದ ದಿವ್ಯ ಶಿವಲಿಂಗವು ಮೇಲೆದ್ದಿತು. ||೮||

ಅದೇ ವೇಳೆಗೆ ಐದು ಕಾಮಧೇನುಗಳೂ ಅಲ್ಲಿಗೆ ಬಂದು (ದೇವಲೋಕದಲ್ಲಿರತಕ್ಕ ಕಾಮಧೇನುಗಳ ಮುಖ ಮತ್ತು ಬಾಲಗಳು ಊರ್ಧ್ವವಾಗಿರುತ್ತವ ಎಂದು ಪುರಾಣದಲ್ಲಿ ಹೇಳಿದೆ) ಬ್ರಹ್ಮದೇವನನ್ನು ನಮಿಸಿ ಆತನೆದುರು ನಿಂತವು. ||೯||

ಪರಮಸಂತುಷ್ಟನಾದ ಲೋಕಪಿತಾಮಹಬ್ರಹ್ಮದೇವನು 'ಕಾಮಧೇನುಗಳೇ! ನಿಮಗೇನು ಬೇಕು? ಕೇಳಿ ಅದನ್ನು ನೀಡುವ ಎಂದು ಕಾಮಧೇನುಗಳಿಗೆ ಹೇಳಿದನು ||೧೦||

ಕಾಮಧೇನವ ಊಚುಃ –

ಆತ್ಮೀಯೈರಮೃತೈರ್ಬ್ರಹ್ಮನ್ನಿದಂ ಲಿಂಗಂ ನಿರಂತರಮ್ ।
ಅಭಿಷಿಕ್ತಂ ಪ್ರಸನ್ನಾಭಿರಸ್ಮಾಭಿಃ ಶಾಶ್ವತೀಃ ಸಮಾಃ॥೧೧॥
ತಸ್ಮಾತ್ಪ್ರತಿಷ್ಠಾ ಲಿಂಗಸ್ಯ ತ್ವಯಾತ್ರ ಕ್ರಿಯತಾಂ ವಿಧೇ! ।
ಪ್ರಸಿದ್ಧಿಂ ಯಾತು ಲೋಕೇಽಸ್ಮಿನ್ನಮೃತೇಶ್ವರಸಂಜ್ಞಯಾ ॥೧೨॥
ಇದಂ ಕಾಮದುಘಂ ಲಿಂಗಂ ಸಕಾಮಾನಾಂ ಭವಿಷ್ಯತಿ ।
ನಿಷ್ಕಾಮಾನಾಂ ತು ಭಕ್ತಾನಾಂ ಭವಿಷ್ಯತ್ಯಮೃತಂ ತ್ವಿದಮ್ ॥೧೩॥
ಇದಂ ಲಿಂಗಮಸಂಪೂಜ್ಯ ತ್ರಿಕೂಟೇಶಂ ವ್ರಜಂತಿ ಯೇ ।
ತೇಷಾಂ ಯಾತ್ರಾ ನಿಷ್ಫಲಾಽಸ್ತು ವರಮೇತಂ ವೃಣೀಮಹೇ ॥೧೪॥

ಬ್ರಹ್ಮೋವಾಚ –

ಗಾವೋ ವೈ ರುದ್ರದೈವತ್ಯಾಃ ಶ್ರುತಿರೇಷಾ ಸನಾತನೀ ।
ಇತ್ಯಾಲೋಕ್ಯ ಮಯಾ ಯುಷ್ಮತ್ಪ್ರೀತಯೇಽತ್ರ ಸಮಾಗತಮ್ ॥೧೫॥
ಯದ್ಯದಿಷ್ಟಂ ಕಾಮದುಘಾಃ! ಭವತೀನಾಂ ಕರೋಮಿ ತತ್ ।
ಕ್ಷಣಂ ಕುರುಧ್ವಮತ್ರೈವ ಯಾವದತ್ರ ವಸಾಮ್ಯಹಮ್ ॥೧೬॥
ಇತ್ಯುಕ್ತ್ವಾ ಪದ್ಮಭೂರ್ಧೇನೂರಾಹೂಯ ತನಯಾನ್ ಸ್ವಕಾನ್ ।
ಉವಾಚ ಯಜ್ಞಸಂಭಾರಾನ್ ಸಂಭರಧ್ವಂ ಸುರೈಃ ಸಹ॥೧೭॥
ಸಾಮಗ್ರೀ ಕ್ರಿಯತಾಂ ಚಾಪಿ ಲಿಂಗಸ್ಯಾಽಸ್ಯ ಪ್ರತಿಷ್ಠಿತೇಃ ।
ಏಕಾಂ ಕ್ರಿಯಾಂ ದ್ವ್ಯರ್ಥಕರೀಂ ದಿಷ್ಟ್ಯಾ ಕರ್ತುಮಿಹೋತ್ಸವೇ॥೧೮॥
ಇತಿ ಬ್ರಹ್ಮವಚಃ ಶ್ರುತ್ವಾ ದೇವಾಃ ಶಕ್ರಪುರೋಗಮಾಃ ।
ಪುರೋಧಾಯರ್ತ್ವಿಜಶ್ಚಕ್ರುರ್ಯಜ್ಞಾಯತನಮುತ್ತಮಮ್ ॥೧೯॥
ಜನಾಶ್ರಯಂ ಚ ಚಕ್ರುಸ್ತೇ ಪ್ರತಿಷ್ಠಾರ್ಥಂ ಮಹೇಶಿತುಃ ।
ಯಥಾಶಾಸ್ತ್ರಂ ಪದ್ಮಕುಂಡಂ ಚಕ್ರುರ್ಹೋಮಸ್ಯ ಸಿದ್ಧಯೇ ॥೨೦॥
ಭೃಗುಮತ್ರಿಂ ವಸಿಷ್ಠಂ ಚ ಪುಲಸ್ತ್ಯಂ ಪುಲಹಂ ಕ್ರತುಮ್ ।
ಮರೀಚಿಂ ಕಶ್ಯಪಂ ದಕ್ಷಂ ಶುಕ್ರಮಂಗಿರಸಂ ಗುರುಮ್ ॥೨೧॥
ತಥೋತಥ್ಯಂ ಚ ಸಂವರ್ತಂ ಕರ್ದಮಂ ಕಪಿಲಂ ತಥಾ ।
ಯಜ್ಞಾರ್ಥಮೃತ್ವಿಜಸ್ತ್ವೇತಾನ್ ವವ್ರೇ ಸ ಹಿ ನಿಜಾತ್ಮಜಾನ್ ॥೨೨॥
ಜಾಬಾಲವಾಮದೇವಾದೀನ್ ವವ್ರೇ ಲಿಂಗಪ್ರತಿಷ್ಠಿತೇಃ ।
ಆರೇಭೇ ಪ್ರಥಮಂ ಲಿಂಗಪ್ರತಿಷ್ಠಾಂ ಪದ್ಮಸಂಭವಃ ॥೨೩॥

**ಕಾಮಧೇನುಗಳು ಹೇಳಿದವು –**

ಬ್ರಹ್ಮದೇವ! ನಾವು ನಮ್ಮ ಅಮೃತಧಾರೆಗಳಿಂದ ಈ ಶಿವಲಿಂಗಕ್ಕೆ ಬಹು ವರ್ಷಗಳ ಕಾಲ ಸತತ ಸಂತೋಷದಿಂದ ಅಭಿಷೇಕ ಮಾಡಿದ್ದೇವೆ ॥೧೧॥

ಆದ್ದರಿಂದ ಬ್ರಹ್ಮದೇವ! ಈ ಶಿವಲಿಂಗದ ಪ್ರತಿಷ್ಠೆಯನ್ನು ನೀನು ಇಲ್ಲಿ ಮಾಡು. ಲೋಕದಲ್ಲಿ ಈ ಶಿವಲಿಂಗವು 'ಅಮೃತೇಶ್ವರ' ಎಂಬ ಅನ್ವರ್ಥನಾಮ ಪಡೆಯಲಿ ॥೧೨॥

ಈ ಶಿವಲಿಂಗವು ಫಲಾಪೇಕ್ಷಿ ಜನರಿಗೆ 'ಕಾಮಧೇನು'ವೇ ಆಗುತ್ತದೆ ಕೇವಲ ವಿರಕ್ತಭಕ್ತರಿಗೆ 'ಅಮೃತ ' (ಮೋಕ್ಷ) ಸ್ವರೂಪವಾಗುತ್ತದ ॥೧೩॥

ಈ ಶಿವಲಿಂಗವನ್ನು ಪೂಜಿಸದೇ ತ್ರಿಕೂಟೇಶನನ್ನು ಕುರಿತು ಪ್ರಯಾಣಮಾಡುವ ಜನರ ಯಾತ್ರೆಯು ನಿಷ್ಫಲವಾಗಲೆಂದು ನಮಗೆ ವರವನ್ನು ನೀಡು ॥೧೪॥

**ಬ್ರಹ್ಮದೇವನು ಹೇಳಿದನು –**

'ಗಾವೋ ವೈ ರುದ್ರದೇವತಾಃ' (ಗೋವುಗಳಿಗೆ ರುದ್ರನೇ ದೇವತೆ) ಎಂದು ಸನಾತನ ವೇದವೇ ಹೇಳುತ್ತದೆ ಅದನ್ನು ಕಂಡೇ ನಿಮಗೆ ಸಂತೋಷವಾಗಲೆಂದು ನಾನಿಲ್ಲಿಗೆ ಬಂದೆ ॥೧೫॥

ಕಾಮಧೇನುಗಳೇ! ''ನಿಮಗೇನು ಇಷ್ಟವೋ ಅವೆಲ್ಲವನ್ನೂ ನಾನು ಈಡೇರಿಸುತ್ತೇನೆ ನಾನಿಲ್ಲಿರುವವರೆಗೆ ನೀವಿಲ್ಲಿ ಉತ್ಸವವನ್ನಾಚರಿಸಿರಿ'' ಎಂದು ಕಾಮಧೇನುಗಳಿಗೆ ಹೇಳಿ ತನ್ನ ಮಕ್ಕಳನ್ನು ಕರೆದು ''ನೀವು ದೇವತಗಳೊಂದಿಗ ಸೇರಿ ಯಜ್ಞದ ಸಾಮಗ್ರಿಗಳನ್ನು ಸಿದ್ಧಪಡಿಸಿ ಹಾಗೆಯೇ ಈ ಶಿವಲಿಂಗದ ಪ್ರತಿಷ್ಠೆಗಾಗಿ ಸಾಮಗ್ರಿಗಳನ್ನು ಹೊಂದಿಸಿರಿ ನಾನಿಲ್ಲಿ ಎರಡು ಪ್ರಯೋಜನಗಳಿಗ ಕಾರಣವಾಗಿರುವ ಒಂದೇ ಕೆಲಸವನ್ನು ಮಾಡಬಯಸಿದ್ದೇನೆ'' ಎಂದು ತಿಳಿಸಿದನು. ॥೧೬–೧೮॥

ಬ್ರಹ್ಮದೇವನ ಮಾತನ್ನು ಕೇಳಿ ಇಂದ್ರಾದಿದೇವತೆಗಳು ಋತ್ವಿಜರನ್ನು ಮುಂದಿಟ್ಟುಕೊಂಡು ಉತ್ತಮವಾದ ಯಜ್ಞಶಾಲೆಯನ್ನು ನಿರ್ಮಿಸಿದರು.॥೧೯॥

ಮಂಟಪವನ್ನು ಹಾಗೂ ಬಂದ ಜನರು ತಂಗಲು ವಸತಿಗೃಹಗಳನ್ನು ನಿರ್ಮಿಸಿದರು ಪರಶಿವನ ಪ್ರತಿಷ್ಠೆಯ ಹೋಮಸಿದ್ಧಿಗಾಗಿ ಪದ್ಮಕುಂಡವನ್ನು ಶಾಸ್ತ್ರವಿಧಿಯಂತೆ ರಚಿಸಿದರು. ॥೨೦॥

ಲೋಕಪಿತಾಮಹನಾದ ಬ್ರಹ್ಮದೇವನು ''ಭೃಗು–ಅತ್ರಿ –ವಸಿಷ್ಠ–ಪುಲಸ್ತ್ಯ–ಪುಲಹ–ಕ್ರತು–ಮರೀಚಿ–ಕಶ್ಯಪ–ದಕ್ಷ–ಶುಕ್ರ – ಅಂಗಿರ–ಗುರು–ಉತಥ್ಯ–ಸಂವರ್ತ–ಕರ್ದಮ – ಕಪಿಲ ಮೊದಲಾದ ತನ್ನ ತನಯರನ್ನು ಯಜ್ಞದ ಋತ್ವಿಜರನ್ನಾಗಿ ಸ್ವೀಕರಿಸಿದನು. ॥೨೧–೨೨॥

ಜಾಬಾಲ–ವಾಮದೇವ, ಮೊದಲಾದ ಮಹರ್ಷಿಗಳನ್ನು ಲಿಂಗ ಪ್ರತಿಷ್ಠೆಯ ಋತ್ವಿಜರನ್ನಾಗಿ ನೇಮಿಸಿದನು ಬ್ರಹ್ಮದೇವನು ಪ್ರಥಮವಾಗಿ ಶಿವಲಿಂಗ ಪ್ರತಿಷ್ಠೆಯನ್ನು ಪ್ರಾರಂಭಿಸಿದನು. ॥೨೩॥

ಧರ್ಮವತ್ಯಾ ಗಿರಾ ಯುಕ್ತಃ ಕೃತಸ್ತಸ್ಯ ಯಮೋ ವಿಧಿಃ ।
ಮಂಡಪಂ ಪೂಜಯಾಮಾಸ ಪತಾಕಾಭಿರ್ವಿಮಂಡಿತಮ್ ॥೨೪॥

ಹೋಮಂ ಚ ಬಲಿದಾನಂ ಚ ಪ್ರತ್ಯಹಂ ವಿಧಿಪೂರ್ವಕಮ್ ।
ಸಂಪಾತಾಜ್ಯಾವಲೇಪಂ ಚ ರುದ್ರಸೂಕ್ತಾಭಿಷೇಚನಮ್ ॥೨೫॥

ಅನ್ನಸಂತರ್ಪಣಾಯಾನ್ನಪರ್ವತಾನ್ ವ್ಯಧಿತಾತ್ಮಭೂಃ ।
ಸಂಕಲ್ಪಮಾತ್ರೇಣೈವಸತಾನ್ ಪ್ರಿಯಕಾಮಃ ಪ್ರಜಾಪತಿಃ ॥೨೬॥

ತಸ್ಮಾದನ್ನಸ್ಯ ಭೂಯಸ್ತ್ವಾತ್ ಕ್ಷೇತ್ರಮನ್ನಗಿರೀತಿ ಯತ್ ।
ಅಮೃತೇಶ್ವರಸಂಜ್ಞಾ ಚ ದ್ವಯಮನ್ವರ್ಥಕಂ ತ್ವಿದಮ್ ॥೨೭॥

ಏವಂ ಲಿಂಗಪ್ರತಿಷ್ಠಾಯಾಂ ವೃತ್ತಾಯಾಂ ವಿಧಿಪೂರ್ವಕಮ್ ।
ಮೇಘಗಂಭೀರಯಾ ವಾಚಾ ನಿಜಗಾದಾಮೃತೇಶ್ವರಃ ॥೨೮॥

ಅಮೃತೇಶ್ವರ ಉವಾಚ –

ಭೋ ಪದ್ಮಯೋನೇ! ಭೋ ವಿಷ್ಣೋ! ಭೋ ದೇವಾ ಋಷಯೋಽಖಿಲಾಃ।
ಶೃಣ್ವಂತು ಸರ್ವೇ ಮದ್ವಾಕ್ಯಂ ಸರ್ವಲೋಕೋಪಕಾರಕಮ್ ॥೨೯॥

ಸದಾ ಸನ್ನಿಹಿತೋ ಲಿಂಗೇ ವಸಾಮ್ಯತ್ರ ನ ಸಂಶಯಃ ।
ಭಕ್ತಾನಾಂ ಪೂರಯನ್ ಕಾಮಾನ್ ಕಾಮಪೂರೋಽಸ್ಮಿ ಕಾಮಿನಾಮ್ ॥೩೦॥

ಅತಏವ ತ್ರಿಲೋಕ್ಯಾಂ ಹಿ ಮಮ ಕ್ಷೇತ್ರಾಣಿ ಭೂರಿಶಃ ।
ಮಮ ಕ್ಷೇತ್ರಾರ್ಧಭಾಗೇನ ವಿಷ್ಣುಕ್ಷೇತ್ರಾಣಿ ಸರ್ವತಃ ॥೩೧॥

ಯೋಽಸ್ಮಿನ್ನನ್ನಗಿರಿಕ್ಷೇತ್ರೇ ಸಮಂತಾದ್ಯೋಜನಾನ್ವಿತೇ ।
ತಿಷ್ಠಂತಿ ಪೂಜಯಂತೋ ಮಾಮಮೃತೇಶ್ವರಸಂಜ್ಞಿತಮ್ ॥೩೨॥

ತೇಭ್ಯೋ ಭುಕ್ತಿಂ ಚ ಮುಕ್ತಿಂ ಚ ಪ್ರಯಚ್ಛಾಮಿ ನ ಸಂಶಯಃ ।
ಅತ್ರ ಸ್ಥಿತ್ವಾ ಮಮ ಕ್ಷೇತ್ರೇ ಮಹ್ಯಂ ದ್ರುಹ್ಯಂತಿ ಮಾನವಾಃ ॥೩೩॥

ಕುರ್ವಂತಿ ವೃತ್ತಿಚ್ಛೇದಂ ವಾ ತೇಷಾಂ ವಂಶಕ್ಷಯೋ ಭವೇತ್ ।
ಯೇ ನೃಪಾ ಮಮ ಪೂಜಾರ್ಥಂ ವೃತ್ತಿಂ ದಾಸ್ಯಂತಿ ಭಕ್ತಿತಃ ॥೩೪॥

ಬ್ರಾಹ್ಮಣೇಭ್ಯಶ್ಚ ಮತ್ಪ್ರೀತ್ಯೈ ತೇಷಾಂ ವಂಶಃ ಸ್ಥಿರೋ ಭವೇತ್ ।
ಯೇ ಕುರ್ವಂತಿ ಮಮ ಪ್ರೀತ್ಯೈ ಪ್ರತ್ಯಬ್ದೇ ಸ್ಯಂದನೋತ್ಸವಮ್ ॥೩೫॥

ತಸ್ಮೈ ಭಕ್ತಾಯ ದಾಸ್ಯಾಮಿ ಮಮ ಸಾಯುಜ್ಯಮಂತತಃ ।
ಇತಿ ಶ್ರುತ್ವಾ ಶಿವವಚೋ ಹರಿಬ್ರಹ್ಮಾದಯಃ ಸುರಾಃ ॥೩೬॥

ತನ್ನ ಧರ್ಮಪತ್ನಿಯಾದ ಸರಸ್ವತೀ ದೇವಿಯೊಂದಿಗೆ ಸ್ವಸ್ತಿವಾಚನ ಪುರಃಸರ ಪತಾಕೆಗಳಿಂದ ಅಲಂಕರಿಸಿದ್ದ ಮಂಟಪವನ್ನು ಪೂಜಿಸಿದನು ॥೨೪॥

ನಂತರ ವಿಧ್ಯುಕ್ತವಾಗಿ ಹೋಮ, ಬಲಿದಾನ ಹೋಮಶೇಷದಿಂದ ಸಂಗ್ರಹಿಸಿದ ಸಂಪಾತಾಜ್ಯದ ಧಾರಣೆ, ರುದ್ರಸೂಕ್ತದಿಂದ ಅಭಿಷೇಕ ಇವುಗಳನ್ನು ಮಾಡಿದನು. ॥೨೫॥

ಎಲ್ಲರಿಗೂ ಅಪೇಕ್ಷಿತವಾದದ್ದನ್ನು ಮಾಡುವ ಬ್ರಹ್ಮದೇವನು ಸಂಕಲ್ಪ ಮಾತ್ರದಿಂದಲೇ ಸಿದ್ಧವಾದ ಅನ್ನದ ಪರ್ವತಗಳನ್ನು ಅನ್ನ ಸಂತರ್ಪಣೆಗೋಸ್ಕರ ರಚಿಸಿದನು ॥೨೬॥

ಆ ಕ್ಷೇತ್ರದಲ್ಲಿ ಅನ್ನಗಳು ಪರ್ವತದಂತೆ ಇದ್ದಕಾರಣ ಕ್ಷೇತ್ರವು 'ಅನ್ನಗಿರಿ' ಎಂದೇ ಪ್ರಸಿದ್ಧವಾಯಿತು 'ಅಮೃತೇಶ್ವರ–ಅನ್ನಗಿರಿ' ಎಂಬ ಎರಡೂ ಹೆಸರುಗಳು ಅನ್ವರ್ಥವೇ ಆದವು ॥೨೭॥

ವಿಧಿವತ್ತಾಗಿ ಶಿವಲಿಂಗ ಪ್ರತಿಷ್ಠೆಯು ನೆರವೇರಿದ ನಂತರ ಅಮೃತೇಶ್ವರನು ಮೇಘದ ಗುಡುಗಿನಂತೆ ಗಂಭೀರವಾಗಿ ನುಡಿದನು ॥೨೮॥

**ಅಮೃತೇಶ್ವರನು ಹೇಳಿದನು –**

ಬ್ರಹ್ಮ ನಾರಾಯಣರೇ! ದೇವತೆಗಳೇ! ಮುನಿಗಳೇ! ಸಕಲ ಲೋಕಗಳಿಗೂ ಉಪಕಾರಕವಾದ ನನ್ನ ಮಾತನ್ನು ನೀವೆಲ್ಲ ಕೇಳಿರಿ ॥೨೯॥

ಸರ್ವದಾ ನಾನೀ ಲಿಂಗದಲ್ಲಿಯೇ ಸಾನ್ನಿಧ್ಯವಿರಿಸಿ ನೆಲೆಸುತ್ತೇನೆ ಇದರಲ್ಲಾವ ಸಂಶಯವೂ ಬೇಡ. ನಾನು ಭಕ್ತರ ಕೋರಿಕೆಗಳೆಲ್ಲವನ್ನೂ ಈಡೇರಿಸುತ್ತೇನೆ ॥೩೦॥

ಆದ್ದರಿಂದಲೇ ನನ್ನ ಕ್ಷೇತ್ರಗಳು ಮೂರು ಲೋಕಗಳಲ್ಲೂ ವ್ಯಾಪಿಸಿವೆ ನನ್ನ ಕ್ಷೇತ್ರದ ಅರ್ಧದಷ್ಟು ಮಾತ್ರ ವಿಷ್ಣುಕ್ಷೇತ್ರಗಳು ಇವೆ ॥೩೧॥

ಸುತ್ತಮುತ್ತಲೂ ಯೋಜನದಷ್ಟು ವಿಸ್ತಾರವಾದ ಈ ಅನ್ನಗಿರಿ ಕ್ಷೇತ್ರದಲ್ಲಿ (ಅಣ್ಣಿಗೇರಿ) ನೆಲಸಿ 'ಅಮೃತೇಶ್ವರ'ನೆಂಬ ಹೆಸರಿನ ನನ್ನನ್ನು ಅನವರತ ಪೂಜಿಸುವ ಭಕ್ತ ಜನರಿಗೆ ನಿಃಸಂಶಯವಾಗಿ ಭುಕ್ತಿಮುಕ್ತಿಗಳನ್ನು ನೀಡುತ್ತೇನೆ.

ಈ ನನ್ನ ಕ್ಷೇತ್ರದಲ್ಲಿ ನೆಲಸಿ ನನ್ನನ್ನು ದ್ವೇಷಿಸುತ್ತ, ವೃತ್ತಿಗಳನ್ನು ಧ್ವಂಸ ಗೊಳಿಸುವ ಮನುಜರ ವಂಶವು ಕ್ಷಯ ಹೊಂದುತ್ತದೆ. ನನ್ನ ಸಂತೋಷಕ್ಕಾಗಿ ಬ್ರಾಹ್ಮಣರಿಗೆ ವೃತ್ತಿಗಳನ್ನು ಭಕ್ತಿಯಿಂದ ದಾನ ಮಾಡುವ ರಾಜರ ವಂಶವು ಸ್ಥಿರವಾಗುವದು ನನ್ನ ಸಂತೋಷಕ್ಕಾಗಿ ಪ್ರತಿವರ್ಷ ರಥೋತ್ಸವ ನಡೆಸುವ ಭಕ್ತನಿಗೆ ಅಂತ್ಯಕಾಲದಲ್ಲಿ ನನ್ನ ಸಾಯುಜ್ಯವನ್ನು ನೀಡುವೆ ಪರಶಿವನ ಈ ಮಾತನ್ನು ಕೇಳಿದ ವಿಷ್ಣುಬ್ರಹ್ಮ ಮೊದಲಾದ ದೇವತೆಗಳೂ, ಮಹಾನುಭಾವರಾದ ಮಹರ್ಷಿಗಳೂ ಅಮೃತೇಶ್ವರನನ್ನು ಸ್ತುತಿಸಿದರು. ॥೩೨–೩೬॥

ಋಷಯಶ್ಚ ಮಹಾಭಾಗಾ ಅಮೃತೇಶ್ವರಮಸ್ತುವನ್ ।

ನಮಃ ಶಿವಾಯ ಶಂಭವೇ ಶಶಾಂಕಭಿತ್ತಮೌಲಯೇ
ಕೃಪೀಟಯೋನಿವಾಸರೇಶಶೀತಧಾಮಚಕ್ಷುಷೇ ।
ಪ್ರಚಂಡಕುಂಡಲೀಶಕರ್ಣಯುಗ್ಮಕುಂಡಲಾಯ ತೇ
ನಮೋಽಮೃತೇಶ್ವರಾಯ ಚಿತ್ಸುಖಾಮೃತಾಬ್ಧಯೇ ನಮಃ ॥೩೭॥

ನಮೋ ಹಿರಣ್ಯಬಾಹವೇ ಹಿರಣ್ಯಶೈಲಧನ್ವನೇ
ಹಿರಣ್ಯಗರ್ಭಮಾಧವಾದಿದೇವವಂದಿತಾಂಘ್ರಯೇ ।
ಧರಣ್ಯಬಗ್ನಿವಾಯುಖಾರ್ಕಸೋಮಯಜ್ವಮೂರ್ತಯೇ
ನಮೋಽಮೃತೇಶ್ವರಾಯ ಚಿತ್ಸುಖಾಮೃತಾಬ್ಧಯೇ ನಮಃ ॥೩೮॥

ನಮೋಽಂಬಿಕಾಧವಾಯ ದಗ್ಧಶಂಬರಾರಿವರ್ಷ್ಮಣೇ
ಭವಾಯ ಸರ್ವವೇದರಾಶಿವೇದ್ಯವೈಭವಾಯ ತೇ ।
ಭವಾಂತಕಾಯ ಭಾವಿತಾಯ ಯೋಗಿಭಿರ್ಹೃದಂಬುಜೇ
ನಮೋಽಮೃತೇಶ್ವರಾಯ ಚಿತ್ಸುಖಾಮೃತಾಬ್ಧಯೇ ನಮಃ ॥೩೯॥

ಇತಿ ಸ್ತುತ್ವಾ ಮಹಾದೇವಂ ಬ್ರಹ್ಮಾದ್ಯಾ ಅಮೃತೇಶ್ವರಮ್ ।
ಸಾಷ್ಟಾಂಗಂ ಪ್ರಣಿಪತ್ಯಾಗ್ರೇ ತಸ್ಥುಃ ಪ್ರಾಂಜಲಯೋಽಗ್ರತಃ ॥೪೦॥

ಅಮೃತೇಶ್ವರ ಉವಾಚ –

ಯೌಷ್ಮಾಕೀಣಮಿದಂ ಸ್ತೋತ್ರಂ ತ್ರಿಸಂಧ್ಯಂ ಯೇ ದ್ವಿಜೋತ್ತಮಾಃ ।
ಪಠಿಷ್ಯಂತಿ ಸದಾ ತೇಷಾಂ ಸುಲಭಾಃ ಸರ್ವಸಿದ್ಧಯಃ ॥೪೧॥

ಅಸ್ಮಿನ್ ಕ್ಷೇತ್ರೇ ಭವಿಷ್ಯಂತಿ ಪ್ರತ್ಯಬ್ದಂ ಸಸ್ಯಸಂಪದಃ ।
ಗಾವಃ ಸರ್ವಾ ಬಹುಕ್ಷೀರಾ ವರ್ಷಾಶ್ಚ ಬಲವತ್ತರಾಃ ॥೪೨॥

ದೇವಬ್ರಾಹ್ಮಣವೃತ್ತಿಘ್ನಾನಧರ್ಮನಿರತಾನ್ ಬಲಾತ್ ।
ಅಸ್ಮಿನ್ ಕ್ಷೇತ್ರೇ ಸ್ಥಿತಾನ್ ಸರ್ವಾನ್ ನಾಶಯಿಷ್ಯಾಮಿ ತಾನಹಮ್॥೪೩॥

ದೇವಬ್ರಾಹ್ಮಣವೃತ್ತೀನಾಂ ಪಾಲಕಾನ್ ಧರ್ಮತತ್ಪರಾನ್ ।
ಸಜ್ಜನಾನ್ ಪಾಲಯಿಷ್ಯಾಮಿ ಪ್ರತಿಜಾನೇ ತ್ರಿರುಚ್ಚಕೈಃ ॥೪೪॥

ಕಾಮಧೇನವ ಊಚುಃ –

ಅಸ್ಮಾಕಂ ತನಯಃ ಶಂಭೋ! ಶಕ್ವರಸ್ತವ ವಾಹನಮ್ ।
ಅಸ್ಮಿನ್ನಭಿಹಿತೇ ಶೈಲೇ ಪೂಜಾಮಾಪ್ನೋತು ಶಾಶ್ವತೀಮ್ ॥೪೫॥

ಮುಕುಟದಲ್ಲಿ ಅರ್ಧಚಂದ್ರನನ್ನು ಧರಿಸಿದ ಶಂಭೋ! ವರಶಿವ! ನಿನಗೆ ನಮಸ್ಕಾರ ಅಗ್ನಿ–ಸೂರ್ಯ–ಚಂದ್ರರನ್ನೇ ಕಣ್ಣುಗಳನ್ನಾಗಿ ಮಾಡಿಕೊಂಡ ನೀನು ಕರ್ಣಗಳಲ್ಲಿ ಮಹಾಸರ್ಪವನ್ನು ಕುಂಡಲದಂತೆ ಧರಿಸಿರುವಿ ಚಿತ್ಸುಖಾಮೃತಸಾಗರನಾದ ಅಮೃತೇಶ್ವರ! ನಿನಗೆ ನಮಸ್ಕಾರ. ||೩೭||

ಬಂಗಾರದ ಬಾಹುಗಳುಳ್ಳ, ಬಂಗಾರದ ಗಿರಿಯನ್ನೇ ಧನುಸ್ಸನ್ನಾಗಿ ಮಾಡಿಕೊಂಡಿರುವ ಪರಮೇಶ್ವರ! ನಿನ್ನ ಅಡಿದಾವರೆಗೆ ಬ್ರಹ್ಮವಿಷ್ಣು ಮೊದಲಾದವರು ವಂದಿಸುತ್ತಾರೆ ಪೃಥಿವ್ಯಾದಿ ಅಷ್ಟವಸ್ತುಗಳೇ ಅಂದರೆ (ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ ಮತ್ತು ಸೋಮಯಾಜಿ) ಇವೇ ನಿನ್ನ ಎಂಟು ಶರೀರಗಳು ಪ್ರಭೋ! ಅಮೃತೇಶ್ವರ! ಚಿತ್ಸುಖಾಮೃತಸಾಗರನಾದ ನಿನಗೆ ನಮಸ್ಕಾರ. ||೩೮||

ಅಂಬಿಕಾಪತಿಯಾದ, ತನ್ನ ನೇತ್ರಾಗ್ನಿಯಿಂದ ಕಾಮನನ್ನು ದಗ್ಧಗೊಳಿಸಿದ ಶಂಕರ! ನಿನಗೆ ನಮಸ್ಕಾರ. ಸರ್ವವೇದಗೋಚರ ವೈಭವವುಳ್ಳ ನಿನ್ನನ್ನು ಮುನಿವರ್ಯರು ತಮ್ಮ ಹೃತ್ಕಮಲದಲ್ಲಿ ನೆನೆಸುತ್ತಾರೆ ಅಮೃತೇಶ್ವರ ಚಿತ್ಸುಖಾಮೃತ ಸಾಗರನಾದ ನಿನಗೆ ನಮಸ್ಕಾರ ||೩೯||

ಈ ರೀತಿ ಅಮೃತೇಶ್ವರನನ್ನು ಸ್ತುತಿಸಿ, ಸಾಷ್ಟಾಂಗ ನಮಿಸಿದ ಬ್ರಹ್ಮಾದಿ ದೇವತೆಗಳು ಅಮೃತೇಶ್ವರನ ಎದುರು ಕೈಮುಗಿದು ನಿಂತರು ||೪೦||

**ಅಮೃತೇಶ್ವರನು ಹೇಳಿದನು –**

ನೀವು ಹೇಳಿದ ಈ ಸ್ತೋತ್ರವನ್ನು ತ್ರಿಕಾಲವೂ ಪಠಿಸುವ ದ್ವಿಜೋತ್ತಮರಿಗೆ ಸಕಲ ಸಿದ್ಧಿಗಳೂ ಸುಲಭವಾಗಿ ಕರಗತವಾಗುತ್ತವೆ ||೪೧||

ಈ ಅನ್ನಗಿರಿ ಕ್ಷೇತ್ರದಲ್ಲಿ ಪ್ರತಿವರ್ಷವೂ ಸುವೃಷ್ಟಿಯಾಗಿ ಸಸ್ಯ ಸಂಪತ್ತು ಸಮೃದ್ಧವಾಗಿರುತ್ತದೆ ಎಲ್ಲ ಹಸುಗಳೂ ವಿಪುಲವಾಗಿ ಕ್ಷೀರವನ್ನು ಕೊಡುತ್ತವೆ ಮಳೆಯೂ ಚೆನ್ನಾಗಿ ಆಗುತ್ತದೆ. ||೪೨||

ಈ ಕ್ಷೇತ್ರದಲ್ಲಿ ದೇವಬ್ರಾಹ್ಮಣರ ವೃತ್ತಿಗಳನ್ನು ಹಾಳು ಮಾಡುವ ಹಾಗೂ ಹಠದಿಂದ ಅಧರ್ಮವನ್ನೇ ಆಚರಿಸುವ ಎಲ್ಲರನ್ನೂ ನಾನು ನಾಶಗೊಳಿಸುತ್ತೇನೆ ||೪೩||

ದೇವಬ್ರಾಹ್ಮಣರ ವೃತ್ತಿಗಳನ್ನು ಸಂರಕ್ಷಿಸುವ, ಧಾರ್ಮಿಕರಾದ ಸಜ್ಜನರನ್ನು ಸಂರಕ್ಷಿಸುವೆನೆಂದು ಮೂರುಬಾರಿ ಪ್ರತಿಜ್ಞೆ ಮಾಡಿ ಹೇಳುತ್ತೇನೆ ||೪೪||

**ಕಾಮಧೇನುಗಳು ಹೇಳಿದವು –**

ವರಶಿವ! ನಿನ್ನ ವಾಹನವಾದ ನಮ್ಮ ತನಯ (ಶಕ್ವರ) ನಂದಿಯು ಈ ಗಿರಿಶಿಖರದಲ್ಲಿ ಸರ್ವದಾ ಪೂಜೆಗೊಳ್ಳಲಿ. ||೪೫||

ಯಾಭಿರಿತ್ಯರ್ಥಿತಂ ತಾಭ್ಯೋ ವರಂ ದತ್ವಾಽಮೃತೇಶ್ವರಃ ।
ಪಶ್ಯತಾಂ ಸರ್ವದೇವಾನಾಂ ತಲ್ಲಿಂಗೇಂಽತರ್ದಧೇ ಹರಃ ॥೪೬॥

ತತೋ ವಿಧಿರುಪಾಕ್ರಾಂತಂ ವಿಧಿಪೂರ್ವಂ ಮಹಾಕ್ರತುಮ್ ।
ವಿಧಾಯ ವಿವಿಧೋತ್ಸಾಹಂ ಸತ್ಯಲೋಕಂ ಜಗಾಮ ಹ ॥೪೭॥

ದೇವಾಶ್ಚ ದೇವಋಷಯೋ ಗಂಧರ್ವಾಪ್ಸರಸಸ್ತಥಾ ।
ಯಥಾಗತಂ ಯಯುಃ ಸರ್ವೇ ವರ್ಣಯಂತೋಽಮೃತೇಶ್ವರಮ್ ॥೪೮॥

ಅಮೃತೇಶ್ವರಮಾಹಾತ್ಮ್ಯಮಿತ್ಯೇತತ್ಕಥಿತಂ ಮಯಾ ।
ಭವತ್ಸು ಪುಣ್ಯಶೀಲೇಷು ಕಿಂ ಭೂಯಃ ಶ್ರೋತುಮಿಚ್ಛಥ ॥೪೯॥

ಇತಿ ಶ್ರೀಭವಿಷ್ಯೋತ್ತರಪುರಾಣೇ ಉತ್ತರಖಂಡೇ
ಕ್ರತುಪುರಮಾಹಾತ್ಮ್ಯೇ
ಅಮೃತೇಶ್ವರವರ್ಣನಂ ನಾಮ ಷೋಡಶೋಽಧ್ಯಾಯಃ

ಅಮೃತೇಶ್ವರನು ಕಾಮಧೇನುಗಳು ಕೇಳಿದ ವರವನ್ನು ನೀಡಿ ಎಲ್ಲ ದೇವತೆಗಳು ನೋಡುತ್ತಿರುವಂತೆಯೇ ಆ ಲಿಂಗದಲ್ಲಿ ಅಂತರ್ಧಾನನಾದನು. ||೪೬||

ಅನಂತರ ಬ್ರಹ್ಮದೇವನು ವಿಧಿವತ್ತಾಗಿ ತಾನು ಪ್ರಾರಂಭಿಸಿದ ಮಹಾಯಾಗವನ್ನು ಅಮಿತೋತ್ಸಾಹದಿಂದ ನಡೆಸಿ ಸತ್ಯಲೋಕಕ್ಕೆ ತೆರಳಿದನು ||೪೭||

ದೇವತೆಗಳು, ದೇವರ್ಷಿಗಳು, ಗಂಧರ್ವರು, ಅಪ್ಸರಃ ಸ್ತ್ರೀಯರು ವಿದ್ಯಾಧರರು ಮೊದಲಾದವರು ಅಮೃತೇಶ್ವರನನ್ನು ಹೊಗಳಿ ಹಾಡುತ್ತ ತಾವು ಬಂದಂತೆಯೇ ಹಿಂತಿರುಗಿದರು ||೪೮||

ಮುನಿಗಳೇ! ಅದ್ಭುತವಾದ ಅಮೃತೇಶ್ವರನ ಈ ಮಹಿಮೆಯನ್ನು ಪುಣ್ಯಶಾಲಿಗಳಾದ ನಿಮಗೀಗ ತಿಳಿಸಿದೆ ಮತ್ತೇನನ್ನು ಕೇಳಲಿಚ್ಛಿಸುವಿರಿ? ||೪೯||

ಭವಿಷ್ಯೋತ್ತರ ಪುರಾಣದ ಉತ್ತರಖಂಡದಲ್ಲಿನ
ಕ್ರತುಪುರಮಹಾತ್ಮೆಯಲ್ಲಿ
ಅಮೃತೇಶ್ವರ ವರ್ಣನೆಯೆಂಬ ಹದಿನಾರನೆಯ ಅಧ್ಯಾಯವು ಮುಗಿಯಿತು.

# ಅಥ ಸಪ್ತದಶೋಽಧ್ಯಾಯಃ

**ಋಷಯ ಊಚುಃ –**

ಅಮೃತೇಶ್ವರಮಾಹಾತ್ಮ್ಯಂ ಶ್ರೋತುಮಿಚ್ಛಾಮಹೇ ಪುನಃ ।
ಅಮೃತಂ ಪಿಬತಃ ಕಸ್ಯ ತೃಪ್ತಿರ್ಭವತಿ ಸೂತಜ! ॥೧॥

ಕಥಯಸ್ವ ಕಥಾಂ ಪುಣ್ಯಾಮಮೃತೇಶಪ್ರಸಂಗಜಾಮ್ ।
ಅಸ್ಮಾಕಂ ಮಿಲಿತೋಽಸಿ ತ್ವಂ ದಿಷ್ಟ್ಯಾ ಪೌರಾಣಿಕೋತ್ತಮಃ ॥೨॥

**ಸೂತ ಉವಾಚ –**

ಶೃಣುಧ್ವಮಮೃತೇಶಸ್ಯ ಮಾಹಾತ್ಮ್ಯಮೃಷಿಸತ್ತಮಾಃ! ।
ಸಂಪಾದಯೇತ ತತ್ಪ್ರಾಪ್ತಿಂ ಶ್ರೋತೄಣಾಂ ಕೋ ಭವಾದೃಶಾಮ್॥೩॥

ಯದಾ ಪಂಚ ಸುತಾಃ ಪಾಂಡೋರ್ವನವಾಸಮಕುರ್ವತ ।
ಋಷಿಭಿರ್ಬಹುಸಾಹಸ್ರೈರ್ವೃತಾ ಧರ್ಮಪರಾಯಣೈಃ ॥೪॥

ನಿರೀಕ್ಷಮಾಣಾಃ ಕ್ಷೇತ್ರಾಣಿ ತೀರ್ಥಾನಿ ಚ ತತಸ್ತತಃ ।
ಕೃಷ್ಣಾಯಾ ದಕ್ಷಿಣೇ ಕೂಲೇ ಯಾನಿ ಯಾನಿ ವಿಶೇಷತಃ ॥೫॥

ತೇ ಕ್ರಮೇಣೈವ ಸಂಪ್ರಾಪ್ತಾಃ ಕ್ಷೇತ್ರಂ ಸಿದ್ಧಿಪ್ರದಂ ಭುವಿ ।
ಋಷಿಭಿಃ ಸಹಿತಾ ವೀರಾಸ್ತದನ್ನಗಿರಿಸಂಜ್ಞಿತಮ್ ॥೬॥

ಮಧ್ಯಾಹ್ನಾರ್ಕನಿದಾಘಾರ್ತಾಃ ಕ್ಷುಧಿತಾಶ್ಚ ಪಿಪಾಸಿತಾಃ ।
ಅಮೃತೇಶ್ವರಮಾಸಾದ್ಯ ಪ್ರಣೇಮುರ್ದಂಡವದ್ಭುವಿ ॥೭॥

ದ್ರೌಪದೀ ಚ ಮಹಾಭಾಗಾ ಪ್ರಣನಾಮಾಮೃತೇಶ್ವರಮ್ ।
ಪ್ರಣಮ್ಯ ಸಾ ಶಿವಂ ಕಿಂಚಿನ್ಮನಸಾಽಚಿಂತಯತ್ಸತೀ ॥೮॥

ದ್ರೌಪದ್ಯಾ ಚಿಂತಿತಂ ಜ್ಞಾತ್ವಾ ಸರ್ವಾತ್ಮಾ ಪರಮೇಶ್ವರಃ ।
ಧೇನೂಃ ಸಂಚೋದಯಾಮಾಸ ತೇಷಾಮಾತಿಥ್ಯಕರ್ಮಣಿ ॥೯॥

ಕ್ಷಣಾತ್ತತ್ರಾಗತಾಃ ಪಂಚ ಧೇನವಃ ಕಾಮಿತಾರ್ಥದಾಃ ।
ಅಸೃಜನ್ನನ್ನಪಾನಾನಿ ಸ್ವಾದೂನಿ ರಸವಂತಿ ಚ ॥೧೦॥

ದಧಿಕುಲ್ಯಾ ದುಗ್ಧಕುಲ್ಯಾ ಘೃತಕುಲ್ಯಾಶ್ಚ ಸರ್ವತಃ ।
ವೃಕ್ಷಾಂಶ್ಚ ಶೀತಲಚ್ಛಾಯಾನ್ನಿರ್ಮಮುಶ್ಚ ಜನಾಶ್ರಯಾನ್ ॥೧೧॥

